# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1350
2. ಸದಸ್ಯರ ಹೆಸರು : ಶ್ರೀ ಸುಬ್ಬಾರೆಡ್ಡಿ ಎಸ್.ಎನ್ (ಬಾಗೇಪಲ್ಲಿ)
3. ಉತ್ತರಿಸಬೇಕಾದ ದಿನಾಂಕ : 22.02.2022
4. ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಜಲ ಸಂಪನ್ಮೂಲ ಇಲಾಖೆಯ ವತಿಯಿಂದ 2020-21ನೇ ಸಾಲಿನಲ್ಲಿ ಬಾಗೇಪಲ್ಲಿ ಕ್ಷೇತ್ರಕ್ಕೆ ಯಾವ ಯಾವ ಲೆಕ್ಕಶೀರ್ಷಿಕೆಗಳಡಿಯಲ್ಲಿ ಅನುದಾನ ಮಂಜೂರು ಮಾಡಲಾಗಿದೆ; | ಜಲಸಂಪನ್ಮೂಲ ಇಲಾಖೆಗೆ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆವಾರು ಅನುದಾನ ಹಂಚಿಕೆ ಮಾಡಲಾಗುತ್ತಿದ್ದು ಅದರನುಸಾರ ನಿಗಮಗಳಲ್ಲಿ ಅನುದಾನವನ್ನು ವಲಯವಾರು/ ಯೋಜನಾವಾರು ಕಾಮಗಾರಿಯ ಹಂತ ಮತ್ತು ಆದ್ಯತೆ ಅನುಸಾರ ಅನುದಾನ ಹಂಚಿಕೆ ಮಾಡಲಾಗುತ್ತಿದೆ. |
| ಆ) | ಈ ಅನುದಾನದ ಕಾಮಗಾರಿಗಳಿಗೆ ಶಾಸಕರಿಂದ ಕ್ರಿಯಾ ಯೋಜನೆಯನ್ನು ಪಡೆಯಲಾಗಿದೆ; | 2019-20 ನೇ ಸಾಲಿನ ಆಯವ್ಯಯದಲ್ಲಿ ರೂ.20.00 ಕೋಟಿ ಮೊತ್ತದಲ್ಲಿ ಬಾಗೇಪಲ್ಲಿ ತಾಲ್ಲೂಕು ಪಾತಪಾಳ್ಯ ಹೋಬಳಿಯ ಬಳಿ ಘಂಟಲಮಲ್ಲಮ್ಮನ ಕಣಿವೆಗೆ ಅಡ್ಡಲಾಗಿ ಹಳ್ಳಕ್ಕೆ ಬ್ಯಾರೇಜ್ ನಿರ್ಮಾಣ ಮಾಡುವ ಕಾಮಗಾರಿಗಾಗಿ ಅನುದಾನ ಘೋಷಣೆಯಾಗಿರುತ್ತದೆ. ಇದಕ್ಕೆ ಸಂಬಂಧಿಸಿದಂತೆ, ಡಿ.ಪಿ.ಆರ್/ಅಂದಾಜು ಪಟ್ಟಿಯು ನಿಗಮದ ಹಂತದಲ್ಲಿ ಪರಿಶೀಲನೆಯಲ್ಲಿದೆ. |
| ಇ) | ಈ ಯೋಜನೆಯ ಕಾಮಗಾರಿಗಳಿಗೆ ಅಂದಾಜು ಪಟ್ಟಿಯನ್ನು ತಯಾರು ಮಾಡಲಾಗಿದೆಯೇ; | |
| ಈ) | ಈ ಕಾಮಗಾರಿಗೆ ಟೆಂಡರ್ ಕರೆದು ಪ್ರಸಕ್ತ ಸಾಲಿನಲ್ಲಿಯೇ ಕಾಮಗಾರಿಯನ್ನು ಪೂರ್ಣಗೊಳಿಸಲಾಗುವುದೇ? (ವಿವರ ನೀಡುವುದು) | ಮುಂದುವರೆದು, 2019-20 ನೇ ಸಾಲಿನ ಆಯವ್ಯಯದಲ್ಲಿ ರೂ.100.00 ಕೋಟಿ ಮೊತ್ತದಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆಯ ತಾಲ್ಲೂಕುಗಳ ವ್ಯಾಪ್ತಿಯಲ್ಲಿನ ಸಣ್ಣ ನೀರಾವರಿ ಕೆರೆಗಳ ಸಮಗ್ರ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಘೋಷಣೆ ಮಾಡಲಾಗಿರುತ್ತದೆ. ಇದರಡಿ ಬಾಗೇಪಲ್ಲಿ ತಾಲ್ಲೂಕಿನಡಿಯ ಸಣ್ಣ ನೀರಾವರಿ ಕೆರೆಗಳು ಸಹಾ ಒಳಗೊಂಡಿರುತ್ತವೆ. ಸದರಿ ಕೆರೆಗಳ ಅಭಿವೃದ್ಧಿ ಕಾಮಗಾರಿಯ ಅಂದಾಜು ಪಟ್ಟಿಯು ನಿಗಮದ ಹಂತದಲ್ಲಿ ಪರಿಶೀಲನೆಯಲ್ಲಿದೆ. |

**ಸಂಖ್ಯೆ: ಜಸಂಇ 14 ಡಬ್ಲ್ಯೂಎಲ್ಎ 2022**

**(ಗೋವಿಂದ ಎಂ. ಕಾರಜೋಳ)**
**ಜಲಸಂಪನ್ಮೂಲ ಸಚಿವರು**

## ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 10
2. ಸದಸ್ಯರ ಹೆಸರು : ಶ್ರೀ ರವಿ.ಸಿ.ಟಿ.
3. ಉತ್ತರಿಸಬೇಕಾದ ದಿನಾಂಕ : 15-02-2022
4. ಉತ್ತರಿಸುವವರು : ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು.

<table>
<tr><th>ಕ್ರ. ಸಂ</th><th>ಪ್ರಶ್ನೆಗಳು</th><th>ಉತ್ತರಗಳು</th></tr>
<tr><td>ಅ</td><td>ಕಳೆದ ಮೂರು ವರ್ಷಗಳಿಂದ ಚಿಕ್ಕಮಗಳೂರು ವಿಧಾನ ಸಭಾ ಕ್ಷೇತ್ರದಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡದ ರೈತರಿಗೆ ಸಣ್ಣ ನೀರಾವರಿ ಇಲಾಖೆ ವತಿಯಿಂದ ಕೊಳವೆ ಬಾವಿ ಕೊರೆಸಲು ಎಷ್ಟು ಫಲಾನುಭವಿಗಳನ್ನು ಆಯ್ಕೆ ಮಾಡಲಾಗಿದೆ; (ಗ್ರಾಮವಾರು ವಿವರ ನೀಡುವುದು)</td><td>ಕಳೆದ ಮೂರು ವರ್ಷಗಳಿಂದ ಚಿಕ್ಕಮಗಳೂರು ವಿಧಾನ ಸಭಾ ಕ್ಷೇತ್ರದಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡದ ರೈತರಿಗೆ ಸಣ್ಣ ನೀರಾವರಿ ವತಿಯಿಂದ ಲೆಕ್ಕ ಶೀರ್ಷಿಕೆ ವಿಶೇಷ ಘಟಕ ಯೋಜನೆ ಅಡಿ ಒಂದು ಕೊಳವೆ ಬಾವಿ ಕಾಮಗಾರಿ ಅನುಮೋದನೆಯಾಗಿದ್ದು, ವಿವರ ಕೆಳಕಂಡಂತಿದೆ:<br><br><table><tr><th>ವರ್ಷ</th><th>ಕಾಮಗಾರಿ ಹೆಸರು</th><th>ಅಂದಾಜು ಮೊತ್ತ</th><th>ವೆಚ್ಚ</th></tr><tr><td>2018-19</td><td>ಹಾಸನ ಜಿಲ್ಲೆ, ಕಡೂರು ತಾ: ಗುಣಸಾರ ಗ್ರಾಮದ ಸ.ನಂ. 32/2ಪಿ3- ಶ್ರೀಮತಿ ಮಾಯಮ್ಮ ಬಿನ್ ಬಿಲ್ಲಪ್ಪ ಇವರ ಜಮೀನಿನಲ್ಲಿ ಕೊಳವೆ ಬಾವಿ ಕೊರೆದು ನೀರಾವರಿ ಸೌಲಭ್ಯ ಒದಗಿಸುವುದು.</td><td>6.00</td><td>0.00</td></tr></table></td></tr>
<tr><td>ಆ</td><td>ಈ ಫಲಾನುಭವಿಗಳಿಗೆ ಕೊಳವೆ ಬಾವಿ ಕೊರೆಸಲು ಆದೇಶ ಪತ್ರ ನೀಡಲಾಗಿದೆಯೇ; ಇಲ್ಲದಿದ್ದಲ್ಲಿ, ಯಾವಾಗ ಆದೇಶ ಪತ್ರ ನೀಡಲಾಗುವುದು;</td><td rowspan="2">ಕೊಳವೆ ಬಾವಿ ಕೊರೆಯುವ ಕಾಮಗಾರಿಗೆ ಕರಾರು ಮಾಡಿಕೊಳ್ಳಲು ಗುತ್ತಿಗೆದಾರರಿಗೆ ಸೂಚನಾ ಪತ್ರ ನೀಡಲಾಗಿದ್ದು, ಕಾಮಗಾರಿಯನ್ನು ಕೈಗೊಳ್ಳಲಾಗುವುದು.</td></tr>
<tr><td>ಇ</td><td>ಆದೇಶ ಪತ್ರ ನೀಡಿದ್ದಲ್ಲಿ, ಕೊಳವೆ ಬಾವಿ ಕೊರೆಸುವ ಪ್ರಕ್ರಿಯೆ ಯಾವ ಹಂತದಲ್ಲಿದೆ; ಈವರೆಗೆ ಎಷ್ಟು ಕೊಳವೆ ಬಾವಿಗಳನ್ನು ಕೊರೆಸಲಾಗಿದೆ; ಬಾಕಿ ಇರುವ ಕೊಳವೆ ಬಾವಿಗಳನ್ನು ಯಾವಾಗ ಕೊರೆಸಲಾಗುವುದು?</td></tr>
</table>

**ಸಂಖ್ಯೆ:ಎಂಐಡಿ 03 ಎಲ್ಎಕ್ಯೂ 2022**

**(ಜೆ.ಸಿ.ಮಾಧುಸ್ವಾಮಿ)**
ಕಾನೂನು, ಸಂಸದೀಯ ವ್ಯವಹಾರಗಳು
ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 100
2. ಸದಸ್ಯರ ಹೆಸರು : ಶ್ರೀ ನಾಗೇಶ್ ಹೆಚ್ (ಮುಳಬಾಗಿಲು)
3. ಉತ್ತರಿಸಬೇಕಾದ ದಿನಾಂಕ : 15.02.2022
4. ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಎತ್ತಿನಹೊಳೆ ಯೋಜನೆಯ ಕಾಮಗಾರಿಯನ್ನು ಯಾವ ವರ್ಷದಲ್ಲಿ ಪ್ರಾರಂಭಿಸಲಾಗಿದೆ; | ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯನ್ನು 2013–14ನೇ ಸಾಲಿನಿಂದ ಹಂತ ಹಂತವಾಗಿ ಕೈಗೆತ್ತಿಕೊಳ್ಳಲಾಗಿದೆ. |
| ಆ) | ಈ ಯೋಜನೆಯನ್ನು ಎಷ್ಟು ಹಂತಗಳ ಕಾಮಗಾರಿಯನ್ನಾಗಿ ವಿಂಗಡಿಸಲಾಗಿದೆ ಹಾಗೂ ಪ್ರತಿ ಹಂತಕ್ಕೆ ಎಷ್ಟು ಅನುದಾನ ನಿಗದಿಪಡಿಸಲಾಗಿದೆ; | ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯನ್ನು 02 ಹಂತಗಳಲ್ಲಿ ಕೈಗೆತ್ತಿಕೊಳ್ಳಲಾಗಿದ್ದು, ಮೊದಲನೇ ಹಂತದಲ್ಲಿ ಏತ ಕಾಮಗಾರಿಗಳು ಮತ್ತು ವಿದ್ಯುತ್ ಕಾಮಗಾರಿಗಳನ್ನು ರೂ.4115.06 ಕೋಟಿ ಮೊತ್ತದಲ್ಲಿ ಕೈಗೆತ್ತಿಕೊಳ್ಳಲಾಗಿದೆ. ಉಳಿದ ಕಾಮಗಾರಿಗಳನ್ನು ಹಂತ–2 ರಡಿ ಕೈಗೆತ್ತಿಕೊಳ್ಳಲು ಯೋಜಿಸಲಾಗಿದ್ದು, ಇದರ ಪೈಕಿ, 260 ಕಿ.ಮೀ ಉದ್ದದ ಗುರುತ್ವ ಕಾಲುವೆ, ಭೈರಗೊಂಡ್ಲು ಜಲಾಶಯಕ್ಕಿಂತ ಮೊದಲು ಕವಲೊಡೆಯುವ ಫೀಡರ್ ಕಾಲುವೆಗಳು ಮತ್ತು ಭೈರಗೊಂಡ್ಲು ಜಲಾಶಯ ಕಾಮಗಾರಿಯನ್ನು ರೂ.12160.69 ಕೋಟಿ ಮೊತ್ತದಲ್ಲಿ ಕೈಗೆತ್ತಿಕೊಳ್ಳಲಾಗಿದೆ. ಉಳಿದಂತೆ ಭೈರಗೊಂಡ್ಲು ನಂತರದ ಲಿಫ್ಟ್, ಕೋಲಾರ & ಶ್ರೀನಿವಾಸಪುರ ಫೀಡರ್ ಕಾಲುವೆ ಕಾಮಗಾರಿಗಳನ್ನು ರೂ.4498.00 ಕೋಟಿ ಮೊತ್ತದಲ್ಲಿ ಕೈಗೆತ್ತಿಕೊಳ್ಳಲು ಯೋಜಿಸಲಾಗಿದೆ. |
| ಇ) | ಪ್ರಸ್ತುತ ಈ ಯೋಜನೆಯ ಕಾಮಗಾರಿ ಯಾವ ಹಂತದಲ್ಲಿದೆ ಹಾಗೂ ಕಾಮಗಾರಿಯನ್ನು ಯಾವಾಗ ಪೂರ್ಣಗೊಳಿಸಲಾಗುವುದು? (ಸಂಪೂರ್ಣ ವಿವರ ನೀಡುವುದು) | ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |

**ಸಂಖ್ಯೆ: ಜಸಂಇ 01 ಡಬ್ಲ್ಯೂಎಲ್ಎ 2022**

(ಗೋವಿಂದ ಎಂ ಕಾರಜೋಳ)
ಜಲಸಂಪನ್ಮೂಲ ಸಚಿವರು

**ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ನಾಗೇಶ್ ಹೆಚ್ (ಮುಳಬಾಗಿಲು) ಇವರು ಕೋರಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 100 ಕ್ಕೆ ಅನುಬಂಧ**

ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯನ್ನು 02 ಹಂತಗಳಲ್ಲಿ ಕೈಗೆತ್ತಿಕೊಳ್ಳಲಾಗಿದೆ. ಸದರಿ ಯೋಜನೆಯ ಪ್ರಸ್ತುತ ಹಂತದ ವಿವರಗಳು ಈ ಕೆಳಗಿನಂತಿವೆ:

✓ ಈ ಯೋಜನೆಯ ಮೊದಲನೇ ಹಂತದ ಲಿಫ್ಟ್ ಕಾಮಗಾರಿಗಳು ಹಾಗೂ ವಿದ್ಯುತ್ ಪೂರೈಕೆ ಕಾಮಗಾರಿಗಳು ಬಹುತೇಕ ಪೂರ್ಣಗೊಳ್ಳುವ ಹಂತದಲ್ಲಿವೆ.

✓ ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ಹಂತ-2 ರಡಿಯ 260 ಕಿ.ಮೀ ಉದ್ದದ ಗುರುತ್ವ ಕಾಲುವೆ, ಭೈರಗೊಂಡ್ಲು ಜಲಾಶಯದ ಕಾಮಗಾರಿ ಮತ್ತು ಭೈರಗೊಂಡ್ಲು ಜಲಾಶಯದ ವರೆಗಿನ ಫೀಡರ್ ಕಾಲುವೆ ಕಾಮಗಾರಿಗಳನ್ನು 2017-18 ರಿಂದ 2019-20 ರವರೆಗೆ ಹಂತ ಹಂತವಾಗಿ ಕೈಗೆತ್ತಿಕೊಂಡಿದ್ದು, ಗುರುತ್ವ ಕಾಲುವೆಯ ಸುಮಾರು 100 ಕಿ.ಮಿ ಉದ್ದದ ಕಾಲುವೆ ಕಾಮಗಾರಿಯು ಪೂರ್ಣಗೊಂಡಿದ್ದು, ಬಾಕಿ ಕಾಮಗಾರಿಗಳು ವಿವಿಧ ಹಂತದ ಪ್ರಗತಿಯಲ್ಲಿವೆ.

✓ ಭೈರಗೊಂಡ್ಲು ಜಲಾಶಯಕ್ಕಿಂತ ಮೊದಲು ಕವಲೊಡೆಯುವ ಬೆಂಗಳೂರು ಗ್ರಾಮಾಂತರ ಜಿಲ್ಲೆ ಮತ್ತು ರಾಮನಗರ ಜಿಲ್ಲೆಗಳಿಗೆ ಕುಡಿಯುವ ನೀರನ್ನು ಒದಗಿಸುವ ಹಾಗೂ ನೆಲಮಂಗಲ ತಾಲ್ಲೂಕಿನ 2 ಕೆರೆಗಳನ್ನು ತುಂಬಿಸುವ ರಾಮನಗರ ಫೀಡರ್ ಕಾಲುವೆ ಕಾಮಗಾರಿ, ತುಮಕೂರು, ಕೊರಟಗೆರೆ, ಮಧುಗಿರಿ ಮತ್ತು ಪಾವಗಡ ತಾಲ್ಲೂಕುಗಳಿಗೆ ಕುಡಿಯುವ ನೀರು ಮತ್ತು ಈ ಭಾಗದ 79 ಸಣ್ಣ ನೀರಾವರಿ ಕೆರೆಗಳಿಗೆ ನೀರನ್ನು ಒದಗಿಸುವ ಮಧುಗಿರಿ ಫೀಡರ್ ಕಾಲುವೆ ಕಾಮಗಾರಿ (2 ಪ್ಯಾಕೇಜ್‌ಗಳಲ್ಲಿ) ಮತ್ತು ಗೌರಿಬಿದನೂರು ತಾಲ್ಲೂಕಿಗೆ ಕುಡಿಯುವ ನೀರಿಗಾಗಿ ಮತ್ತು ಗೌರಿಬಿದನೂರು, ಕೊರಟಗೆರೆ, ಮಧುಗಿರಿ ಮತ್ತು ದೊಡ್ಡಬಳ್ಳಾಪುರ ತಾಲ್ಲೂಕುಗಳ 107 ಸಣ್ಣ ನೀರಾವರಿ ಕೆರೆಗಳಿಗೆ ನೀರನ್ನು ಒದಗಿಸುವ ಗೌರಿಬಿದನೂರು ಫೀಡರ್ ಕಾಲುವೆ ಕಾಮಗಾರಿಗಳು ವಿವಿಧ ಹಂತದ ಪ್ರಗತಿಯಲ್ಲಿರುತ್ತವೆ.

✓ ಗುರುತ್ವ ಕಾಲುವೆ ಕೊನೆಯಲ್ಲಿ ಬರುವ ತುಮಕೂರು ಜಿಲ್ಲೆ ಕೊರಟಗೆರೆ ತಾಲ್ಲೂಕಿನ ಕೋಳಾಲ ಹೋಬಳಿಯ ಭೈರಗೊಂಡ್ಲು ಹತ್ತಿರ 5.78 ಟಿ.ಎಂ.ಸಿ ನೀರನ್ನು ಶೇಖರಿಸಲು ನಿರ್ಮಿಸಲು ಯೋಜಿಸಿರುವ ಜಲಾಶಯದ ನಿರ್ಮಾಣದಿಂದ ಕೊರಟಗೆರೆ ತಾಲ್ಲೂಕಿನಲ್ಲಿ ಮುಳುಗಡೆಯಾಗುವ ಜಮೀನುಗಳಿಗೂ ಸಹಾ ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಮುಳುಗಡೆಯಾಗುವ ಜಮೀನುಗಳಿಗೆ ನೀಡುವ ಪರಿಹಾರ ದರವನ್ನೇ ನೀಡಲು ಒತ್ತಾಯಿಸಿದ್ದರಿಂದ ಕಾಮಗಾರಿಯನ್ನು ಆರಂಭಿಸಲು ಸಾಧ್ಯವಾಗಿರುವುದಿಲ್ಲ.

✓ ಭೈರಗೊಂಡ್ಲು ಜಲಾಶಯದ ನಂತರದ ಲಿಫ್ಟ್ ಮತ್ತು ಫೀಡರ್ ಕಾಲುವೆ ಕಾಮಗಾರಿಗಳ ಮುಖಾಂತರ ಬೆಂಗಳೂರು ಗ್ರಾಮಾಂತರ, ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಿಗೆ ಕುಡಿಯುವ ನೀರು ಪೂರೈಸಲು ಮತ್ತು ಕೆರೆ ತುಂಬಿಸಲು ಅನುಮೋದಿತ ಯೋಜನಾ ವರದಿಯಲ್ಲಿ ಅವಕಾಶ ಕಲ್ಪಿಸಲಾಗಿದ್ದು, ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯಿಂದ ಮಾತ್ರ ಈ ಪ್ರದೇಶಗಳಿಗೆ ಸುರಕ್ಷಿತ ಕುಡಿಯುವ ನೀರನ್ನು ಪೂರೈಸಲು ಸಾಧ್ಯವಿದ್ದು, ಈ ಕಾಮಗಾರಿಗಳನ್ನು ಕೂಡಲೇ ಕೈಗೆತ್ತಿಕೊಳ್ಳಲು ಸದರಿ ಜಿಲ್ಲೆಗಳ ಜನಪ್ರತಿನಿಧಿಗಳು ತೀವ್ರವಾಗಿ ಒತ್ತಾಯಿಸುತ್ತಿರುವುದರಿಂದ ಸುಮಾರು 2.00 ಟಿ.ಎಂ.ಸಿ ಸಂಗ್ರಹಣಾ ಸಾಮರ್ಥ್ಯದ ಸಮತೋಲನ ಜಲಾಶಯ ನಿರ್ಮಾಣದ ಪರ್ಯಾಯ ಪ್ರಸ್ತಾವನೆಯೊಂದನ್ನು ತಯಾರಿಸಲಾಗಿದ್ದು, ಸದರಿ ಪರ್ಯಾಯ ಪ್ರಸ್ತಾವನೆಯನ್ನು ಒಳಗೊಂಡ ರೂ.23,251.66 ಕೋಟಿ ಮೊತ್ತದ ಪುನರ್ ಪರಿಷ್ಕೃತ ಯೋಜನಾ ವರದಿಯನ್ನು ನಿಗಮದ ನಿರ್ದೇಶಕರ ಮಂಡಳಿಯ ಅನುಮೋದನೆ ಮತ್ತು ಶಿಫಾರಸ್ಸಿನ ಮೇರೆಗೆ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಸಲ್ಲಿಸಲಾಗಿತ್ತು. ಸದರಿ ಪ್ರಸ್ತಾವನೆಯ ಕುರಿತು ಆರ್ಥಿಕ ಇಲಾಖೆಯು ಕೆಲವು ಸ್ಪಷ್ಟೀಕರಣವನ್ನು ಕೋರಿದ್ದು, ಪರಿಶೀಲಿಸಿ ವರದಿಯನ್ನು ಸಲ್ಲಿಸುವಂತೆ ವ್ಯ.ನಿ., ವಿ.ಜ.ನಿ.ನಿ ರವರನ್ನು ಕೋರಲಾಗಿದೆ.

✓ ಜಲಾಶಯ ನಿರ್ಮಾಣದ ಪರ್ಯಾಯ ಪ್ರಸ್ತಾವನೆಯ ಅನುಸಾರ ಭೈರಗೊಂಡ್ಲು ಜಲಾಶಯದ ನಂತರದ ಲಿಫ್ಟ್ ಕಾಂಪೋನೆಂಟ್ ಕಾಮಗಾರಿಗಳ ಟೆಂಡರ್ ಪ್ರಕ್ರಿಯೆ ಜಾರಿಯಲ್ಲಿದ್ದು, ಸದರಿ ಪರ್ಯಾಯ ಪ್ರಸ್ತಾವನೆ ಒಳಗೊಂಡ ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ಪುನರ್ ಪರಿಷ್ಕೃತ ವಿವರವಾದ ಯೋಜನಾ ವರದಿಗೆ ಆಡಳಿತಾತ್ಮಕ ಅನುಮೋದನೆ ಪಡೆದುಕೊಂಡು ಜಲಾಶಯ ನಿರ್ಮಾಣ ಮತ್ತು ಜಲಾಶಯದ ನಂತರದ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ನಿಯಮಾನುಸಾರ ಕ್ರಮ ಜರುಗಿಸಲಾಗುವುದು.

✓ ಭೈರಗೊಂಡ್ಲು ಜಲಾಶಯದಿಂದ ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಿಗೆ ನೀರೊದಗಿಸುವ ಕೋಲಾರ ಮತ್ತು ಶ್ರೀನಿವಾಸಪುರ ಫೀಡರ್ ಕಾಲುವೆ ಕಾಮಗಾರಿಗಳ ಅಂದಾಜು ಪಟ್ಟಿಗಳು ತಯಾರಿಕಾ ಹಂತದಲ್ಲಿವೆ.

ಸದರಿ ಯೋಜನೆಯ ಕಾಮಗಾರಿಗಳಿಗಾಗಿ ಭೂಸ್ವಾಧೀನ ಪ್ರಕ್ರಿಯೆ ಮತ್ತು ಅರಣ್ಯ ತೀರುವಳಿಗೆ ಸಂಬಂಧಿಸಿದ ಹಾಗೂ ಇನ್ನಿತರೆ ಇಲಾಖೆಗಳಿಂದ ಅವಶ್ಯಕ ಅನುಮೋದನೆ ಪಡೆದು ಹಾಗೂ ಕಾನೂನು ತೊಡಕುಗಳನ್ನು ನಿವಾರಿಸಿಕೊಂಡು ಮತ್ತು ಬಾಕಿ ಕಾಮಗಾರಿಗಳಿಗೆ ಅಗತ್ಯವಿರುವ ಆರ್ಥಿಕ ಸಂಪನ್ಮೂಲಗಳನ್ನು ಆದ್ಯತೆ ಅನುಸಾರ ಒದಗಿಸಿಕೊಂಡು ಭೈರಗೊಂಡ್ಲು ಜಲಾಶಯದ ವರೆಗಿನ ಕಾಮಗಾರಿಗಳನ್ನು ಸೆಪ್ಟೆಂಬರ್ 2022ರ ಅಂತ್ಯದ ಒಳಗೆ ಪೂರ್ಣಗೊಳಿಸಲು ಯೋಜಿಸಲಾಗಿದೆ.

ಭೈರಗೊಂಡ್ಲು ಜಲಾಶಯ ನಿರ್ಮಾಣ ಕಾಮಗಾರಿ, ಭೈರಗೊಂಡ್ಲು ಜಲಾಶಯದಿಂದ ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಿಗೆ ನೀರೊದಗಿಸುವ ಭೈರಗೊಂಡ್ಲು ನಂತರದ ಲಿಫ್ಟ್ ಕಾಮಗಾರಿ, ಕೋಲಾರ ಮತ್ತು ಚಿಕ್ಕಬಳ್ಳಾಪುರ ಫೀಡರ್ ಕಾಲುವೆ ಕಾಮಗಾರಿಗಳನ್ನು ಭೈರಗೊಂಡ್ಲು ಜಲಾಶಯ ನಿರ್ಮಾಣದ ಪರ್ಯಾಯ ಪ್ರಸ್ತಾವನೆ ಒಳಗೊಂಡ ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ಮನರ್ ಪರಿಷ್ಕೃತ ವಿವರವಾದ ಯೋಜನಾ ವರದಿಗೆ ಸರ್ಕಾರದಿಂದ ಆಡಳಿತಾತ್ಮಕ ಅನುಮೊದನೆ ಪಡೆದುಕೊಂಡು ಕೈಗೆತ್ತಿಕೊಳ್ಳಲು ನಿಯಮಾನುಸಾರ ಕ್ರಮ ಜರುಗಿಸಲಾಗುತ್ತಿದೆ.

ಭೂಸ್ವಾಧೀನಕ್ಕೆ/ ಕಾಮಗಾರಿಗಳಿಗೆ ಅವಶ್ಯವಿರುವ ವಾರ್ಷಿಕ ಅನುದಾನದ ಲಭ್ಯತೆಯನ್ನು ಆಧರಿಸಿ, ಯೋಜನೆಯ ಮನರ್ ಪರಿಷ್ಕೃತ ಯೋಜನಾ ವರದಿಗೆ ಆಡಳಿತಾತ್ಮಕ ಅನುಮೋದನೆ ಪಡೆದುಕೊಂಡು 2023-24 ರ ಅಂತ್ಯಕ್ಕೆ ಸದರಿ ಯೋಜನೆಯನ್ನು ಪೂರ್ಣಗೊಳಿಸುವ ನಿಟ್ಟಿನಲ್ಲಿ ಅವಶ್ಯಕ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.

*****

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 101
2. ಸದಸ್ಯರ ಹೆಸರು : ಶ್ರೀ ನಾಗೇಶ್ ಹೆಚ್
3. ಉತ್ತರಿಸಬೇಕಾದ ದಿನಾಂಕ : 15.02.2022
4. ಉತ್ತರಿಸುವವರು : ಕಾನೂನು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಕಳೆದ ಮೂರು ವರ್ಷಗಳಿಂದ ಕೋಲಾರ ಜಿಲ್ಲೆಗೆ ಸಣ್ಣ ನೀರಾವರಿ ಇಲಾಖೆಯಿಂದ ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡದ ಫಲಾನುಭವಿಗಳಿಗೆ ಮಂಜೂರಾಗಿರುವ ಕೊಳವೆಬಾವಿಗಳ ಸಂಖ್ಯೆ ಎಷ್ಟು? (ತಾಲ್ಲೂಕುವಾರು ಮಾಹಿತಿ ನೀಡುವುದು) | ವಿವರಗಳನ್ನು ಅನುಬಂಧ -1 ರಲ್ಲಿ ನೀಡಲಾಗಿದೆ. |
| ಆ. | ಆಯ್ಕೆಯಾದ ಫಲಾನುಭವಿಗಳ ಜಮೀನಿನಲ್ಲಿ ಈಗಾಗಲೇ ಕೊಳವೆ ಬಾವಿ ಕೊರೆಸಲಾಗಿದೆಯೇ; ಇಲ್ಲದಿದ್ದಲ್ಲಿ, ಕಾರಣಗಳೇನು; (ಸಂಪೂರ್ಣ ವಿವರ ಒದಗಿಸುವುದು) | ಆಯ್ಕೆಯಾಗಿರುವ ಫಲಾನುಭವಿಗಳ ಜಮೀನಿನಲ್ಲಿ ಈಗಾಗಲೇ ಕೊಳವೆ ಬಾವಿ ಕೊರೆಸಲಾಗಿದೆ. |
| ಇ. | ಕೊಳವೆ ಬಾವಿ ಕೊರೆಸಿರುವ ಫಲಾನುಭವಿಗಳ ಸಂಖ್ಯೆ ಎಷ್ಟು? (ತಾಲ್ಲೂಕುವಾರು ಮಾಹಿತಿ ನೀಡುವುದು) | ವಿವರಗಳನ್ನು ಅನುಬಂಧ -2 ರಲ್ಲಿ ನೀಡಲಾಗಿದೆ. |

ಕಡತ ಸಂಖ್ಯೆ: ಎಂಐಡಿ 15 ಎಲ್ಎಕ್ಯೂ 2022

(ಜೆ.ಸಿ ಮಾಧುಸ್ವಾಮಿ)
ಕಾನೂನು ಸಂಸದೀಯ ವ್ಯವಹಾರಗಳು ಮತ್ತು
ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು

## ಮಾನ್ಯ ವಿಧಾನಸಭೆಯ ಸದಸ್ಯರಾದ ಶ್ರೀ.ನಾಗೇಶ್ ಹೆಚ್ (ಮುಳಬಾಗಿಲು) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:101ಕ್ಕೆ ಅನುಬಂಧ-1

### ಕಳೆದ ಮೂರು ವರ್ಷಗಳಲ್ಲಿ ಎಸ್.ಸಿ.ಪಿ ಹಾಗೂ ಟಿ.ಎಸ್.ಪಿ ಲೆಕ್ಕ ಶೀರ್ಷಿಕೆಗಳಡಿ ಕೈಗೊಳ್ಳಲಾದ ಕೊಳವೆ ಬಾವಿ ಕಾಮಗಾರಿಗಳ ವಿವರ

ರೂ.ಲಕ್ಷಗಳಲ್ಲಿ

| ಕ್ರ ಸಂ | ಜಿಲ್ಲೆ | ತಾಲ್ಲೂಕು | ಲೆಕ್ಕ ಶೀರ್ಷಿಕೆ | ಕಾಮಗಾರಿಯ ಹೆಸರು | ಅಂದಾಜು ಮೊತ್ತ | ಒಟ್ಟು ವೆಚ್ಚ | ಫಲಾನುಭವಿಗಳ ಹೆಸರು | ಷರಾ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| | | | | ಎಸ್.ಸಿ.ಪಿ 2018-19 ನೇ ಸಾಲಿನ ಮುಂದುವರೆದ ಕಾಮಗಾರಿಗಳು | | | | |
| 1 | ಕೋಲಾರ | ಕೋಲಾರ / ಕೋಲಾರ | ಎಸ್.ಸಿ.ಪಿ | ಕೋಲಾರ ಜಿಲ್ಲೆ, ಕೋಲಾರ ತಾಲ್ಲೂಕಿನ ತಿರುಮಲಕೊಪ್ಪ ಗ್ರಾಮದ ವಕ್ಕಲಗೇರಿ (ಪೋಸ್ಟ್)ನ ಚಿನ್ನಮ್ಮ ಗಂಡ ಚಿಕ್ಕಣ್ಣ ಎಂಬುವರ ಜಮೀನಿನಲ್ಲಿ ಕೊಳವೆ ಬಾವಿ ಕೊರೆಯುವ ಕುರಿತು. | 5.00 | 4.17 | ಚಿನ್ನಮ್ಮ ಗಂಡ ಚಿಕ್ಕಣ್ಣ | ಕಾಮಗಾರಿ ಪೂರ್ಣಗೊಂಡಿದೆ |
| 1 | | | | ಒಟ್ಟು | **5.00** | **4.17** | | |
| 1 | ಕೋಲಾರ | ಕೋಲಾರ/ ಬಂಗಾರಪೇಟೆ | ಎಸ್.ಸಿ.ಪಿ | ಶ್ರೀ ಕೃಷ್ಣಪ್ಪ ಬಿನ್ ವೆಂಕಟರಾಮಪ್ಪ, ಚಾಮನಹಳ್ಳಿ ಗ್ರಾಮ, ಇವರ ಸ.ನಂ.28 ರ 3.00 ಎಕರೆ ಜಮೀನಿಗೆ ಕೊಳವೆ ಬಾವಿ ಸೌಲಭ್ಯ ಒದಗಿಸಿಕೊಡುವುದು. | 5.00 | 5.05 | ಶ್ರೀ. ಕೃಷ್ಣಪ್ಪ ಬಿನ್ ವೆಂಕಟರಾಮಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 2 | ಕೋಲಾರ | ಬಂಗಾರಪೇಟೆ/ ಬಂಗಾರಪೇಟೆ | ಎಸ್.ಸಿ.ಪಿ | ಶ್ರೀ ಬಿ.ಮುನಿಯಪ್ಪ ಬಿನ್ ಬೋಡಪ್ಪ, ಬತ್ತಲಹಳ್ಳಿ ಗ್ರಾಮ ಇವರ ಸ.ನಂ.60 ರ 3.00 ಎಕರೆ ಜಮೀನಿಗೆ ಕೊಳವೆ ಬಾವಿ ಸೌಲಭ್ಯ ಒದಗಿಸಿಕೊಡುವುದು. | 5.00 | 5.28 | ಶ್ರೀ. ಬಿ.ಮುನಿಯಪ್ಪ ಬಿನ್ ಬೋಡಪ್ಪ | |
| 3 | ಕೋಲಾರ | ಬಂಗಾರಪೇಟೆ/ ಬಂಗಾರಪೇಟೆ | ಎಸ್.ಸಿ.ಪಿ | ಶ್ರೀ ವೆಂಕಟೇಶಪ್ಪ ಬಿನ್ ತಿರುಮಲಪ್ಪ, ಶಿವಲಿಂಗ ಗ್ರಾಮ, ಇವರ ಸ.ನಂ.24 ರ 3.00 ಎಕರೆ ಜಮೀನಿಗೆ ಕೊಳವೆ ಬಾವಿ ಸೌಲಭ್ಯ ಒದಗಿಸಿಕೊಡುವುದು. | 5.00 | 5.19 | ಶ್ರೀ ವೆಂಕಟೇಶಪ್ಪ ಬಿನ್ ತಿರುಮಲಪ್ಪ | |
| 4 | ಕೋಲಾರ | ಬಂಗಾರಪೇಟೆ/ ಬಂಗಾರಪೇಟೆ | ಎಸ್.ಸಿ.ಪಿ | ಶ್ರೀ ಮುನಿವೆಂಕಟಪ್ಪ ಬಿನ್ ಮುನಿವೆಂಕಟಪ್ಪ, ದೊಡ್ಡಕಳವಂಚಿ ಗ್ರಾಮ, ಇವರ ಸ.ನಂ.20 ರ 3.00 ಎಕರೆ ಜಮೀನಿಗೆ ಕೊಳವೆ ಬಾವಿ ಸೌಲಭ್ಯ ಒದಗಿಸಿಕೊಡುವುದು. | 5.00 | 5.06 | ಶ್ರೀ. ಮುನಿವೆಂಕಟಪ್ಪ ಬಿನ್ ಮುನಿವೆಂಕಟಪ್ಪ | |
| 4 | | | | ಒಟ್ಟು | **20.00** | **20.58** | | |
| 1 | ಕೋಲಾರ | ಮಾಲೂರು | ಎಸ್.ಸಿ.ಪಿ | ಬಾವನಹಳ್ಳಿ ಗ್ರಾಮದ ನಾರಾಯಣಪ್ಪ ಕೋಂ ಲೇಟ್ ಬೈರಪ್ಪ ಸ.ನಂ.169/3ರ ಜಮೀನಿನಲ್ಲಿ ವಿಶೇಷ ಘಟಕ ಯೋಜನೆಯಡಿಯಲ್ಲಿ ಗಂಗಾಕಲ್ಯಾಣ ಕಾಮಗಾರಿ | 5.00 | 4.94 | ನಾರಾಯಣಪ್ಪ ಕೋಂ ಲೇಟ್ ಬೈರಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 2 | ಕೋಲಾರ | ಮಾಲೂರು | ಎಸ್.ಸಿ.ಪಿ | ಲಕ್ಕೂರು ಹೋಬಳಿ, ಚಳಗನಹಳ್ಳಿ ಗ್ರಾಮದ ಸಿ.ಎಂ.ಮುನಿರಾಜು ಕೋಂ ಲೇಟ್ ಚಿಕ್ಕಮುನಿಯಪ್ಪ ಹಾಗೂ ಗುಳ್ಳಮ್ಮ ಕೋಂ ಚಿಕ್ಕಮುನಿಯಪ್ಪ ಮತ್ತು ಇತರರು ಸ.ನಂ.70ರ ಜಮೀನಿನಲ್ಲಿ ವಿಶೇಷ ಘಟಕ ಯೋಜನೆಯಡಿಯಲ್ಲಿ ಗಂಗಾಕಲ್ಯಾಣ ಕಾಮಗಾರಿ | 5.00 | 4.85 | 1) ಸಿ.ಎಂ.ಮುನಿರಾಜು ಕೋಂ ಲೇಟ್ ಚಿಕ್ಕಮುನಿಯಪ್ಪ 2) ಗುಳ್ಳಮ್ಮ ಕೋಂ ಚಿಕ್ಕಮುನಿಯಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 3 | ಕೋಲಾರ | ಮಾಲೂರು | ಎಸ್.ಸಿ.ಪಿ | ವೀರಕಪುತ್ರ ಗ್ರಾಮದ ಚಿಕ್ಕ ವೆಂಕಟೇಶಪ್ಪ ಮತ್ತು ಇತರರ ಜಮೀನಿನಲ್ಲಿ ಗಂಗಾ ಕಲ್ಯಾಣ ಯೋಜನೆಯಡಿ ಕೊಳವೆ ಬಾವಿ ಕಾಮಗಾರಿ | 5.00 | 4.94 | ಚಿಕ್ಕ ವೆಂಕಟೇಶಪ್ಪ | ಕಾಮಗಾರಿ ಪೂರ್ಣಗೊಂಡಿದೆ |

| ಕ್ರ ಸಂ | ಜಿಲ್ಲೆ | ತಾಲ್ಲೂಕು | ಲೆಕ್ಕ ಶೀರ್ಷಿಕೆ | ಕಾಮಗಾರಿಯ ಹೆಸರು | ಅಂದಾಜು ಮೊತ್ತ | ಒಟ್ಟು ವೆಚ್ಚ | ಫಲಾನುಭವಿಗಳ ಹೆಸರು | ಷರಾ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 4 | ಕೋಲಾರ | ಮಾಲೂರು | ಎಸ್.ಸಿ.ಪಿ | ಚಿಕ್ಕಿಗ್ಗಲೂರು ಗ್ರಾಮದ ಶ್ರೀ ಕೃಷ್ಣಪ್ಪ ಮತ್ತು ಇತರರ ಜಮೀನಿನಲ್ಲಿ ಗಂಗಾ ಕಲ್ಯಾಣ ಯೋಜನೆಯಡಿ ಕೊಳವೆ ಬಾವಿ ಕಾಮಗಾರಿ | 5.00 | 4.85 | ಶ್ರೀ ಕೃಷ್ಣಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 4 | | | | ಒಟ್ಟು | 20.00 | 19.58 | | |
| 1 | ಕೋಲಾರ | ಮುಳಬಾಗಿಲು / ಮುಳಬಾಗಿಲು | ಎಸ್.ಸಿ.ಪಿ | ಸುಬ್ರಮಣಿ ಬಿನ್ ಮಾರಪ್ಪ, ಅಲ್ಲಾಲಸಂದ್ರ ಗ್ರಾಮ ಇವರ ಜಮೀನಿಗೆ ಕೊಳವೆ ಬಾವಿ ಮೂಲಕ ನೀರಾವರಿ ಸೌಲಭ್ಯ ಒದಗಿಸುವುದು. | 5.00 | 4.45 | ಸುಬ್ರಮಣಿ ಬಿನ್ ಮಾರಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 2 | ಕೋಲಾರ | ಮುಳಬಾಗಿಲು / ಮುಳಬಾಗಿಲು | ಎಸ್.ಸಿ.ಪಿ | ಗಂಗಮ್ಮ ಕೋಂ ಪೂವನ್ನ ಮೇಲ್ತಾಯಲೂರು ಗ್ರಾಮ ಇವರ ಜಮೀನಿಗೆ ಕೊಳವೆ ಬಾವಿ ಮೂಲಕ ನೀರಾವರಿ ಸೌಲಭ್ಯ ಒದಗಿಸುವುದು. | 5.00 | 4.53 | ಗಂಗಮ್ಮ ಕೋಂ ಪೂವನ್ನ | ಕಾಮಗಾರಿ ಪೂರ್ಣಗೊಂಡಿದೆ |
| 3 | ಕೋಲಾರ | ಮುಳಬಾಗಿಲು / ಮುಳಬಾಗಿಲು | ಎಸ್.ಸಿ.ಪಿ | ಮುನಿಶಾಮಿ ಉ॥ ಕುಂಟಪ್ಪ ಕನ್ನಸಂದ್ರ ಗ್ರಾಮ ಇವರ ಜಮೀನಿಗೆ ಕೊಳವೆ ಬಾವಿ ಮೂಲಕ ನೀರಾವರಿ ಸೌಲಭ್ಯ ಒದಗಿಸುವುದು. | 5.00 | 4.54 | ಮುನಿಶಾಮಿ ಉ॥ ಕುಂಟಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 4 | ಕೋಲಾರ | ಮುಳಬಾಗಿಲು / ಮುಳಬಾಗಿಲು | ಎಸ್.ಸಿ.ಪಿ | ಶಾರದಮ್ಮ ಕೋಂ ವೆಂಕಟರಾಮಪ್ಪ ಕನ್ನಸಂದ್ರ ಗ್ರಾಮ ಇವರ ಜಮೀನಿಗೆ ಕೊಳವೆ ಬಾವಿ ಮೂಲಕ ನೀರಾವರಿ ಸೌಲಭ್ಯ ಒದಗಿಸುವುದು. | 5.00 | 4.53 | ಶಾರದಮ್ಮ ಕೋಂ ವೆಂಕಟರಾಮಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 5 | ಕೋಲಾರ | ಮುಳಬಾಗಿಲು / ಮುಳಬಾಗಿಲು | ಎಸ್.ಸಿ.ಪಿ | ಗುರ್‍ರಪ್ಪ ಬಿನ್ ಚೆನ್ನಪ್ಪ ಕನ್ನಸಂದ್ರ ಗ್ರಾಮ ಇವರ ಜಮೀನಿಗೆ ಕೊಳವೆ ಬಾವಿ ಮೂಲಕ ನೀರಾವರಿ ಸೌಲಭ್ಯ ಒದಗಿಸುವುದು. | 5.00 | 4.54 | ಗುರ್‍ರಪ್ಪ ಬಿನ್ ಚೆನ್ನಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 6 | ಕೋಲಾರ | ಮುಳಬಾಗಿಲು / ಮುಳಬಾಗಿಲು | ಎಸ್.ಸಿ.ಪಿ | ವೆಂಕಟರಾಮಪ್ಪ ಬಿನ್ ಪಾಪಣ್ಣ, ಸೊಣ್ಣವಾಡಿ ಗ್ರಾಮ ಕನ್ನಸಂದ್ರ ಗ್ರಾಮ ಇವರ ಜಮೀನಿಗೆ ಕೊಳವೆ ಬಾವಿ ಮೂಲಕ ನೀರಾವರಿ ಸೌಲಭ್ಯ ಒದಗಿಸುವುದು. | 5.00 | 4.94 | ವೆಂಕಟರಾಮಪ್ಪ ಬಿನ್ ಪಾಪಣ್ಣ | ಕಾಮಗಾರಿ ಪೂರ್ಣಗೊಂಡಿದೆ |
| 7 | ಕೋಲಾರ | ಮುಳಬಾಗಿಲು | ಎಸ್.ಸಿ.ಪಿ | ನಾಚಗುಂಡ್ಲಹಳ್ಳಿ ಗ್ರಾಮದ ಎ.ಕೆ.ಹನುಮಪ್ಪ ಬಿನ್ ಮುನಿಸುಬ್ಬಮ್ಮ ಜಮೀನಿನಲ್ಲಿ ಕೊಳವೆ ಬಾವಿ ಕಾಮಗಾರಿ | 5.00 | 4.94 | ಎ.ಕೆ.ಹನುಮಪ್ಪ ಬಿನ್ ಮುನಿಸುಬ್ಬಮ್ಮ | ಕಾಮಗಾರಿ ಪೂರ್ಣಗೊಂಡಿದೆ |
| 8 | ಕೋಲಾರ | ಮುಳಬಾಗಿಲು / ಮುಳಬಾಗಿಲು | ಎಸ್.ಸಿ.ಪಿ | ವೆಂಕಟರಾಮಪ್ಪ ಬಿನ್ ಮುನಿವೆಂಕಟಪ್ಪ ಸ.ನಂ.60/ಪಿ11 ಸಂಗೊಂಡಹಳ್ಳಿ ಗ್ರಾಮ ಇವರ ಜಮೀನಿಗೆ ನೀರಾವರಿ ಸೌಲಭ್ಯ | 5.00 | 4.94 | ವೆಂಕಟರಾಮಪ್ಪ ಬಿನ್ ಮುನಿವೆಂಕಟಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 9 | ಕೋಲಾರ | ಮುಳಬಾಗಿಲು / ಮುಳಬಾಗಿಲು | ಎಸ್.ಸಿ.ಪಿ | ವೆಂಕಟೇಶಪ್ಪ ಬಿನ್ ಹೊಳಳಿ ಪಾಪಣ್ಣ ಸ.ನಂ.76/3 ಕೆ. ಶಿಟ್ಟಹಳ್ಳಿ ಗ್ರಾಮ ಇವರ ಜಮೀನಿಗೆ ನೀರಾವರಿ ಸೌಲಭ್ಯ | 5.00 | 4.94 | ವೆಂಕಟೇಶಪ್ಪ ಬಿನ್ ಹೊಳಳಿ ಪಾಪಣ್ಣ | ಕಾಮಗಾರಿ ಪೂರ್ಣಗೊಂಡಿದೆ |
| 10 | ಕೋಲಾರ | ಮುಳಬಾಗಿಲು / ಮುಳಬಾಗಿಲು | ಎಸ್.ಸಿ.ಪಿ | ಮಂಜುನಾಥ ಬಿನ್ ವೆಂಕಟಪ್ಪ ಸ.ನಂ.93/1 ಮೆಲ್ತಾಯಲೂರು ಗ್ರಾಮ ಇವರ ಜಮೀನಿಗೆ ನೀರಾವರಿ ಸೌಲಭ್ಯ | 5.00 | 4.94 | ಮಂಜುನಾಥ ಬಿನ್ ವೆಂಕಟಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 11 | ಕೋಲಾರ | ಮುಳಬಾಗಿಲು / ಮುಳಬಾಗಿಲು | ಎಸ್.ಸಿ.ಪಿ | ವಿ.ಅರವಿಂದ ಬಿನ್ ವೆಂಕಟಮುನಿ , ಬೂಸಾಲಕುಂಟೆ ಇವರ ಜಮೀನಿಗೆ ಕೊಳವೆ ಬಾವಿ | 5.00 | 4.44 | ವಿ.ಅರವಿಂದ ಬಿನ್ ವೆಂಕಟಮುನಿ | ಕಾಮಗಾರಿ ಪೂರ್ಣಗೊಂಡಿದೆ |
| 12 | ಕೋಲಾರ | ಮುಳಬಾಗಿಲು / ಮುಳಬಾಗಿಲು | ಎಸ್.ಸಿ.ಪಿ | ವಿ.ರಾಜೇಂದ್ರ ಬಿನ್ ವೆಂಕಟಮುನಿ , ಬೂಸಾಲಕುಂಟೆ ಇವರ ಜಮೀನಿಗೆ ಕೊಳವೆ ಬಾವಿ | 5.00 | 4.44 | ವಿ.ರಾಜೇಂದ್ರ ಬಿನ್ ವೆಂಕಟಮುನಿ | ಕಾಮಗಾರಿ ಪೂರ್ಣಗೊಂಡಿದೆ |
| 12 | | | | ಒಟ್ಟು | 60.00 | 56.17 | | |
| 1 | ಕೋಲಾರ | ಶ್ರೀನಿವಾಸಪುರ | ಎಸ್.ಸಿ.ಪಿ | ಶ್ರೀ ಗೋರ್ಲಪ್ಪ ಬಿನ್ ಪೂಜಾರಿ ರಾಮಬೋವಿ, ಜೆ.ವಿ.ಕಾಲೋನಿ, ಜೆ.ತಿಮ್ಮಸಂದ್ರ ಗ್ರಾಮ, ಇವರ ಸರ್ವೆ ನಂ 26/ಪಿ75 ಜಮೀನಿನಲ್ಲಿ ಕೊಳವೆ ಬಾವಿ ಕಾಮಗಾರಿ. | 5.00 | 4.85 | ಶ್ರೀ ಗೋರ್ಲಪ್ಪ ಬಿನ್ ಪೂಜಾರಿ ರಾಮಬೋವಿ | ಕಾಮಗಾರಿ ಪೂರ್ಣಗೊಂಡಿದೆ |

| ಕ್ರ | ಜಿಲ್ಲೆ | ತಾಲ್ಲೂಕು | ಲೆಕ್ಕ ಶೀರ್ಷಿಕೆ | ಕಾಮಗಾರಿಯ ಹೆಸರು | ಅಂದಾಜು ಮೊತ್ತ | ಒಟ್ಟು ವೆಚ್ಚ | ಫಲಾನುಭವಿಗಳ ಹೆಸರು | ಷರಾ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 2 | ಕೋಲಾರ | ಶ್ರೀನಿವಾಸಪುರ | ಎಸ್.ಸಿ.ಪಿ | 1) ಶ್ರೀ ವೆಂಕಟೇಶ್ ಬಿನ್ ಗೋರ್ಲಪ್ಪ, ಜೆ.ವಿ.ಕಾಲೋನಿ, ಜೆ.ತಿಮ್ಮಸಂದ್ರ ಗ್ರಾಮ ಇವರ ಸ.ನಂ.58/540/1 ರ ಜಮೀನಿಗೆ ಕೊಳವೆ ಬಾವಿ ಸೌಲಭ್ಯ ಒದಗಿಸುವುದು. | 5.00 | 4.86 | ಶ್ರೀ ವೆಂಕಟೇಶ್ ಬಿನ್ ಗೋರ್ಲಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 3 | ಕೋಲಾರ | ಶ್ರೀನಿವಾಸಪುರ | ಎಸ್.ಸಿ.ಪಿ | 2) ಶ್ರೀಮತಿ ಚಿನ್ನಕ್ಕ ಕೋಂ, ಗೋರ್ಲಪಪ್, ಜೆ.ವಿ.ಕಾಲೋನಿ, ಜೆ.ತಿಮ್ಮಸಂದ್ರ ಗ್ರಾಮ, ಇವರ ಸ.ನಂ. 26/ಪಿ84, 26/ಪಿ 73ರ ಜಮೀನಿಗೆ ಕೊಳವೆ ಬಾವಿ ಸೌಲಭ್ಯ ಒದಗಿಸುವುದು. | 5.00 | 4.85 | ಶ್ರೀಮತಿ ಚಿನ್ನಕ್ಕ ಕೋಂ, ಗೋರ್ಲಪಪ್ | ಕಾಮಗಾರಿ ಪೂರ್ಣಗೊಂಡಿದೆ |
| 4 | ಕೋಲಾರ | ಶ್ರೀನಿವಾಸಪುರ | ಎಸ್.ಸಿ.ಪಿ | 3) ಶ್ರೀಮತಿ ವೆಂಕಟಮ್ಮ ಕೋಂ ಮುನಿವೆಂಕಟಪ್ಪ ಜೆ.ವಿ.ಕಾಲೋನಿ ಜೆ.ತಿಮ್ಮಸಂದ್ರ ಗ್ರಾಮ, ಇವರ ಸ.ನಂ. 56/2ರ ಜಮೀನಿಗೆ ಕೊಳವೆ ಬಾವಿ ಸೌಲಭ್ಯ ಒದಗಿಸುವುದು. | 5.00 | 4.85 | ಶ್ರೀಮತಿ ವೆಂಕಟಮ್ಮ ಕೋಂ ಮುನಿವೆಂಕಟಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 5 | ಕೋಲಾರ | ಶ್ರೀನಿವಾಸಪುರ | ಎಸ್.ಸಿ.ಪಿ | ಬಯ್ಯಮ್ಮ ಕೋಂ ನಾರೆಪ್ಪ ಶ್ರೀನಿವಾಸಪುರ (ಗ್ರಾಮೀಣ) ಇವರ ಸ.ನಂ 86/ಪಿ-80ರ ಕಸಬಾ ಹೋಬಳಿ, ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲ ಇವರ ಜಮೀನಿನಲ್ಲಿ ಕೊಳವೆ ಬಾವಿ | 5.00 | 4.84 | ಮುನಿಯಪ್ಪ ಉರುಫ್ ಮುನಯ್ಯ ಬಿನ್ ಹೊಟೆಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 6 | ಕೋಲಾರ | ಶ್ರೀನಿವಾಸಪುರ | ಎಸ್.ಸಿ.ಪಿ | ಕಸಬಾ ಹೋಬಳಿ ಶ್ರೀನಿವಾಸಪುರ (ಗ್ರಾಮೀಣ) ಮುನಿಯಪ್ಪ ಉರುಫ್ ಮುನಯ್ಯ, ಬಿನ್ ಹೊಟ್ಟೆಪ್ಪ ಇವರ ಸ.ನಂ 90/ಪಿ-2ರ ಇವರ ಜಮೀನಿನಲ್ಲಿ ಕೊಳವೆ ಬಾವಿ | 5.00 | 4.84 | ಬೈಯಮ್ಮ ಕೋಂ ನಾರೆಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 7 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಎಸ್.ಸಿ.ಪಿ | ಟಿ.ರಾಮಪ್ಪ ಬಿನ್ ತಿರುಮಳಪ್ಪ ಕೊರ್ನಹಳ್ಳಿ, ರೋಣೂರು ಪಂಚಾಯತಿ ರಾಯಲ್ಪಾಡು ಹೋಬಳಿ ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ಟಿ.ರಾಮಪ್ಪ ಬಿನ್ ತಿರುಮಳಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 8 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಎಸ್.ಸಿ.ಪಿ | ವೆಂಕಟೇಶಪ್ಪ ಬಿನ್ ವೆಂಕಟರಾಮಪ್ಪ, ಮೊಗಿಲಿಹಳ್ಳಿ, ಚಲ್ದಿಗಾನಹಳ್ಳಿ ಪಂಚಾಯತಿ ಕಸಬ ಹೋಬಳಿ ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | 15.25 | ವೆಂಕಟೇಶಪ್ಪ ಬಿನ್ ವೆಂಕಟರಾಮಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 9 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಎಸ್.ಸಿ.ಪಿ | ಬಿ.ಗುರ್ರಪ್ಪ ಬಿನ್ ವೆಂಕಟಪ್ಪ, ಶಿವಪುರ, ಚಲ್ದಿಗಾನಹಳ್ಳಿ ಪಂಚಾಯತಿ ಕಸಬ ಹೋಬಳಿ ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ಬಿ.ಗುರ್ರಪ್ಪ ಬಿನ್ ವೆಂಕಟಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 10 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಎಸ್.ಸಿ.ಪಿ | ಲಕ್ಷ್ಮೀನಾರಾಯಣ ಬಿನ್ ಮುನಿಶಾಮಿ, ದಿಂಬಾಲ, ರೋಣೂರು ಹೋಬಳಿ ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ಲಕ್ಷ್ಮೀನಾರಾಯಣ ಬಿನ್ ಮುನಿಶಾಮಿ | |
| 11 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಎಸ್.ಸಿ.ಪಿ | ವೆಂಕಟೇಶಪ್ಪ ಬಿನ್ ವೆಂಕಟ ಭೋವಿ, ವೀರಾಂಜನೇಯ ನಗರ (ವಡ್ಡರಪಾಳ್ಯ) ಮದನಹಳ್ಳಿ ಪಂಚಾಯತಿ ಸುಗಟೂರು ಹೋಬಳಿ ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ವೆಂಕಟೇಶಪ್ಪ ಬಿನ್ ವೆಂಕಟ ಭೋವಿ | |

| ಕ್ರ ಸಂ | ಜಿಲ್ಲೆ | ತಾಲ್ಲೂಕು | ಲೆಕ್ಕ ಶೀರ್ಷಿಕೆ | ಕಾಮಗಾರಿಯ ಹೆಸರು | ಅಂದಾಜು ಮೊತ್ತ | ಒಟ್ಟು ವೆಚ್ಚ | ಫಲಾನುಭವಿಗಳ ಹೆಸರು | ಷರಾ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 12 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಎಸ್.ಸಿ.ಪಿ | ಮುನಿಯಪ್ಪ ಬಿನ್ ಲೇ ಹನುಮಂತಪ್ಪ, ನಾಯಕರಹಳ್ಳಿ ಐತರಾಸನಹಳ್ಳಿ ಪಂಚಾಯತಿ ಹೋಳೂರು ಹೋಬಳಿ ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | 27.36 | ಮುನಿಯಪ್ಪ ಬಿನ್ ಲೇ ಹನುಮಂತಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 13 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಎಸ್.ಸಿ.ಪಿ | ಮುನಿಯಪ್ಪ ಬಿನ್ ಈರಪ್ಪ ಮುಳ್ಳಹಳ್ಳಿ, ಮದನಹಳ್ಳಿ ಪಂಚಾಯತಿ ಸುಗಟೂರು ಹೋಬಳಿ ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ಮುನಿಯಪ್ಪ ಬಿನ್ ಈರಪ್ಪ | |
| 14 | ಕೋಲಾರ | ಶ್ರೀನಿವಾಸಪುರ / ಕೋಲಾರ | ಎಸ್.ಸಿ.ಪಿ | ನಾಗರಾಜ ಬಿನ್ ಮುನಿಯಪ್ಪ ಜನ್ನಘಟ್ಟ ಪಂಚಾಯತಿ ಸುಗಟೂರು ಹೋಬಳಿ ಕೋಲಾರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ನಾಗರಾಜ ಬಿನ್ ಮುನಿಯಪ್ಪ | |
| 15 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಎಸ್.ಸಿ.ಪಿ | ವೆಂಕಟರಾಮಪ್ಪ ಬಿನ್ ಚಿನ್ನಪ್ಪ, ಚಿಲ್ಲವನಹಳ್ಳಿ ಐತರಾಸನಹಳ್ಳಿ ಪಂಚಾಯತಿ ಹೋಳೂರು ಹೋಬಳಿ ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ವೆಂಕಟರಾಮಪ್ಪ ಬಿನ್ ಚಿನ್ನಪ್ಪ | |
| 16 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಎಸ್.ಸಿ.ಪಿ | ವೆಂಕಟೇಶಪ್ಪ ಬಿನ್ ಚನ್ನಪ್ಪ, ನಾಯಕರಹಳ್ಳಿ, ಐತರಾಸನಹಳ್ಳಿ ಪಂಚಾಯತಿ ಹೋಳೂರು ಹೋಬಳಿ ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ವೆಂಕಟೇಶಪ್ಪ ಬಿನ್ ಚನ್ನಪ್ಪ | |
| 17 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಎಸ್.ಸಿ.ಪಿ | ವೆಂಕಟರಮಣಪ್ಪ ಬಿನ್ ವೆಂಕಟಪ್ಪ (ಮುಸಳ್ಳು) ಗುಡಿಪಲ್ಲಿ, ಕೊರಿಗೆಪಲ್ಲಿ ಪಂಚಾಯತಿ ರಾಯಲ್ಪಾಡು ಹೋಬಳಿ ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | 27.37 | ವೆಂಕಟರಮಣಪ್ಪ ಬಿನ್ ವೆಂಕಟಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 18 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಎಸ್.ಸಿ.ಪಿ | ನಾಗಪ್ಪ ಬಿನ್ ವೆಂಕಟಪ್ಪ ಜೇಡಿಮಾಕಲಹಳ್ಳಿ ಮುಲಗೊರಕೋಟೆ ಪಂಚಾಯತಿ ರಾಯಲ್ಪಾಡು ಹೋಬಳಿ ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ನಾಗಪ್ಪ ಬಿನ್ ವೆಂಕಟಪ್ಪ | |
| 19 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಎಸ್.ಸಿ.ಪಿ | ಎಸ್.ವಿ.ಶಂಕರ್ ಬಿನ್ ವೆಂಕಟಸ್ವಾಮಿ ಬೋವಿಚಾಕಪಲ್ಲಿ ಗ್ರಾಮ ನೆಲವಂಕಿ ಹೋಬಳಿ ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ಎಸ್.ವಿ.ಶಂಕರ್ ಬಿನ್ ವೆಂಕಟಸ್ವಾಮಿ | |

| ಕ್ರ | ಜಿಲ್ಲೆ | ತಾಲ್ಲೂಕು | ಲೆಕ್ಕ ಶೀರ್ಷಿಕೆ | ಕಾಮಗಾರಿಯ ಹೆಸರು | ಅಂದಾಜು ಮೊತ್ತ | ಒಟ್ಟು ವೆಚ್ಚ | ಫಲಾನುಭವಿಗಳ ಹೆಸರು | ಷರಾ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 20 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಎಸ್.ಸಿ.ಪಿ | ವೆಂಕಟಗಿರಿಯಪ್ಪ ಬಿನ್ ಮುನಿಶಾಮಿ, ದೊಡ್ಡಂದಾರ್ಲಹಳ್ಳಿ, ನೆಲವಂಕಿ ಪಂಚಾಯತಿ ರಾಯಲ್ಪಾಡು ಹೋಬಳಿ ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ವೆಂಕಟಗಿರಿಯಪ್ಪ ಬಿನ್ ಮುನಿಶಾಮಿ | |
| 21 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಎಸ್.ಸಿ.ಪಿ | ರವಣಮ್ಮ ಕೋಂ ನಾರಾಯಣಪ್ಪ ಚಿಂತಮಾನಪಲ್ಲಿ, ಮುದಿಮಡಗು ಪಂಚಾಯತಿ ರಾಯಲ್ಪಾಡು ಹೋಬಳಿ ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ರವಣಮ್ಮ ಕೋಂ ನಾರಾಯಣಪ್ಪ | |
| 22 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಎಸ್.ಸಿ.ಪಿ | ಎಂ.ಶ್ರೀನಿವಾಸ ಬಿನ್ ಲೇ ಮುನಿಶಾಮಿ, ಗೌನಿಪಲ್ಲಿ ಗ್ರಾಮ ಪಂಚಾಯತಿ ರಾಯಲ್ಪಾಡು ಹೋಬಳಿ ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ಎಂ.ಶ್ರೀನಿವಾಸ ಬಿನ್ ಲೇ ಮುನಿಶಾಮಿ | |
| 23 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಎಸ್.ಸಿ.ಪಿ | ಮುನಿಯಪ್ಪ ಬಿನ್ ಹೆಚ್.ರಾಮಪ್ಪ, ಯದರೂರು ಲಕ್ಷ್ಮೀಸಾಗರ ಪಂಚಾಯತಿ ರಾಯಲ್ಪಾಡು ಹೋಬಳಿ ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ಮುನಿಯಪ್ಪ ಬಿನ್ ಹೆಚ್.ರಾಮಪ್ಪ | |
| 24 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಎಸ್.ಸಿ.ಪಿ | ವೆಂಕಟಮ್ಮ ಕೋಂ ಮುನಿವೆಂಕಟಪ್ಪ, ಪಾತಮುತ್ತಕಪಲ್ಲಿ, ಮುತ್ತಕಪಲ್ಲಿ ಪಂಚಾಯತಿ ರಾಯಲ್ಪಾಡು ಹೋಬಳಿ ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ವೆಂಕಟಮ್ಮ ಕೋಂ ಮುನಿವೆಂಕಟಪ್ಪ | |
| 25 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಎಸ್.ಸಿ.ಪಿ | ಜಯನ್ನ ಬಿನ್ ಮುನಿವೆಂಕಟರಾಮನ್ನ ಕೊಳತೂರು ಗ್ರಾಮ ಮತ್ತು ಪಂಚಾಯತಿ ರಾಯಲ್ಪಾಡು ಹೋಬಳಿ ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | 22.47 | ಜಯನ್ನ ಬಿನ್ ಮುನಿವೆಂಕಟರಾಮನ್ನ | ಕಾಮಗಾರಿ ಪೂರ್ಣಗೊಂಡಿದೆ |
| 26 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಎಸ್.ಸಿ.ಪಿ | ಮಂಜುಳ ಕೋಂ ನಾರಾಯಣಸ್ವಾಮಿ, ಮಹಮದ್‌ಪುರ, ಕೊಳತೂರು ಪಂಚಾಯತಿ ರಾಯಲ್ಪಾಡು ಹೋಬಳಿ ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ಮಂಜುಳ ಕೋಂ ನಾರಾಯಣಸ್ವಾಮಿ | |

| ಕ್ರ ಸಂ | ಜಿಲ್ಲೆ | ತಾಲ್ಲೂಕು | ಲೆಕ್ಕ ಶೀರ್ಷಿಕೆ | ಕಾಮಗಾರಿಯ ಹೆಸರು | ಅಂದಾಜು ಮೊತ್ತ | ಒಟ್ಟು ವೆಚ್ಚ | ಫಲಾನುಭವಿಗಳ ಹೆಸರು | ಷರಾ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 27 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಎಸ್.ಸಿ.ಪಿ | ಹನುಮಪ್ಪ ಬಿನ್ ವೆಂಕಟಪ್ಪ ನಾರಾಯಣಪುರ, ಮುತ್ತಕಪಲ್ಲಿ ಯಲ್ದೂರು ಪಂಚಾಯತಿ ರಾಯಲ್ಪಾಡು ಹೋಬಳಿ ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ಹನುಮಪ್ಪ ಬಿನ್ ವೆಂಕಟಪ್ಪ | |
| 28 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಎಸ್.ಸಿ.ಪಿ | ನಾರಾಯಣ ಬಿನ್ ರಾಮಪ್ಪ ಚಿಂತಮಾನಪಲ್ಲಿ ಮುದಿಮಡಗು ಪಂಚಾಯತಿ ರಾಯಲ್ಪಾಡು ಹೋಬಳಿ ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | 4.83 | ನಾರಾಯಣ ಬಿನ್ ರಾಮಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| **28** | | | | ಒಟ್ಟು | 140.00 | 126.37 | | |
| **49** | | | | ಒಟ್ಟು | 245.00 | 226.87 | | |
| **ಎಸ್.ಸಿ.ಪಿ 2018-19 ನೇ ಸಾಲಿನ ಹೊಸ ಕಾಮಗಾರಿಗಳು** | | | | | | | | |
| 1 | ಕೋಲಾರ | ಕೋಲಾರ | ಎಸ್.ಸಿ.ಪಿ | ಕೋಲಾರ ಜಿಲ್ಲೆ ಕೋಲಾರ ತಾಲ್ಲೂಕಿನ ವೇಮಗಲ್ ಹೋಬಳಿ ಹನುಮಪ್ಪ ತಂದೆ ಮುನಿಬಾಗಿಲಪ್ಪ ಬೆಳಮಾರನಹಳ್ಳಿ ಸ.ನಂ.198 ರಲ್ಲಿ ಕೊಳವೆ ಬಾವಿ | 5.00 | 4.98 | ಹನುಮಪ್ಪ ತಂದೆ ಮುನಿಬಾಗಿಲಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 2 | ಕೋಲಾರ | ಕೆ.ಜಿ.ಎಫ್ | ಎಸ್.ಸಿ.ಪಿ | ಕೋಲಾರ ಜಿಲ್ಲೆ, ಕೆ.ಜಿ.ಎಫ್ ತಾಲ್ಲೂಕು ಬೇತಮಂಗಲ ಹೋಬಳಿ ಜಯಮಂಗಲ ಗ್ರಾಮದ ಸ.ನಂ.130 ರ ಶ್ರೀ ಮುನಿಶಾಮಪ್ಪ ಉರುಫ್ ಪೀಂಚಪ್ಪ ಬಿನ್ ಶಿಂಗರಳ್ಳಿ ಮುನಿಯಪ್ಪ ಎಂಬುವವರ ಜಮೀನಿನಲ್ಲಿ ಕೊಳವೆ ಬಾವಿ ಕೊರೆಸುವುದು | 5.00 | 4.98 | ಶ್ರೀ ಮುನಿಶಾಮಪ್ಪ ಉರುಫ್ ಪೀಂಚಪ್ಪ ಬಿನ್ ಶಿಂಗರಳ್ಳಿ ಮುನಿಯಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 3 | ಕೋಲಾರ | ಮಾಲೂರು | ಎಸ್.ಸಿ.ಪಿ | ಕೋಲಾರ ಜಿಲ್ಲೆ, ಮಾಲೂರು ತಾಲ್ಲೂಕು ತಾಳಕುಂಟೆ ಗ್ರಾಮದ ಸ.ನಂ.91 ರ ಶ್ರೀ ಸೊಣ್ಣಪ್ಪ ಬಿನ್ ದೊಡ್ಡ ಕರಗಪ್ಪ ಎಂಬುವವರ ಜಮೀನಿನಲ್ಲಿ ಕೊಳವೆ ಬಾವಿ ಕೊರೆಸುವುದು | 5.00 | 3.67 | ಶ್ರೀ ಸೊಣ್ಣಪ್ಪ ಬಿನ್ ದೊಡ್ಡ ಕರಗಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 4 | ಕೋಲಾರ | ಮುಳಬಾಗಿಲು | ಎಸ್.ಸಿ.ಪಿ | ಪದ್ಮವತಮ್ಮ ಬಿನ್ ದೊರೆಸ್ವಾಮಿ, ಚಿಕ್ಕಬಂಡೆಹಳ್ಳಿ ಇವರ ಜಮೀನಿಗೆ ಕೊಳವೆ ಬಾವಿ | 5.00 | 4.98 | ಪದ್ಮವತಮ್ಮ ಬಿನ್ ದೊರೆಸ್ವಾಮಿ | ಕಾಮಗಾರಿ ಪೂರ್ಣಗೊಂಡಿದೆ |
| 5 | ಕೋಲಾರ | ಮುಳಬಾಗಿಲು | ಎಸ್.ಸಿ.ಪಿ | ವೆಂಕಟೇಶ್ ಬೊಯಿ ಬಿನ್ ನಾಗನ ಬೊಯಿ ಎನ್.ಗಡ್ಡೂರು ಗ್ರಾಮ ಇವರ ಜಮೀನಿಗೆ ಕೊಳವೆ ಬಾವಿ | 5.00 | 4.98 | ವೆಂಕಟೇಶ್ ಬೊಯಿ ಬಿನ್ ನಾಗನ ಬೊಯಿ | ಕಾಮಗಾರಿ ಪೂರ್ಣಗೊಂಡಿದೆ |
| **5** | | | | ಒಟ್ಟು | 25.00 | 23.59 | | |
| **54** | | | | ಎಸ್.ಸಿ.ಪಿ ಒಟ್ಟು | 270.00 | 250.46 | | |
| **ಟಿ.ಎಸ್.ಪಿ 2018-19 ನೇ ಸಾಲಿನ ಮುಂದುವರೆದ ಕಾಮಗಾರಿಗಳು** | | | | | | | | |
| 1 | ಕೋಲಾರ | ಮಾಲೂರು / ಮಾಲೂರು | ಟಿ.ಎಸ್.ಪಿ | ಕರಡುಗುರಕ ಗ್ರಾಮದ ಶ್ರೀ ರಾಮನಾಯ್ಕ ಮತ್ತು ಇತರರ ಜಮೀನಿನಲ್ಲಿ ಗಂಗಾ ಕಲ್ಯಾಣ ಯೋಜನೆಯಡಿ ಕೊಳವೆ ಬಾವಿ ಕಾಮಗಾರಿ | 5.00 | 4.94 | ಶ್ರೀ ರಾಮನಾಯ್ಕ | ಕಾಮಗಾರಿ ಪೂರ್ಣಗೊಂಡಿದೆ |
| 2 | ಕೋಲಾರ | ಮಾಲೂರು / ಮಾಲೂರು | ಟಿ.ಎಸ್.ಪಿ | ಹುಲಿಗುಪ್ಪೆ ಗ್ರಾಮದ ಶ್ರೀ ವೆಂಕಟಸ್ವಾಮಿ ಮತ್ತು ಇತರರ ಜಮೀನಿನಲ್ಲಿ ಗಂಗಾ ಕಲ್ಯಾಣ ಯೋಜನೆಯಡಿ ಕೊಳವೆ ಬಾವಿ ಕಾಮಗಾರಿ | 5.00 | 4.94 | ಶ್ರೀ ವೆಂಕಟಸ್ವಾಮಿ | ಕಾಮಗಾರಿ ಪೂರ್ಣಗೊಂಡಿದೆ |
| 2 | | | | ಒಟ್ಟು | 10.00 | 9.88 | | |

| ಕ್ರ | ಜಿಲ್ಲೆ | ತಾಲ್ಲೂಕು | ಲೆಕ್ಕ ಶೀರ್ಷಿಕೆ | ಕಾಮಗಾರಿಯ ಹೆಸರು | ಅಂದಾಜು ಮೊತ್ತ | ಒಟ್ಟು ವೆಚ್ಚ | ಫಲಾನುಭವಿಗಳ ಹೆಸರು | ಷರಾ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 1 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಟಿ.ಎಸ್.ಪಿ | ಎಸ್.ಎನ್.ರಾಮಚಂದ್ರಪ್ಪ ಬಿನ್ ನಾಗಪ್ಪ, ಸುಣ್ಣಕಲ್ಲು ರಾಯಲ್ಪಾಡು ಹೋಬಳಿ ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವ ಬಾವಿ ಕೊರೆದು ನೀರಾವತಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | 27.18 | ಎಸ್.ಎನ್.ರಾಮಚಂದ್ರಪ್ಪ ಬಿನ್ ನಾಗಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 2 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಟಿ.ಎಸ್.ಪಿ | ಕೃಷ್ಣಪ್ಪ ಬಿನ್ ರಾಮನ್ನ ನೆಲವಂಕಿ ಗ್ರಾಮ ಮತ್ತು ನೆಲವಂಕಿ ಹೋಬಳಿ, ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವತಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ಕೃಷ್ಣಪ್ಪ ಬಿನ್ ರಾಮನ್ನ | |
| 3 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಟಿ.ಎಸ್.ಪಿ | ಬಿ.ಸಿ.ಚಂದ್ರಶೇಖರ್ ಬಿನ್ ಚಿನ್ನಪ್ಪ ರೆಡ್ಡಿ, ಬೂರಗಮಾಕಲಹಳ್ಳಿ, ರಾಯಲ್ಪಾಡು ಹೋಬಳಿ, ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವತಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ಬಿ.ಸಿ.ಚಂದ್ರಶೇಖರ್ ಬಿನ್ ಚಿನ್ನಪ್ಪ ರೆಡ್ಡಿ | |
| 4 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಟಿ.ಎಸ್.ಪಿ | ಮುನಿರತ್ನಮ್ಮ ಕೋಂ ನರಸಿಂಹಪ್ಪ, ಅಡ್ಡಗಲ್ ರಾಯಲ್ಪಾಡು ಹೋಬಳಿ ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವತಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ಮುನಿರತ್ನಮ್ಮ ಕೋಂ ನರಸಿಂಹಪ್ಪ | |
| 5 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಟಿ.ಎಸ್.ಪಿ | ರವಣಪ್ಪ ಬಿನ್ ಸುಬ್ಬಣ್ಣ, ಬೈರಗಾನಹಳ್ಳಿ, ರಾಯಲ್ಪಾಡು ಹೋಬಳಿ, ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವತಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ರವಣಪ್ಪ ಬಿನ್ ಸುಬ್ಬಣ್ಣ | |
| 6 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಟಿ.ಎಸ್.ಪಿ | ವೆಂಕಟರವಣಪ್ಪ ಬಿನ್ ಓಬಲಪ್ಪ ಶ್ರೀರಾಮಪುರ, ಬೈರಗಾನಹಳ್ಳಿ ಗ್ರಾಮ ಮತ್ತು ಪಂಚಾಯತಿ ರಾಯಲ್ಪಾಡು ಹೋಬಳಿ, ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವ ಬಾವಿ ಕೊರೆದು ನೀರಾವತಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ವೆಂಕಟರವಣಪ್ಪ ಬಿನ್ ಓಬಲಪ್ಪ | |
| 7 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಟಿ.ಎಸ್.ಪಿ | ನಾರಾಯಣಸ್ವಾಮಿ ಬಿನ್ ಚಿಕ್ಕ ನರಸಿಂಹಪ್ಪ ಚಕ್ಕಾರ್ಲಹಳ್ಳಿ, ಆರಿಕುಂಟೆ ಪಂಚಾಯತಿ ರೋಣೂರು ಹೋಬಳಿ, ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವತಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | 18.15 | ನಾರಾಯಣಸ್ವಾಮಿ ಬಿನ್ ಚಿಕ್ಕ ನರಸಿಂಹಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 8 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಟಿ.ಎಸ್.ಪಿ | ಕದಿರಮ್ಮ ಕೋಂ ಮುನಿವೆಂಕಟಪ್ಪ ಕಾರಂಗಿ, ಮುತ್ತಪಲ್ಲಿ ಪಂಚಾಯತಿ, ಯಲ್ದೂರು ಹೋಬಳಿ, ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವತಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ಕದಿರಮ್ಮ ಕೋಂ ಮುನಿವೆಂಕಟಪ್ಪ ಕಾರಂಗಿ | |
| 9 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಟಿ.ಎಸ್.ಪಿ | ವೆಂಕಟೇಶಪ್ಪ ಬಿನ್ ಹನುಮಪ್ಪ, ಅಣಜಿಗಾನಹಳ್ಳಿ, ಚಲ್ದಿಗಾನಹಳ್ಳಿ ಪಂಚಾಯತಿ, ಕಸಬಾ ಹೋಬಳಿ, ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವತಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ವೆಂಕಟೇಶಪ್ಪ ಬಿನ್ ಹನುಮಪ್ಪ | |

| ಕ್ರ ಸಂ | ಜಿಲ್ಲೆ | ತಾಲ್ಲೂಕು | ಲೆಕ್ಕ ಶೀರ್ಷಿಕೆ | ಕಾಮಗಾರಿಯ ಹೆಸರು | ಅಂದಾಜು ಮೊತ್ತ | ಒಟ್ಟು ವೆಚ್ಚ | ಫಲಾನುಭವಿಗಳ ಹೆಸರು | ಷರಾ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 10 | ಕೋಲಾರ | ಶ್ರೀನಿವಾಸಪುರ /ಶ್ರೀನಿವಾಸಪುರ | ಟಿ.ಎಸ್.ಪಿ | ನಾಗರಾಜ ಬಿನ್ ತಿರುಮಳಪ್ಪ ಕೋಳ್ಳೂರು ಜೆ. ತಿಮ್ಮಸಂದ್ರ ಪಂಚಾಯತಿ, ಕಸಬಾ ಹೋಬಳಿ, ಶ್ರೀನಿವಾಸಪುರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವತಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ನಾಗರಾಜ ಬಿನ್ ತಿರುಮಳಪ್ಪ | |
| 11 | ಕೋಲಾರ | ಶ್ರೀನಿವಾಸಪುರ / ಕೋಲಾರ | ಟಿ.ಎಸ್.ಪಿ | ನರಸಿಂಹ ನಾಯಕ ಬಿನ್ ದೊಡ್ಡ ನಾರೆಪ್ಪ ಮದನಹಳ್ಳಿ ಪಂಚಾಯತಿ, ಸುಗಟೂರು ಹೋಬಳಿ, ಕೋಲಾರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವತಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | 13.57 | ನರಸಿಂಹ ನಾಯಕ ಬಿನ್ ದೊಡ್ಡ ನಾರೆಪ್ಪ | ಕಾಮಗಾರಿ ಪೂರ್ಣಗೊಂಡಿದೆ |
| 12 | ಕೋಲಾರ | ಶ್ರೀನಿವಾಸಪುರ / ಕೋಲಾರ | ಟಿ.ಎಸ್.ಪಿ | ದೊಡ್ಡಮುನಿಯಪ್ಪ ಬಿನ್ ಕೊಂಡಯ್ಯ, ನಾಯಕರಹಳ್ಳಿ, ಐತರಾನಹಳ್ಳಿ ಪಂಚಾಯತಿ, ಹೋಳೂರು ಹೋಬಳಿ, ಕೋಲಾರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವತಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ದೊಡ್ಡಮುನಿಯಪ್ಪ ಬಿನ್ ಕೊಂಡಯ್ಯ | |
| 13 | ಕೋಲಾರ | ಶ್ರೀನಿವಾಸಪುರ / ಕೋಲಾರ | ಟಿ.ಎಸ್.ಪಿ | ನಾರಾಯಣಸ್ವಾಮಿ ಬಿನ್ ದೊಡ್ಡನಾರಾಯಣಪ್ಪ, ವೆಲಗಲಬುರ್ರೆ, ಮದನಹಳ್ಳಿ ಪಂಚಾಯತಿ, ಸುಗಟೂರು ಹೋಬಳಿ, ಕೋಲಾರ ತಾಲ್ಲೂಕು ಇವರ ಜಮೀನಿಗೆ ಕೊಳವೆ ಬಾವಿ ಕೊರೆದು ನೀರಾವತಿ ಸೌಲಭ್ಯ ಒದಗಿಸುವ ಕಾಮಗಾರಿ. | 5.00 | | ನಾರಾಯಣಸ್ವಾಮಿ ಬಿನ್ ದೊಡ್ಡನಾರಾಯಣಪ್ಪ | |
| 15 | | | | | 65.00 | 58.90 | | |
| ಟಿ.ಎಸ್.ಪಿ 2018–19 ನೇ ಸಾಲಿನ ಹೊಸ ಕಾಮಗಾರಿಗಳು | | | | | | | | |
| 1 | ಕೋಲಾರ | ಮಾಲೂರು / ಮಾಲೂರು | ಟಿ.ಎಸ್.ಪಿ | ಕೋಲಾರ ಜಿಲ್ಲೆ, ಮಾಲೂರು ತಾಲ್ಲೂಕು ಮಿಂಡಹಳ್ಳಿ ಗ್ರಾಮದ ಸ.ನಂ.15/2, 17/1 ಮತ್ತು 17/2 ರಲ್ಲಿ ಶ್ರೀ ತಿಮ್ಮನಾಯಕ ಬಿನ್ ಮುನಿವೆಂಕಟನಾಯಕ ಎಂಬುವವರ ಜಮೀನಿನಲ್ಲಿ ಕೊಳವೆ ಬಾವಿ ಕೊರೆಸುವುದು | 5.00 | 4.97 | ಶ್ರೀ ತಿಮ್ಮನಾಯಕ ಬಿನ್ ಮುನಿವೆಂಕಟನಾಯಕ | ಕಾಮಗಾರಿ ಪೂರ್ಣಗೊಂಡಿದೆ |
| 1 | | | | ಒಟ್ಟು | 5.00 | 4.97 | | |
| 16 | | | | ಟಿ.ಎಸ್.ಪಿ ಒಟ್ಟು | 80.00 | 73.75 | | |
| 2019–20 ನೇ ಸಾಲಿನಲ್ಲಿ ಯಾವುದೇ ಎಸ್.ಸಿ.ಪಿ ಹಾಗೂ ಟಿ.ಎಸ್.ಪಿ ಕೊಳವೆ ಬಾವಿ ಕಾಮಗಾರಿಗಳನ್ನು ಕೈಗೊಂಡಿರುವುದಿಲ್ಲ | | | | | | | | |
| 2020–21 ನೇ ಸಾಲಿನಲ್ಲಿ ಯಾವುದೇ ಎಸ್.ಸಿ.ಪಿ ಹಾಗೂ ಟಿ.ಎಸ್.ಪಿ ಕೊಳವೆ ಬಾವಿ ಕಾಮಗಾರಿಗಳನ್ನು ಕೈಗೊಂಡಿರುವುದಿಲ್ಲ | | | | | | | | |

**ಮಾನ್ಯ ವಿಧಾನಸಭೆಯ ಸದಸ್ಯರಾದ ಶ್ರೀ.ನಾಗೇಶ್ ಹೆಚ್ (ಮುಳಬಾಗಿಲು) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:101ಕ್ಕೆ ಅನುಬಂಧ-2**

**ಕಳೆದ ಮೂರು ವರ್ಷಗಳಲ್ಲಿ ಎಸ್.ಸಿ.ಪಿ ಹಾಗೂ ಟಿ.ಎಸ್.ಪಿ ಲೆಕ್ಕ ಶೀರ್ಷಿಕೆಗಳಡಿ ಕೈಗೊಳ್ಳಲಾದ ಕೊಳವೆ ಬಾವಿ ಕಾಮಗಾರಿಗಳ ಘೋಶ್ವಾರೆ**

ರೂ.ಲಕ್ಷಗಳಲ್ಲಿ

| ಕ್ರ ಸಂ | ಜಿಲ್ಲೆ | ತಾಲ್ಲೂಕು | ಲೆಕ್ಕ ಶೀರ್ಷಿಕೆ | ಒಟ್ಟು ಕಾಮಗಾರಿಗಳು | ಅಂದಾಜು ಮೊತ್ತ | ವೆಚ್ಚ | ಫಲಾನುಭವಿಗಳ ಸಂಖ್ಯೆ | ಷರಾ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| **ಎಸ್.ಸಿ.ಪಿ 2018-19 ನೇ ಸಾಲಿನ ಮುಂದುವರೆದ ಕಾಮಗಾರಿಗಳು** | | | | | | | | |
| 1 | ಕೋಲಾರ | ಕೋಲಾರ | ಎಸ್.ಸಿ.ಪಿ | 1 | 5.00 | 4.17 | 1 | ಕಾಮಗಾರಿ ಪೂರ್ಣಗೊಂಡಿರುತ್ತದೆ |
| 2 | ಬಂಗಾರಪೇಟೆ | ಬಂಗಾರಪೇಟೆ | ಎಸ್.ಸಿ.ಪಿ | 4 | 20.00 | 20.58 | 4 | ಕಾಮಗಾರಿಗಳು ಪೂರ್ಣಗೊಂಡಿರುತ್ತದೆ |
| 3 | ಮಾಲೂರು | ಮಾಲೂರು | ಎಸ್.ಸಿ.ಪಿ | 4 | 20.00 | 19.58 | 5 | ಕಾಮಗಾರಿಗಳು ಪೂರ್ಣಗೊಂಡಿರುತ್ತದೆ |
| 4 | ಮುಳಬಾಗಿಲು | ಮುಳಬಾಗಿಲು | ಎಸ್.ಸಿ.ಪಿ | 12 | 60.00 | 56.17 | 12 | ಕಾಮಗಾರಿಗಳು ಪೂರ್ಣಗೊಂಡಿರುತ್ತದೆ |
| 5 | ಶ್ರೀನಿವಾಸಪುರ | ಶ್ರೀನಿವಾಸಪುರ | ಎಸ್.ಸಿ.ಪಿ | 28 | 140.00 | 126.37 | 28 | ಕಾಮಗಾರಿಗಳು ಪೂರ್ಣಗೊಂಡಿರುತ್ತದೆ |
| | | ಒಟ್ಟು | | 49 | 245.00 | 226.87 | 50 | |
| **ಎಸ್.ಸಿ.ಪಿ 2018-19 ನೇ ಸಾಲಿನ ಹೊಸ ಕಾಮಗಾರಿಗಳು** | | | | | | | | |
| 1 | ಕೋಲಾರ | ಕೋಲಾರ | ಎಸ್.ಸಿ.ಪಿ | 1 | 5.00 | 4.98 | 1 | ಕಾಮಗಾರಿ ಪೂರ್ಣಗೊಂಡಿರುತ್ತದೆ |
| 2 | ಬಂಗಾರಪೇಟೆ | ಕೆ.ಜಿ.ಎಫ್ | ಎಸ್.ಸಿ.ಪಿ | 1 | 5.00 | 4.98 | 1 | ಕಾಮಗಾರಿ ಪೂರ್ಣಗೊಂಡಿರುತ್ತದೆ |
| 3 | ಮಾಲೂರು | ಮಾಲೂರು | ಎಸ್.ಸಿ.ಪಿ | 1 | 5.00 | 3.67 | 1 | ಕಾಮಗಾರಿ ಪೂರ್ಣಗೊಂಡಿರುತ್ತದೆ |
| 4 | ಮುಳಬಾಗಿಲು | ಮುಳಬಾಗಿಲು | ಎಸ್.ಸಿ.ಪಿ | 2 | 10.00 | 9.96 | 1 | ಕಾಮಗಾರಿ ಪೂರ್ಣಗೊಂಡಿರುತ್ತದೆ |
| | | ಒಟ್ಟು | | 5 | 25.00 | 23.59 | 4 | |
| | | ಎಸ್.ಸಿ.ಪಿ ಒಟ್ಟು | | 54 | 270.00 | 250.46 | 54 | |
| **ಟಿ.ಎಸ್.ಪಿ 2018-19 ನೇ ಸಾಲಿನ ಮುಂದುವರೆದ ಕಾಮಗಾರಿಗಳು** | | | | | | | | |
| 1 | ಮಾಲೂರು | ಮಾಲೂರು | ಟಿ.ಎಸ್.ಪಿ | 2 | 10.00 | 9.88 | 2 | ಕಾಮಗಾರಿಗಳು ಪೂರ್ಣಗೊಂಡಿರುತ್ತದೆ |
| 2 | ಶ್ರೀನಿವಾಸಪುರ | ಶ್ರೀನಿವಾಸಪುರ | ಟಿ.ಎಸ್.ಪಿ | 13 | 65.00 | 58.90 | 13 | ಕಾಮಗಾರಿಗಳು ಪೂರ್ಣಗೊಂಡಿರುತ್ತದೆ |
| | | ಒಟ್ಟು | | 15 | 75.00 | 68.78 | 15 | |
| **ಟಿ.ಎಸ್.ಪಿ 2018-19 ನೇ ಸಾಲಿನ ಹೊಸ ಕಾಮಗಾರಿಗಳು** | | | | | | | | |
| 1 | ಮಾಲೂರು | ಮಾಲೂರು | ಟಿ.ಎಸ್.ಪಿ | 1 | 5.00 | 4.97 | 1 | ಕಾಮಗಾರಿ ಪೂರ್ಣಗೊಂಡಿರುತ್ತದೆ |
| | | ಒಟ್ಟು | | 1 | 5.00 | 4.97 | 1 | |
| | | ಟಿ.ಎಸ್.ಪಿ ಒಟ್ಟು | | 16 | 80.00 | 73.75 | 16 | |
| **2019-20 ನೇ ಸಾಲಿನಲ್ಲಿ ಯಾವುದೇ ಎಸ್.ಸಿ.ಪಿ ಹಾಗೂ ಟಿ.ಎಸ್.ಪಿ ಕೊಳವೆ ಬಾವಿ ಕಾಮಗಾರಿಗಳನ್ನು ಕೈಗೊಂಡಿರುವುದಿಲ್ಲ** | | | | | | | | |
| **2020-21 ನೇ ಸಾಲಿನಲ್ಲಿ ಯಾವುದೇ ಎಸ್.ಸಿ.ಪಿ ಹಾಗೂ ಟಿ.ಎಸ್.ಪಿ ಕೊಳವೆ ಬಾವಿ ಕಾಮಗಾರಿಗಳನ್ನು ಕೈಗೊಂಡಿರುವುದಿಲ್ಲ** | | | | | | | | |

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 102
2. ಸದಸ್ಯರ ಹೆಸರು : ಶ್ರೀ ನಾಗೇಶ ಹೆಚ್.
3. ಉತ್ತರಿಸಬೇಕಾದ ದಿನಾಂಕ : 15/02/2022
4. ಉತ್ತರಿಸುವ ಸಚಿವರು : ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಮುಳಬಾಗಿಲು ತಾಲ್ಲೂಕಿನಲ್ಲಿ ಒಟ್ಟು 584 ಕೆರೆಗಳಿದ್ದು, ಕೆ.ಸಿ.ವ್ಯಾಲಿ ಯೋಜನೆಯಡಿ ಈ ತಾಲ್ಲೂಕು ವ್ಯಾಪ್ತಿಯ ಕೇವಲ 32 ಕೆರೆಗಳಿಗೆ ಮಾತ್ರ ನೀರು ತುಂಬಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೋಲಾರ ಜಿಲ್ಲೆ, ಮುಳಬಾಗಿಲು ತಾಲ್ಲೂಕಿನಡಿಯಲ್ಲಿ ಸಣ್ಣ ನೀರಾವರಿ ಇಲಾಖೆ ವ್ಯಾಪ್ತಿಯ 35 ಕೆರೆಗಳು ಮತ್ತು ಜಿಲ್ಲಾ ಪಂಚಾಯತ್ ಇಲಾಖೆ ವ್ಯಾಪ್ತಿಯ 549 ಕೆರೆಗಳು ಸೇರಿ ಒಟ್ಟು 584 ಕೆರೆಗಳು ಬರುತ್ತದೆ.<br><br>ಕೆ.ಸಿ.ವ್ಯಾಲಿ ಯೋಜನೆಯಡಿ ಮೊದಲನೇ ಹಂತದಲ್ಲಿ ನೀರಿನ ಲಭ್ಯತೆ ಅನುಸಾರವಾಗಿ ಮುಳಬಾಗಿಲು ತಾಲ್ಲೂಕಿನ 31 ಕೆರೆಗಳಿಗೆ ತುಂಬಿಸಲು ಯೋಜಿಸಲಾಗಿದ್ದು, ಎಲ್ಲಾ 31 ಕೆರೆಗಳಿಗೂ ನೀರು ತುಂಬಿಸಲಾಗುತ್ತಿದೆ. |
| ಆ | ಬಂದಿದ್ದಲ್ಲಿ, ಈ ತಾಲ್ಲೂಕಿನ ಇನ್ನುಳಿದ 552 ಕೆರೆಗಳಿಗೆ ನೀರು ತುಂಬಿಸುವ ಕಾರ್ಯಕ್ಕೆ ಸರ್ಕಾರ ಕೈಗೊಂಡ ಕ್ರಮಗಳೇನು; ಯಾವ ಕಾಲಮಿತಿಯೊಳಗೆ ಈ ಕೆರೆಗಳಿಗೆ ನೀರನ್ನು ತುಂಬಿಸಲಾಗುವುದು? (ಸಂಪೂರ್ಣ ಮಾಹಿತಿ ಒದಗಿಸುವುದು). | ➢ ಕೆ.ಸಿ.ವ್ಯಾಲಿ ಯೋಜನೆಯಡಿ ಮೊದಲನೇ ಹಂತದಲ್ಲಿ 400 ಎಂ.ಎಲ್.ಡಿ ನೀರನ್ನು ಕೋಲಾರ ಜಿಲ್ಲೆಯ ಹಾಗೂ ಚಿಂತಾಮಣಿ ತಾಲ್ಲೂಕಿನ 126 ಕೆರೆಗಳಿಗೆ ನೀರು ತುಂಬಿಸಲು ಯೋಜನೆಯನ್ನು ರೂಪಿಸಲಾಗಿದ್ದು, ಅದರಂತೆ ಮುಳಬಾಗಿಲು ತಾಲ್ಲೂಕಿನ 31 ಕೆರೆಗಳನ್ನು ತುಂಬಿಸಲು ಯೋಜಿಸಲಾಗಿದ್ದು, ಪ್ರಸ್ತುತ ಎಲ್ಲಾ ಕೆರೆಗಳನ್ನು ತುಂಬಿಸಲಾಗಿರುತ್ತದೆ. ಸದರಿ ಕೆರೆಗಳ ವಿವರಗಳನ್ನು ಅನುಬಂಧ-1 ರಲ್ಲಿ ನೀಡಲಾಗಿದೆ.<br>➢ ಕೆ.ಸಿ.ವ್ಯಾಲಿ ಯೋಜನೆಯ ಮೊದಲನೇ ಹಂತದ ಕೆರೆಗಳ ಶುದ್ಧತ್ವ ಮಟ್ಟ (Saturation Point) ತಲುಪಿದ ನಂತರ ವಿವಿಧ ಕಡೆ ಪಂಪ್ ಹೌಸ್‌ಗಳನ್ನು ನಿರ್ಮಿಸಿ ವಿವಿಧ ರಿಡ್ಜ್ (ಎತ್ತರದ) ಪಾಯಿಂಟ್‌ಗಳಿಗೆ ಪಂಪ್ ಮಾಡಿ ನಂತರ ಬರುವ ಎಲ್ಲಾ ಕೆರೆಗಳಿಗೆ ಗುರುತ್ವಾಕರ್ಷಣ ಬಲದಿಂದ ಒಂದು ಕೆರೆಯಿಂದ ಇನ್ನೊಂದು ಕೆರೆಗೆ ಸ್ವಾಭಾವಿಕ ನಾಲೆಗಳ ಮುಖಾಂತರ ಹಾಗೂ ನೀರಿನ ಲಭ್ಯತೆ ಅನುಸಾರವಾಗಿ ಕೆ.ಸಿ.ವ್ಯಾಲಿ ಯೋಜನೆಯ ಎರಡನೇ ಹಂತದ ಯೋಜನೆಯಡಿ ಮುಳಬಾಗಿಲು ತಾಲ್ಲೂಕಿನ 42 ಕೆರೆಗಳನ್ನು ತುಂಬಿಸಲು ಯೋಜಿಸಲಾಗಿರುತ್ತದೆ. ಅದರಂತೆ ಮೊದಲನೇ ಹಂತದಲ್ಲಿ 31 ಮತ್ತು ಎರಡನೇ ಹಂತದಲ್ಲಿ 42 ಕೆರೆಗಳು ಸೇರಿ ಒಟ್ಟು 73 ಕೆರೆಗಳನ್ನು ತುಂಬಿಸಲು ಯೋಜಿಸಲಾಗಿದೆ. ಸದರಿ 42 ಕೆರೆಗಳ ವಿವರಗಳನ್ನು ಅನುಬಂಧ-2 ರಲ್ಲಿ ನೀಡಲಾಗಿದೆ.<br>➢ ಎರಡನೇ ಹಂತದ ಕಾಮಗಾರಿಗೆ ಟೆಂಡರ್ ಆಹ್ವಾನಿಸಲಾಗಿರುತ್ತದೆ. ಸದರಿ ಟೆಂಡರ್ ಪ್ರಕ್ರಿಯೆಯನ್ನು ಶೀಘ್ರವಾಗಿ ಪೂರ್ಣಗೊಳಿಸಿ ಕಾಮಗಾರಿಯನ್ನು ಕೈಗೆತ್ತಿಕೊಂಡು ಅನುಷ್ಠಾನಗೊಳಿಸಲು ಕ್ರಮ ವಹಿಸಲಾಗುವುದು. |

ಕಡತ ಸಂಖ್ಯೆ:MID 8 LAQ 2022

(ಜೆ.ಸಿ.ಮಾಧುಸ್ವಾಮಿ)
ಕಾನೂನು, ಸಂಸದೀಯ ವ್ಯವಹಾರಗಳು
ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು.

ಅನುಬಂಧ –1

ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ. ನಾಗೇಶ್ ಹೆಚ್. (ಮುಳಬಾಗಿಲು) ರವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 102 ಕ್ಕೆ ವಿವರಗಳು

ಕೆ & ಸಿ ವ್ಯಾಲಿ ಯೋಜನೆಯ ಒಂದನೇ ಹಂತದಲ್ಲಿ ಸಂಸ್ಕರಿಸಿದ ತ್ಯಾಜ್ಯ ನೀರನ್ನು ತುಂಬಿಸಲಾಗಿರುವ ಕೆರೆಗಳ ಪಟ್ಟಿ

| ಕ್ರ ಸಂ | ಜಿಲ್ಲೆ | ತಾಲ್ಲೂಕು | ಕೆರೆಯ ಹೆಸರು | ಕೆರೆಯ ಮೂಲ ಶೇಖರಣಾ ಸಾಮರ್ಥ್ಯ (ಎಂ.ಸಿ.ಎಫ್.ಟಿ. ನಲ್ಲಿ) |
|---|---|---|---|---|
| 1 | ಕೋಲಾರ | ಮುಳಬಾಗಿಲು | ಖಾದರಿಪುರ ಏರುಕುಲಗುಂಟ ಕೆರೆ | 3.39 |
| 2 | ಕೋಲಾರ | ಮುಳಬಾಗಿಲು | ವಿರುಪಾಕ್ಷ ಗುಟ್ಟಹಳ್ಳಿ ದೊಡ್ಡಕೆರೆ | 7.57 |
| 3 | ಕೋಲಾರ | ಮುಳಬಾಗಿಲು | ಜಮ್ಮನಹಳ್ಳಿ ಕೆರೆ | 10.45 |
| 4 | ಕೋಲಾರ | ಮುಳಬಾಗಿಲು | ವರದಗಾನಹಳ್ಳಿ ಬೀದರ ಕೆರೆ | 5.75 |
| 5 | ಕೋಲಾರ | ಮುಳಬಾಗಿಲು | ವಿಜಲಪುರ ದೊಡ್ಡಕೆರೆ | 12.78 |
| 6 | ಕೋಲಾರ | ಮುಳಬಾಗಿಲು | ಗಂಜಗುಂಟೆ ದೊಡ್ಡಕೆರೆ | 10.19 |
| 7 | ಕೋಲಾರ | ಮುಳಬಾಗಿಲು | ಆವಣಿ ದೊಡ್ಡಕೆರೆ | 20.48 |
| 8 | ಕೋಲಾರ | ಮುಳಬಾಗಿಲು | ಊರಕುಂಟೆ ಮಿಟ್ಟೂರು ದೊಡ್ಡಕೆರೆ | 33.24 |
| 9 | ಕೋಲಾರ | ಮುಳಬಾಗಿಲು | ಆವಲಮರಕಲಘಟ್ಟ ದೊಡ್ಡಕೆರೆ | 8.10 |
| 10 | ಕೋಲಾರ | ಮುಳಬಾಗಿಲು | ಮುಳಬಾಗಿಲು ಕೆರೆ / ಮುಳಬಾಗಿಲು ಕೆಂಗುಂಟೆ ಕೆರೆ | 2.64 |
| 11 | ಕೋಲಾರ | ಮುಳಬಾಗಿಲು | ಸೋಮೇಶ್ವರ ಪಾಳ್ಯ ಕೆರೆ | 5.75 |
| 12 | ಕೋಲಾರ | ಮುಳಬಾಗಿಲು | ಮುಳಬಾಗಿಲು ಇಂಡ್ಲ (ಅಂದರೆ) ದರ್ಗ ಕೆರೆ | 5.22 |
| 13 | ಕೋಲಾರ | ಮುಳಬಾಗಿಲು | ಸೊಣ್ಣವಾಡಿ ದೊಡ್ಡಕೆರೆ | 9.40 |
| 14 | ಕೋಲಾರ | ಮುಳಬಾಗಿಲು | ಮಂಚಿಗಂಹಳ್ಳ ಕೆರೆ / ಕೂತನಹಳ್ಳಿ ಕೆರೆ | 10.97 |
| 15 | ಕೋಲಾರ | ಮುಳಬಾಗಿಲು | ಗುಮ್ಮಲದೂರು ಪಟೇಲ್ ಕೆರೆ (ಅಂದರೆ) ಗುಮಲಪೂರ ಕೆರೆ | 2.09 |
| 16 | ಕೋಲಾರ | ಮುಳಬಾಗಿಲು | ವಲಘಾನಿ ದೊಡ್ಡಕೆರೆ | 13.85 |
| 17 | ಕೋಲಾರ | ಮುಳಬಾಗಿಲು | ಕನ್ನಸಂದ್ರ ದೊಡ್ಡಕೆರೆ | 14.63 |
| 18 | ಕೋಲಾರ | ಮುಳಬಾಗಿಲು | ತಾಯಲೂರು ಅಮಾನಿ ಕೆರೆ | 110.52 |
| 19 | ಕೋಲಾರ | ಮುಳಬಾಗಿಲು | ಮಡ್ಡೇರಿ ದೊಡ್ಡಕೆರೆ | 12.40 |
| 20 | ಕೋಲಾರ | ಮುಳಬಾಗಿಲು | ಖಾದರಿಪುರ ಗೋಪಾಲ ಕೆರೆ | 4.96 |
| 21 | ಕೋಲಾರ | ಮುಳಬಾಗಿಲು | ಲಿಂಗಾಪುರ ದೊಡ್ಡಕೆರೆ | 2.61. |
| 22 | ಕೋಲಾರ | ಮುಳಬಾಗಿಲು | ಸಿದ್ದಗಟ್ಟ ಹೊಸಕೆರೆ | 3.39 |
| 23 | ಕೋಲಾರ | ಮುಳಬಾಗಿಲು | ಮೇಡಿಗಪಲ್ಲ ಕೆರೆ | 5.75 |
| 24 | ಕೋಲಾರ | ಮುಳಬಾಗಿಲು | ಸಿದ್ಧಗಟ್ಟ ನಾಕೆಂವಡ್ಡು ಕೆರೆ | 0.52 |
| 25 | ಕೋಲಾರ | ಮುಳಬಾಗಿಲು | ಮಾರಾಂಡಹಳ್ಳಿ ಕೆರೆ / ಎಂ ಹೊಸಹಳ್ಳಿಕೆರೆ | 48.61 |
| 26 | ಕೋಲಾರ | ಮುಳಬಾಗಿಲು | ಕಪ್ಪಲಮಡಗು ವಡ್ಡುಕೆರೆ / ಮುಚ್ಚಿವೊಡ್ಡು ಕೆರೆ | 11.50 |
| 27 | ಕೋಲಾರ | ಮುಳಬಾಗಿಲು | ಮರಹೇರು ದೊಡ್ಡಕೆರೆ | 10.97 |
| 28 | ಕೋಲಾರ | ಮುಳಬಾಗಿಲು | ನಂಗಲಿ ದೊಡ್ಡಕೆರೆ | 145.32 |
| 29 | ಕೋಲಾರ | ಮುಳಬಾಗಿಲು | ಬ್ಯಾಟನೂರು ಮಲ್ಲಪ್ಪನಕೆರೆ | 83.63 |
| 30 | ಕೋಲಾರ | ಮುಳಬಾಗಿಲು | ದೊಡ್ಡದನ ನಯಕಕೆರೆ | 11.36 |
| 31 | ಕೋಲಾರ | ಮುಳಬಾಗಿಲು | ಉಪ್ಪು ಕೆರೆ | 18.00 |

375

ಅನುಬಂಧ -2

ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ. ನಾಗೇಶ್ ಹೆಚ್. (ಮುಳಬಾಗಿಲು) ರವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 102 ಕ್ಕೆ ವಿವರಗಳು

ಕೆ & ಸಿ ವ್ಯಾಲಿ ಯೋಜನೆಯ ಎರಡನೇ ಹಂತದಲ್ಲಿ ಸಂಸ್ಕರಿಸಿದ ತ್ಯಾಜ್ಯ ನೀರನ್ನು ತುಂಬಿಸಲು ಉದ್ದೇಶಿಸಿರುವ ಕೆರೆಗಳ ಪಟ್ಟಿ

| ಕ್ರ ಸಂ | ಜಿಲ್ಲೆ | ತಾಲ್ಲೂಕು | ಕೆರೆಯ ಹೆಸರು | ಕೆರೆಯ ಮೂಲ ಶೇಖರಣಾ ಸಾಮರ್ಥ್ಯ (ಎಂ.ಸಿ.ಎಫ್.ಟಿ. ನಲ್ಲಿ) |
|---|---|---|---|---|
| 1 | ಕೋಲಾರ | ಮುಳಬಾಗಿಲು | ಸನ್ನವಾಡಿ ಕೆರೆ. | 1.554 |
| 2 | ಕೋಲಾರ | ಮುಳಬಾಗಿಲು | ಪಾಲೆನಹಳ್ಳಿ ಗಂಗಾಪುರ ಕೆರೆ. | 10.065 |
| 3 | ಕೋಲಾರ | ಮುಳಬಾಗಿಲು | ಪಿಚ್ಚ ಗುಂಟ್ಲಹಳ್ಳಿ ಕೆರೆ. | 12.007 |
| 4 | ಕೋಲಾರ | ಮುಳಬಾಗಿಲು | ದೊಡ್ಡ ತಮ್ಮನಹಳ್ಳಿ ಕೆರೆ | 4.803 |
| 5 | ಕೋಲಾರ | ಮುಳಬಾಗಿಲು | ಚಪ್ಪರ ನಹಳ್ಳಿ ಕೆರೆ | 11.336 |
| 6 | ಕೋಲಾರ | ಮುಳಬಾಗಿಲು | ಶೆಟ್ಟಿ ಕಲ್ಲು ಕೆರೆ | 19.67 |
| 7 | ಕೋಲಾರ | ಮುಳಬಾಗಿಲು | ಕವತ ನಹಳ್ಳಿ ಕೆರೆ | 2.578 |
| 8 | ಕೋಲಾರ | ಮುಳಬಾಗಿಲು | ಗುಮ್ಮಲಾಪುರ ಕೆರೆ | 5.085 |
| 9 | ಕೋಲಾರ | ಮುಳಬಾಗಿಲು | ಕಡಕಚ್ಚನಹಳ್ಳಿ ಕೆರೆ | 1.978 |
| 10 | ಕೋಲಾರ | ಮುಳಬಾಗಿಲು | ಚೊಕ್ಕ ದೊಡ್ಡಿ ಕೆರೆ-1 | 5.933 |
| 11 | ಕೋಲಾರ | ಮುಳಬಾಗಿಲು | ಚೊಕ್ಕ ದೊಡ್ಡಿ ಕೆರೆ-2 | 4.591 |
| 12 | ಕೋಲಾರ | ಮುಳಬಾಗಿಲು | ದೊಡ್ಡ ಗುಂಟ್ಲ ಕೆರೆ. | 5.792 |
| 13 | ಕೋಲಾರ | ಮುಳಬಾಗಿಲು | ಸಮಗಂದ ಹಳ್ಳಿ ಕೆರೆ -1 | 3.496 |
| 14 | ಕೋಲಾರ | ಮುಳಬಾಗಿಲು | ಸಮಗಂದ ಹಳ್ಳಿ ಕೆರೆ -2 | 3.673 |
| 15 | ಕೋಲಾರ | ಮುಳಬಾಗಿಲು | ದೊಮ್ಮಸಂದ್ರ ಕೆರೆ | 6.286 |
| 16 | ಕೋಲಾರ | ಮುಳಬಾಗಿಲು | ಬೆಳಗಾನಹಳ್ಳಿ ಕೆರೆ | 14.62 |
| 17 | ಕೋಲಾರ | ಮುಳಬಾಗಿಲು | ಅಗರ ಕೆರೆ | 17.198 |
| 18 | ಕೋಲಾರ | ಮುಳಬಾಗಿಲು | ಸಾತನೂರು ಬಿಸನಹಳ್ಳಿ ಕೆರೆ-2 | 4.132 |
| 19 | ಕೋಲಾರ | ಮುಳಬಾಗಿಲು | ಸಾತನೂರು ಬಿಸನಹಳ್ಳಿ ಕೆರೆ-1 | 6.251 |
| 20 | ಕೋಲಾರ | ಮುಳಬಾಗಿಲು | ಮುರುಕನ ಕುಂಟೆ ಕೆರೆ | 5.368 |
| 21 | ಕೋಲಾರ | ಮುಳಬಾಗಿಲು | ಕೊಂಡೇನಹಳ್ಳಿ ಕೆರೆ | 6.392 |
| 22 | ಕೋಲಾರ | ಮುಳಬಾಗಿಲು | ಮಂಡಿಕಲ್ಲು ಕೆರೆ | 12.607 |
| 23 | ಕೋಲಾರ | ಮುಳಬಾಗಿಲು | ಊ.ಗೊಲ್ಲಹಳ್ಳಿ ಕೆರೆ | 27.263 |
| 24 | ಕೋಲಾರ | ಮುಳಬಾಗಿಲು | ತಾವರೆಕೆರೆ | 18.929 |
| 25 | ಕೋಲಾರ | ಮುಳಬಾಗಿಲು | ಕೊಲದೇವಿ ಕೆರೆ | 46.086 |
| 26 | ಕೋಲಾರ | ಮುಳಬಾಗಿಲು | ಗುಜ್ಜನಹಳ್ಳಿ ಕೆರೆ | 73.773 |
| 27 | ಕೋಲಾರ | ಮುಳಬಾಗಿಲು | ಮುಡಿಯನೂರು | 72.36 |
| 28 | ಕೋಲಾರ | ಮುಳಬಾಗಿಲು | ಉತ್ತನೂರು ಕೆರೆ | 78.611 |
| 29 | ಕೋಲಾರ | ಮುಳಬಾಗಿಲು | ಊ.ಗೊಲ್ಲಹಳ್ಳಿ ಕೆರೆ-2 | 3.108 |
| 30 | ಕೋಲಾರ | ಮುಳಬಾಗಿಲು | ಊ.ಗೊಲ್ಲಹಳ್ಳಿ ಕೆರೆ-1 | 5.792 |
| 31 | ಕೋಲಾರ | ಮುಳಬಾಗಿಲು | ಹರಪನಾಯಕನಹಳ್ಳಿ ಕೆರೆ. | 11.407 |
| 32 | ಕೋಲಾರ | ಮುಳಬಾಗಿಲು | ವಮ್ಮಸಂದ್ರ ಕೆರೆ-3 | 9.853 |
| 33 | ಕೋಲಾರ | ಮುಳಬಾಗಿಲು | ವಮ್ಮಸಂದ್ರ ಕೆರೆ-2 | 3.461 |
| 34 | ಕೋಲಾರ | ಮುಳಬಾಗಿಲು | ವಮ್ಮಸಂದ್ರ ಕೆರೆ-1 | 2.472 |
| 35 | ಕೋಲಾರ | ಮುಳಬಾಗಿಲು | ಸಂಗ ಸಂದ್ರ ಕೆರೆ. | 34.432 |
| 36 | ಕೋಲಾರ | ಮುಳಬಾಗಿಲು | ಕಗ್ಗಲನಾತ ಕೆರೆ. | 17.057 |
| 37 | ಕೋಲಾರ | ಮುಳಬಾಗಿಲು | ಗುಡಿಪಲ್ಲಿ ಕೆರೆ | 61.024 |
| 38 | ಕೋಲಾರ | ಮುಳಬಾಗಿಲು | ರಾಜೇಂದ್ರಹಳ್ಳಿ ಕೆರೆ | 32.914 |
| 39 | ಕೋಲಾರ | ಮುಳಬಾಗಿಲು | ಹೊಸಹಳ್ಳಿ ಕೆರೆ | 50.006 |
| 40 | ಕೋಲಾರ | ಮುಳಬಾಗಿಲು | ಬೂದಿದಿನ್ನೂರು ಕೆರೆ | 14.02 |
| 41 | ಕೋಲಾರ | ಮುಳಬಾಗಿಲು | ಕಾಡೇನಹಳ್ಳಿ ಕೆರೆ | 29.771 |
| 42 | ಕೋಲಾರ | ಮುಳಬಾಗಿಲು | ಮುಸ್ಟೂರು ಕೆರೆ | 103.861 |

# ಗುರುತಿನ ಪ್ರಶ್ನೆ ಸಂಖ್ಯೆ: 102 ಕ್ಕೆ ಪೂರಕ ಟಿಪ್ಪಣಿ

ಕೆ & ಸಿ ವ್ಯಾಲಿ ಯೋಜನೆಯಡಿ ಬೆಂಗಳೂರು ನಗರದ ಕೋರಮಂಗಲ ಮತ್ತು ಚಲ್ಲಘಟ್ಟ ಹಾಗೂ ಬೆಳ್ಳಂದೂರು ಸಂಸ್ಕರಣ ಘಟಕಗಳಿಂದ ಒಟ್ಟು 400 ಎಂ.ಎಲ್.ಡಿ ದ್ವಿತೀಯ ಹಂತದಲ್ಲಿ ಸಂಸ್ಕರಿಸಿದ ತ್ಯಾಜ್ಯ ನೀರನ್ನು ಏತ ನೀರಾವರಿ ಮೂಲಕ ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಯ ಚಿಂತಾಮಣಿ ತಾಲ್ಲೂಕಿನ ಒಟ್ಟು 126 ಕೆರೆಗಳಿಗೆ ತುಂಬಿಸಲು ಉದ್ದೇಶಿಸಲಾಗಿದ್ದು, ಯೋಜನೆಯ ಅಂದಾಜು ಮೊತ್ತ ರೂ.1450.00 ಕೋಟಿಗಳಾಗಿರುತ್ತದೆ.

ಕೆ & ಸಿ ವ್ಯಾಲಿ ಮೊದಲನೇ ಹಂತದ ಕಾಮಗಾರಿಯನ್ನು ದಿನಾಂಕ: 02-06-2018 ರಂದು ಪ್ರಾಯೋಗಿಕವಾಗಿ ಚಾಲನೆ ಮಾಡಲಾಗಿರುತ್ತದೆ. ಇಲ್ಲಿಯವರೆವಿಗೂ, ಕೋರಮಂಗಲ ಚಲಘಟ್ಟ (ಕೆ&ಸಿ) ಸಂಸ್ಕರಣಾ ಘಟಕಗಳಿಂದ ಯೋಜಿತ ಪರಿಮಾಣವಾದ 400 ಎಂ.ಎಲ್.ಡಿ. ಸಂಸ್ಕರಿಸಿದ ತ್ಯಾಜ್ಯ ನೀರಿನ ಪೈಕಿ ಲಭ್ಯವಾಗುತ್ತಿರುವ ಪ್ರಸ್ತುತ ಸರಾಸರಿ ದಿನಂಪ್ರತಿ 346.00 ಎಂ.ಎಲ್.ಡಿ. ನೀರನ್ನು ಕೋಲಾರ ಜಿಲ್ಲೆಯ 121 ಕೆರೆ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಯ 5 ಕರೆಗಳನ್ನು ತುಂಬಿಸಲಾಗುತ್ತಿದ್ದು, ಪ್ರಸ್ತುತ ಯೋಜಿತ 126 ಕೆರೆಗಳ ಜೊತೆಗೆ ಯೋಜನೆಯ ಅನುಷ್ಠಾನದ ನಂತರ ಹೆಚ್ಚುವರಿಯಾಗಿ 14 ಕೆರೆಗಳು ಸೇರ್ಪಡೆಯಾಗಿ ಒಟ್ಟು 140 ಕೆರೆಗಳಾಗಿರುತ್ತವೆ. ಇವುಗಳ ಪೈಕಿ ಪ್ರಸ್ತುತ 138 ಕೆರೆಗಳಿಗೆ 7.68 ಟಿ.ಎಂ.ಸಿ. ಮತ್ತು 133 ಚೆಕ್‌ಡ್ಯಾಂಗಳಿಗೆ 1.20 ಟಿ.ಎಂ.ಸಿ. ಒಟ್ಟು 8.88 ಟಿ.ಎಂ.ಸಿ ನೀರನ್ನು ಪೂರ್ಣ ಪ್ರಮಾಣದಲ್ಲಿ ತುಂಬಿಸಲಾಗಿರುತ್ತದೆ.

ಈ ಯೋಜನೆಯ ಮೊದಲನೇ ಹಂತದಲ್ಲಿ ತುಂಬಿಸಲು ಉದ್ದೇಶಿಸಲಾಗಿರುವ ಕೋಲಾರ ಜಿಲ್ಲೆ, ಮುಳಬಾಗಿಲು ತಾಲ್ಲೂಕಿನ ಒಟ್ಟು 31 ಕೆರೆಗಳನ್ನು ಈಗಾಗಲೇ ತುಂಬಿಸಲಾಗಿರುತ್ತದೆ.

ಬೆಂಗಳೂರು ನಗರದ ಸಂಸ್ಕರಿಸಿದ ತ್ಯಾಜ್ಯ ನೀರನ್ನು ಕೋಲಾರ ಜಿಲ್ಲೆಯ ಹಾಗೂ ಚಿಕ್ಕಬಳ್ಳಾಪುರ ಜಿಲ್ಲೆಯ ಚಿಂತಾಮಣಿ ತಾಲ್ಲೂಕಿನ ಒಟ್ಟು 126 ಕೆರೆಗಳಿಗೆ ತುಂಬಿಸುವ ಏತ ನೀರಾವರಿ ಯೋಜನೆಯ ದ್ವಿತೀಯ ಹಂತದಲ್ಲಿ 276 ಕೆರೆಗಳಿಗೆ ಶೇಖರಣಾ ಸಾಮರ್ಥ್ಯದ ಶೇಕಡಾ 50ರಷ್ಟು ತುಂಬಿಸಲು ಯೋಜಿಲಾಗಿರುತ್ತದೆ. ಯೋಜನೆಯ ಅಂದಾಜು ಮೊತ್ತ ರೂ.455.00 ಕೋಟಿಗಳಾಗಿರುತ್ತದೆ.

ಕೆ.ಸಿ.ವ್ಯಾಲಿ ಯೋಜನೆಯ ಮೊದಲನೇ ಹಂತದ ಕೆರೆಗಳ ಶುದ್ಧತ್ವ ಮಟ್ಟ (Saturation Point) ತಲುಪಿದ ನಂತರ ವಿವಿಧ ಕಡೆ ಪಂಪ್ ಹೌಸ್‌ಗಳನ್ನು ನಿರ್ಮಿಸಿ ವಿವಿಧ ರಿಡ್ಜ್ (ಎತ್ತರದ) ಪಾಯಿಂಟ್‌ಗಳಿಗೆ ಪಂಪ್ ಮಾಡಿ ನಂತರ ಬರುವ ಎಲ್ಲಾ ಕೆರೆಗಳಿಗೆ ಗುರುತ್ವಾಕರ್ಷಣ ಬಲದಿಂದ ಒಂದು ಕೆರೆಯಿಂದ ಇನ್ನೊಂದು ಕೆರೆಗೆ ಸ್ವಾಭಾವಿಕ ನಾಲೆಗಳ ಮುಖಾಂತರ ಹಾಗೂ ನೀರಿನ ಲಭ್ಯತೆ ಅನುಸಾರವಾಗಿ ದ್ವಿತೀಯ ಹಂತದಲ್ಲಿ ಮುಳಬಾಗಿಲು ತಾಲ್ಲೂಕಿನ 42 ಕೆರೆಗಳನ್ನು ತುಂಬಿಸಲು ಯೋಜಿಸಲಾಗಿರುತ್ತದೆ.

ದ್ವಿತೀಯ ಹಂತದ ಕಾಮಗಾರಿಗೆ ಟೆಂಡರ್ ಆಹ್ವಾನಿಸಲಾಗಿದ್ದು, ಟೆಂಡರ್ ಪ್ರಕ್ರಿಯೆ ಪೂರ್ಣಗೊಂಡ ನಂತರ ಕಾಮಗಾರಿಯನ್ನು ಶೀಘ್ರವಾಗಿ ಅನುಷ್ಠಾನಗೊಳಿಸಲಾಗುವುದು.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 103
ಸದಸ್ಯರ ಹೆಸರು : ಶ್ರೀ ಲಿಂಗೇಶ್ ಕೆ.ಎಸ್.(ಬೇಲೂರು)
ಉತ್ತರಿಸಬೇಕಾದ ದಿನಾಂಕ : 15.02.2022
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಯವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 03 ವರ್ಷಗಳಲ್ಲಿ ರಾಜ್ಯದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ವ್ಯಾಪ್ತಿಗೆ ಸೇರಿದ ಹಲವಾರು ಇಲಾಖೆಯ ಅಧಿಕಾರಿಗಳ ಮೇಲೆ ಲೋಕಾಯುಕ್ತ ಮತ್ತು ಎ.ಸಿ.ಬಿ.ಯಿಂದ ದಾಳಿಗೊಳಗಾಗಿರುವ ಪ್ರಕರಣಗಳು ಎಷ್ಟು;<br>(ಸಂಪೂರ್ಣ ಮಾಹಿತಿ ನೀಡುವುದು) | ಕಳೆದ 03 ವರ್ಷಗಳಲ್ಲಿ ಸಿಆಸು ಇಲಾಖೆಯ ವ್ಯಾಪ್ತಿಗೆ ಸೇರಿದ ಅಧಿಕಾರಿಗಳ ಮೇಲೆ ದಾಳಿಗೊಳಗಾದ ಪ್ರಕರಣಗಳ ಸಂಖ್ಯೆ ಈ ಕೆಳಕಂಡಂತಿದೆ:<br><br>ಲೋಕಾಯುಕ್ತ ಪ್ರಕರಣಗಳು: ಇಲ್ಲ<br>ಎ.ಸಿ.ಬಿ. ಪ್ರಕರಣಗಳ ಸಂಖ್ಯೆ: 11<br>(ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ.) |
| ಆ) | ಈ ಪ್ರಕರಣಗಳಲ್ಲಿ ಸರ್ಕಾರ ಯಾವ ಕ್ರಮ ಕೈಗೊಂಡಿದೆ; (ಸಂಪೂರ್ಣ ಮಾಹಿತಿ ನೀಡುವುದು) | ದಾಳಿಗೊಳಗಾದ ಪ್ರಕರಣಗಳ ಕುರಿತು ಸರ್ಕಾರ ಕ್ರಮಕೈಗೊಂಡಿರುವ ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ. |
| ಇ) | ಕಳೆದ ಮೂರು ವರ್ಷಗಳಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ವ್ಯಾಪ್ತಿಗೆ ಸೇರಿದ ಹಲವಾರು ಇಲಾಖೆಯ ಅಧಿಕಾರಿಗಳು ಸರ್ಕಾರದ ಪೂರ್ವಾನುಮತಿ ಪಡೆಯದೆ ಹಲವಾರು ಬಾರಿ ವಿದೇಶ ಪ್ರವಾಸ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಸದರಿ ಅಧಿಕಾರಿಗಳ ವಿರುದ್ಧ ಇಲಾಖೆಯ ಅಧಿಕಾರಿಗಳು ಯಾವುದೇ ಕ್ರಮ ಕೈಗೊಳ್ಳದೆ ತಪ್ಪಿತಸ್ಥ ಅಧಿಕಾರಿಗಳ ಜೊತೆ ಶಾಮೀಲಾಗಿರುವುದು ನಿಜವೇ;<br>(ಸಂಪೂರ್ಣ ಮಾಹಿತಿ ಒದಗಿಸುವುದು) | ಈ ಕೆಳಕಂಡ ಕೆ.ಎ.ಎಸ್. ಅಧಿಕಾರಿಗಳು ಪೂರ್ವಾನುಮತಿ ಪಡೆಯದೇ ವಿದೇಶ ಪ್ರವಾಸ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br><br>01. ಶ್ರೀ ಅಭಿಜಿನ್. ಬಿ. ಕೆ.ಎ.ಎಸ್ (ಕಿರಿಯ ಶ್ರೇಣಿ) ಅಧಿಕಾರಿ ಇವರು ಶ್ರೀಲಂಕಾ ದೇಶಕ್ಕೆ ಪ್ರವಾಸ ಕೈಗೊಳ್ಳಲು ಸರ್ಕಾರದ ಅನುಮತಿ ಕೋರಿದ್ದು, ಸದರಿ ಪ್ರಸ್ತಾವನೆಯು ಪರಿಶೀಲನೆಯಲ್ಲಿರುವಾಗಲೇ ಪ್ರವಾಸ ಕೈಗೊಂಡ ಕಾರಣ ಸದರಿಯವರ ವಿರುದ್ಧ ಕ.ನಾ.ಸೇ(ಸಿಸಿಎ)ನಿಯಮ 12ರಡಿ ಇಲಾಖಾ ವಿಚಾರಣೆ ನಡೆಸಲಾಗಿತ್ತು. ಆರೋಪಿತರು ಲಿಖಿತ ಹೇಳಿಕೆಯಲ್ಲಿ ಸರ್ಕಾರದ ಅನುಮತಿ ದೊರತಿದೆ ಎಂದು ಭಾವಿಸಿ ಪ್ರವಾಸಕ್ಕೆ ಹೋಗಿದ್ದು ಅನುಮತಿ ದೊರೆಯದ ಕಾರಣ ಕೂಡಲೇ ಹಿಂದಿರುಗಿರುವುದಾಗಿ ತಿಳಿಸಿರುತ್ತಾರೆ. ಸದರಿಯವರ ಹೇಳಿಕೆಯನ್ನು ಪರಿಶೀಲಿಸಿ, ಆರೋಪಿತರಿಗೆ ದಿನಾಂಕ: 06.01.2020ರ ಆದೇಶದಲ್ಲಿ ಆಡಳಿತಾತ್ಮಕ ಎಚ್ಚರಿಕೆ ನೀಡಲಾಗಿದೆ. |

| | | |
|---|---|---|
| | | 02. ಶ್ರೀಮತಿ ಶೈಲಜಾ. ವಿ.ಆರ್. ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ ಇವರು ಸರ್ಕಾರದ ಅನುಮತಿ ಪಡೆಯದೆ ದುಬೈಗೆ ವಿದೇಶ ಪ್ರವಾಸ ಕೈಗೊಂಡಿರುತ್ತಾರೆ ಎಂಬ ಬಗ್ಗೆ ಶ್ರೀ ಕೆ.ಆರ್. ರವೀಂದ್ರ ಬಿನ್ ಲೇಟ್ ಸಿ.ರಾಮಯ್ಯ, ಕಲ್ಲಹಳ್ಳಿ, ಮಂಡ್ಯ ಇವರಿಂದ ದೂರು ಸ್ವೀಕೃತವಾಗಿದ್ದು ಸದರಿ ದೂರಿನ ಬಗ್ಗೆ ಜಿಲ್ಲಾಧಿಕಾರಿ ಮಂಡ್ಯ ಇವರಿಂದ ವರದಿ ಪಡೆಯಲಾಗಿದ್ದು, ಸದರಿಯವರು ಯಾವುದೇ ವಿದೇಶ ಪ್ರವಾಸ ಮಾಡಿರುವುದಿಲ್ಲವೆಂದು ವರದಿ ಮಾಡಿರುವುದರಿಂದ ಪ್ರಕರಣ ಮುಕ್ತಾಯಗೊಳಿಸಲಾಗಿದೆ.<br><br>ತಪ್ಪಿತಸ್ಥ ಅಧಿಕಾರಿಗಳ ಜೊತೆ ಶಾಮೀಲಾಗಿರುವ ಯಾವುದೇ ಪ್ರಕರಣಗಳು ಇರುವುದಿಲ್ಲ. |
| ಈ) | ಕಳೆದ ಮೂರು ವರ್ಷಗಳಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ವ್ಯಾಪ್ತಿಗೆ ಸೇರಿದ ಹಲವಾರು ಇಲಾಖೆಯ ಅಧಿಕಾರಿಗಳು ತಪಿತಸ್ಥ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳದೇ ಕಡತವನ್ನು ಮುಚ್ಚಿಟ್ಟಿರುವ ಪ್ರಕರಣಗಳೆಷ್ಟು; (ಸಂಪೂರ್ಣ ಮಾಹಿತಿ ನೀಡುವುದು) | ಅಂತಹ ಯಾವುದೇ ಪ್ರಕರಣಗಳು ಇರುವುದಿಲ್ಲ. |
| ಉ) | ಸರ್ಕಾರದ ಮುಖ್ಯ ಕಾರ್ಯದರ್ಶಿಗಳು ಪ್ರತಿ ತಿಂಗಳು ನಡೆಸುತಿ ವ ಎಂ.ಎಂ.ಆರ್. ಸಭೆಗಳಲ್ಲಿ ಈ ಪ್ರಕರಣಗಳ ವಿಚಾರಣೆ, ಪ್ರಗತಿ ಮತ್ತು ವಿಲೇವಾರಿ ಬಗ್ಗೆ ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು). | ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿನ ಪರಿಶೀಲನಾ ಸಭೆಯಲ್ಲಿ ಪ್ರತಿ ತಿಂಗಳು ಪ್ರಗತಿ ಮತ್ತು ವಿಲೇವಾರಿ ಬಗ್ಗೆ ಪರಿಶೀಲಿಸಲಾಗುತ್ತಿದೆ. ಅಂತೆಯೇ ಸರ್ಕಾರದ ಕಾರ್ಯದರ್ಶಿ, ಸಿಆಸು ಇಲಾಖೆರವರ ಹಂತದಲ್ಲಿಯೂ ಸಹ ಮಾಹೆಯಾನ ಈ ಕುರಿತಂತೆ ಪ್ರಗತಿ ಮತ್ತು ವಿಲೇವಾರಿಯ ಬಗ್ಗೆ ಪರಿಶೀಲಿಸಲಾಗುತ್ತಿದೆ. |
| ಊ) | ಕೆಲವು ಪ್ರಕರಣಗಳಲ್ಲಿ ಕಾನೂನು ಇಲಾಖೆಯಿಂದ ತಪ್ಪಿತಸ್ಥ ಅಧಿಕಾರಿಗಳ ವಿರುದ್ಧ ಕ್ರಮ ಜರುಗಿಸಲು ಅಭಿಪ್ರಾಯ ನೀಡಿದ್ದರೂ ಅಂತಹ ಪ್ರಕರಣಗಳಲ್ಲಿ ಯಾವುದೇ ಕ್ರಮ ಜರುಗಿಸದೆ ಇರಲು ಕಾರಣವೇನು; | ಅಂತಹ ಯಾವುದೇ ಪ್ರಕರಣಗಳು ಇರುವುದಿಲ್ಲ. |

ಸಂಖ್ಯೆ: ಸಿಆಸುಇ 19 ಎಸ್‌ಎಂಎಸ್ 2022

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

**ಅನುಬಂಧ**

**ಭ್ರಷ್ಟಾಚಾರ ನಿಗ್ರಹ ದಳ ದಾಳಿಗೆ ಒಳಪಟ್ಟ ಅಧಿಕಾರಿಗಳ ವಿವರಗಳು**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಕಡತ ಸಂಖ್ಯೆ | ಪ್ರಕರಣದ ವಿವರಗಳು | ಅಮಾನತ್ತು ಪಡಿಸಿದ ದಿನಾಂಕ | ಸೇವೆಗೆ ಪುನರ್ ಸ್ಥಾಪಿಸಿದ ದಿನಾಂಕ | ಪ್ರಸ್ತುತ ಹಂತ |
|---|---|---|---|---|---|
| 1. | ಶ್ರೀ ಬಿ.ಟಿ.ಕುಮಾರಸ್ವಾಮಿ, ಕೆ.ಎ.ಎಸ್(ಕಿ.ಶ್ರೇ) ಅಧಿಕಾರಿ,<br><br>ಸಿಆಸುಇ 10 ಕೆಇವಿ 2020 | ಅಧಿಕಾರಿಯು ಉಪವಿಭಾಗಾಧಿಕಾರಿ ಕಂದಾಯ ವಿಭಾಗ, ಬಳ್ಳಾರಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಆದಾಯಕ್ಕಿಂತ ಹೆಚ್ಚಿನ ಆಸ್ತಿ ಹೊಂದಿರುವ ಆರೋಪದ ಮೇಲೆ ದಿನಾಂಕ:04.01.2018 ರಂದು ಎಸಿಬಿ ಚಿತ್ರದುರ್ಗ ಠಾಣೆಯಲ್ಲಿ ಮೊ.ಸಂ.01/2018 ಅನ್ನು ದಾಖಲಿಸಿ ಸದರಿಯವರ ಕಛೇರಿ ಮತ್ತು ವಾಸದ ಮನೆಗಳನ್ನು ಶೋಧ ನಡೆಸಿದ ಪ್ರಕರಣ. | 24.03.2018 | 03.07.2018 | ಎಸಿಬಿಯಲ್ಲಿ ತನಿಖೆ ಬಾಕಿ ಇರುತ್ತದೆ. |
| 2. | ಶ್ರೀ ತಿಪ್ಪೇಸ್ವಾಮಿ.ಎನ್ ಕೆ.ಎ.ಎಸ್(ಕಿ.ಶ್ರೇ) ಅಧಿಕಾರಿ,<br><br>ಸಿಆಸುಇ 51 ಕೆಇವಿ 2018 | ಅಧಿಕಾರಿಯು ಉಪವಿಬಾಗಾಧಿಕಾರಿ ಕಂದಾಯ ವಿಭಾಗ, ತುಮಕೂರು ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಆದಾಯಕ್ಕಿಂತ ಹೆಚ್ಚಿನ ಆಸ್ತಿ ಹೊಂದಿರುವ ಆರೋಪದ ಮೇಲೆ ದಿನಾಂಕ:19.03.2018 ರಂದು ಎಸಿಬಿ ಚಿತ್ರದುರ್ಗ ಠಾಣೆಯಲ್ಲಿ ಮೊ.ಸಂ.03/2018 ಅನ್ನು ದಾಖಲಿಸಿ ಸದರಿಯವರ ಕಛೇರಿ ಮತ್ತು ವಾಸದ ಮನೆಗಳನ್ನು ಶೋಧ ನಡೆಸಿದ ಪ್ರಕರಣ. | ಸದರಿ ಪ್ರಕರಣ ಸಂಬಂಧ ಮಾನ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿತ್ರದುರ್ಗ ಇಲ್ಲಿ 'ಬಿ' ಅಂತಿಮ ವರದಿಯನ್ನು ಸಲ್ಲಿಸಿದ್ದು, ಮಾನ್ಯ ನ್ಯಾಯಾಲಯವು ಸದರಿ 'ಬಿ' ಅಂತಿಮ ವರದಿಯನ್ನು ಸ್ವೀಕರಿಸಿದ್ದು, ಪ್ರಕರಣವನ್ನು ಮುಕ್ತಾಯಗೊಳಿಸಲಾಗಿದೆ. | | |
| 3. | ಶ್ರೀಮತಿ ರಾಜಶ್ರೀ ಜೈನಾಪುರ, ಕೆ.ಎ.ಎಸ್(ಕಿ.ಶ್ರೇ)(ಸ್ವ. ಪ್ರ) ಅಧಿಕಾರಿ,<br><br>ಸಿಆಸುಇ 107 ಕೆಇವಿ 2018 | ಅಧಿಕಾರಿಯು ವಿಶೇಷ ಭೂಸ್ವಾದೀನಾಧಿಕಾರಿ, ಹಿಪ್ಪರಗಿ ಅಣೆಕಟ್ಟು ಯೋಜನೆ, ಅಥಣಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಆದಾಯಕ್ಕಿಂತ ಹೆಚ್ಚಿನ ಆಸ್ತಿ ಹೊಂದಿರುವ ಆರೋಪದ ಮೇಲೆ ದಿನಾಂಕ:31.03.2018 ರಂದು ಎಸಿಬಿ ಬೆಳಗಾವಿ ಠಾಣೆಯಲ್ಲಿ ಮೊ.ಸಂ.04/2018 ಅನ್ನು ದಾಖಲಿಸಿ ಸದರಿಯವರ ಕಛೇರಿ ಮತ್ತು ವಾಸದ ಮನೆಗಳನ್ನು ಶೋಧ ನಡೆಸಿದ ಪ್ರಕರಣ. | 11.09.2018 | 07.02.2019 | ಎಸಿಬಿಯಲ್ಲಿ ತನಿಖೆ ಬಾಕಿ ಇರುತ್ತದೆ. |
| 4. | ಡಾ|| ಎಸ್.ಎಸ್. ಮಧುಕೇಶ್ವರ, ಕೆ.ಎ.ಎಸ್(ಕಿ.ಶ್ರೇ) ಅಧಿಕಾರಿ,<br><br>ಸಿಆಸುಇ 139 ಕೆಇವಿ 2019 | ಶ್ರೀ ಆನಂದ ಕೆ.ಗಂಗೊಳ್ಳಿ ಬಿನ್ ರಾಮ, ವಕೀಲರು, ಕುಂದಾಪುರ, ಇವರು ದಿನಾಂಕ:19.09.2019 ರಂದು ಉಡುಪಿ ಜಿಲ್ಲಾ ಭ್ರಷ್ಟಾಚಾರ ನಿಗ್ರಹ ದಳ ಪೊಲೀಸ್ ಠಾಣೆಯಲ್ಲಿ ಸಲ್ಲಿಸಿರುವ ದೂರಿನನ್ವಯ ಮೊಕದ್ದಮೆ ಸಂಖ್ಯೆ:05/2019 ದಾಖಲಿಸಿಕೊಂಡು, ಮಾನ್ಯ ಜಿಲ್ಲಾ ಮತ್ತು ಸತ್ರ (ವಿಶೇಷ) ನ್ಯಾಯಾಧೀಶರ ನ್ಯಾಯಾಲಯ, ಉಡುಪಿ ಜಿಲ್ಲೆ, ಇಲ್ಲಿ ಪ್ರಥಮ ವರ್ತಮಾನ ವರದಿ ಸಲ್ಲಿಸಿ, ಮಾನ್ಯ ನ್ಯಾಯಾಲಯದಿಂದ ಶೋಧನಾ ವಾರಂಟ್ ಪಡೆದು ದಿನಾಂಕ:19.09.2019 ರಂದು ಅಧಿಕಾರಿಯು ಅಧಿಕೃತವಾಗಿ | 08.01.2020 | 06.07.2020 | ಎಸಿಬಿಯಲ್ಲಿ ತನಿಖೆ ಬಾಕಿ ಇರುತ್ತದೆ. |

| ಕ್ರಮ ಸಂ ಖ್ಯೆ | ಅಧಿಕಾರಿಯ ಹೆಸರು ಮತ್ತು ಕಡತ ಸಂಖ್ಯೆ | ಪ್ರಕರಣದ ವಿವರಗಳು | ಅಮಾನತ್ತು ಪಡಿಸಿದ ದಿನಾಂಕ | ಸೇವೆಗೆ ಪುನರ್ ಸ್ಥಾಪಿಸಿದ ದಿನಾಂಕ | ಪ್ರಸ್ತುತ ಹಂತ |
|---|---|---|---|---|---|
| | | ವಾಸ್ತವ್ಯವಿದ್ದ ವಸತಿಗೃಹದ ಶೋಧನೆ ನಡೆಸಲಾಗಿ, ಅಧಿಕಾರಿಯ ಅಂಗ ಶೋಧನೆಯಿಂದ ಅವರು ಹೊಂದಿದ್ದ ಪರ್ಸಿನಲ್ಲಿ ನಗದು ರೂ.53,000/-, ಸರ್ಕಾರಿ ವಸತಿಗೃಹದ ಒಳಗೆ ಆಪಾದಿತರು ಮಲಗುವ ಕೋಣೆಯಲ್ಲಿ ಮೇಜಿನ ಮೇಲಿದ್ದ ಸೂಟ್‌ಕೇಸಿನಲ್ಲಿದ್ದ ನಗದು ರೂ.75,000/- ಗಳು ಸೇರಿ ಒಟ್ಟು 1,28,000/- ನಗದು ಪತ್ತೆಯಾಗಿದ್ದಲ್ಲದೇ, ಆಪಾದಿತ ಸರ್ಕಾರಿ ಅಧಿಕಾರಿಯವರು ದಿನಾಂಕ:18.09.2019 ರಂದು ಅಕ್ರಮವಾಗಿ ಹಣ ಸಂಪಾದಿಸಿ ಕುಂದಾಪುರ ತಾಲ್ಲೂಕಿನ ಮರವಂತೆ ಗ್ರಾಮದ ಗ್ರಾಮಲೆಕ್ಕಾಧಿಕಾರಿ ಶ್ರೀ ದಿನೇಶ್ ಡಿ ಎಂಬುವರ ಮೂಲಕ ಕಳುಹಿಸಿಕೊಟ್ಟಿದ್ದ ರೂ.1,80,000/- ನಗದು ಹಣವನ್ನು ಖಚಿತ ಮಾಹಿತಿಯಂತೆ ಸದರಿಯವರಿಗೆ ಹಾಜರುಪಡಿಸಲು ಸೂಚಿಸಿ, ಗ್ರಾಮಲೆಕ್ಕಾಧಿಕಾರಿ ಶ್ರೀ ದಿನೇಶ್. ಡಿ ಇವರು ನಗದು ರೂ.1,80,000/-ಗಳನ್ನು ಹಾಜರುಪಡಿಸಿದ್ದು, ಸದರಿ ಪ್ರಕರಣದಲ್ಲಿ ಕೆಲವೊಂದು ಸ್ವತ್ತುಗಳನ್ನು ಹಾಗೂ ಒಟ್ಟು ರೂ.3,08,000/- ನಗದನ್ನು ವಶಪಡಿಸಿಕೊಂಡು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. | | | |
| 5. | ಡಾ.ಎಂ.ದಾಸೇಗೌಡ, ಕೆ.ಎ.ಎಸ್(ಹಿ.ಶ್ರೇ)<br><br>ಸಿಆಸುಇ 21 ಕೆಇವಿ 2020 | ಜಿಲ್ಲಾಧಿಕಾರಿ ದಕ್ಷಿಣ ಕನ್ನಡ ಜಿಲ್ಲೆ ಹಾಗೂ ವಾ & ಕೈ ಇಲಾಖೆಯಿಂದ ಸ್ವೀಕೃತವಾದ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಎಸಿಬಿ ದ.ಕನ್ನಡ ಜಿಲ್ಲೆ, ಮಂಗಳೂರು ಇಲ್ಲಿ ದಿನಾಂಕ:18.12.2019ರಂದು ಡಾ\|\| ಎಂ.ದಾಸೇಗೌಡ, ಕೆ.ಎ.ಎಸ್(ಹಿ.ಶ್ರೇ) ಅಧಿಕಾರಿ, ವಿಶೇಷ ಭೂಸ್ವಾಧೀನಾಧಿಕಾರಿ, ಕೆ.ಐ.ಎ.ಡಿ.ಬಿ, ವಲಯ ಕಚೇರಿ, ದ.ಕನ್ನಡ ಜಿಲ್ಲೆ, ಮಂಗಳೂರು, ಇವರ ವಿರುದ್ಧ ಮೊ.ಸಂ:12/2019 ಅನ್ನು ದಾಖಲಿಸಿದ್ದು ಕಚೇರಿ ಮೇಲೆ ದಾಳಿ ನಡೆಸಿ ಅದೇ ದಿನ ದಸ್ತಗಿರಿ ಮಾಡಿ, ದಿನಾಂಕ:18.12.2019 ರಿಂದ 03.01.2020ರವರೆಗೆ ನ್ಯಾಯಾಂಗÀ ಬಂಧನದಲ್ಲಿರಿಸಲಾಗಿತ್ತೆಂದು ತಿಳಿಸಲಾಗಿತ್ತು. | ದಿ:18.12. 2019ರಿಂದ ಪೂರ್ವಾನ್ವಯವಾಗುವಂತೆ ದಿನಾಂಕ: 14.02.2020 | 09.07.2020 | ಎಸಿಬಿಯಲ್ಲಿ ತನಿಖೆ ಬಾಕಿ ಇರುತ್ತದೆ. |

| | | | | | |
|---|---|---|---|---|---|
| 6. | ಶ್ರೀ ಎಂ.ಎಸ್.ಎನ್ ಬಾಬು, ಕೆ.ಎ.ಎಸ್(ಕಿ.ಶ್ರೇ) ಅಧಿಕಾರಿ<br><br>ಸಿಆಸುಇ 81 ಕೆಇವಿ 2020 | ಆದಾಯಕ್ಕಿಂದ ಹೆಚ್ಚಿನ ಆಸ್ತಿಯನ್ನು ಹೊಂದಿರುವ ಪ್ರಕರಣಕ್ಕೆ ಸಂಬಂಧಿಸಿದಂತೆ ಎ.ಸಿ.ಬಿ. ಯಲ್ಲಿ ಪ್ರಕರಣ ದಾಖಲಾಗಿದ್ದು, ಸದರಿಯವರ ಮನೆ ಮತ್ತು ಕಛೇರಿಯ ಮೇಲೆ ಶೋಧನ ದಾಳಿ ನಡೆಸಿರುವ ಪ್ರಕರಣ. | 03.10.20 20 | 30.04.20 21 | ಎಸಿಬಿಯಲ್ಲಿ ತನಿಖೆ ಬಾಕಿ ಇರುತ್ತದೆ. |
| 7. | ಡಾ|| ಬಿ.ಸುಧಾ, ಕೆ.ಎ.ಎಸ್(ಕಿ.ಶ್ರೇ) ಅಧಿಕಾರಿ<br><br>ಸಿಆಸುಇ 89 ಕೆಇವಿ 2020 | ಇವರು ಈ ಹಿಂದೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ವಿಶೇಷ ಭೂಸ್ವಾಧೀನಾಧಿಕಾರಿಯಾಗಿದ್ದ ಅವಧಿಯಲ್ಲಿ, ಸದರಿಯವರು ಕೆಂಪೆಗೌಡ ಬಡಾವಣೆ, ವಿಶ್ವೇಶ್ವರಯ್ಯ ಬಡಾವಣೆ ಹಾಗೂ ಮತ್ತಿತರ ಬಡಾವಣೆಗಳ ಸಂಬಂಧ ಸ್ವಾಧೀನ ಪಡಿಸಿಕೊಂಡಿರುವ ಜಮೀನಿನ ಮಾಲಿಕರಿಗೆ ಭೂ ಪರಿಹಾರವನ್ನು ನೀಡಲು ಎಕರೆಗೆ 5 ರಿಂದ 10 ಲಕ್ಷದವರೆಗೆ ಲಂಚÀದ ಹಣ ಪಡೆದುಕೊಳ್ಳುತ್ತಿದ್ದು, ಸದರಿ ಲಂಚದ ಹಣವನ್ನು ಪಡೆಯಲು ಶ್ರೀ ಮಣಿ ಮತ್ತು ಪ್ರವೀಣ್ ಎಂಬ ಖಾಸಗಿ ವ್ಯಕ್ತಿಗಳನ್ನು ಮತ್ತು ಇತರೆ 7-8 ಜನ ಖಾಸಗಿ ವ್ಯಕ್ತಿಗಳನ್ನು ನೇಮಕ ಮಾಡಿಕೊಂಡಿರುತ್ತಾರೆ. ಸದರಿ ವ್ಯಕ್ತಿಗಳಿಂದ ಪಡೆದ ಲಂಚದ ಹಣವನ್ನು ಅಧಿಕ ಬಡ್ಡಿ ದರಕ್ಕೆ ನೀಡುತ್ತಿದ್ದು, ಸದರಿ ಬಡ್ಡಿ ಹಣವನ್ನು ಮಣಿ ಮತ್ತು ಪ್ರವೀಣ್ ರವರು ವಸೂಲಿ ಮಾಡುತ್ತಿದ್ದು, ಬಡ್ಡಿ ಹಣದ ವ್ಯವಹಾರದಲ್ಲಿ ಸಾಲದ ಹಣ ಪಡೆದುಕೊಳ್ಳುವ ವ್ಯಕ್ತಿಗಳಿಂದ ಬ್ಲಾಂಕ್ ಚೆಕ್, ಅಗ್ರಿಮೆಂಟ್‌ಗಳನ್ನು ಪಡೆಯುತ್ತಿರುತ್ತಾರೆ. ಸದರಿ ಬಡ್ಡಿ ಹಣದ ವ್ಯವಹಾರ ಮತ್ತು ಇತರೆ ವ್ಯವಹಾರವನ್ನು ಅವರ ಗಂಡನಾದ ಶ್ರೀ ಸ್ಟೋನಿ ಜೋಸಪ್ ಪಾಯ್ಸ್ ರವರು ನಿರ್ವಹಿಸುತ್ತಿರುತ್ತಾರೆ ಎಂಬ ಮಾಹಿತಿಯನ್ನು ಆಧರಿಸಿ ಘನ 23ನೇ ಅಡಿಷನಲ್ ಸಿಟಿ ಸಿವಿಲ್ ಮತ್ತು ಸೆಷನ್ಸ್ ನ್ಯಾಯಾಲಯದಲ್ಲಿ ಪಿ.ಸಿ.ಆರ್. ನಂ :35/2020 ರಲ್ಲಿ ದೂರು ಸಲ್ಲಿಸಿದ್ದು, ಅದರಂತೆ ಘನ ನ್ಯಾಯಾಲಯವು ಸದರಿ ಪಿ.ಸಿ.ಆರ್. ದೂರಿನ ಮೇರೆಗೆ ಪ್ರಕರಣ ದಾಖಲಿಸಿ ತನಿಖೆ ಕೈಗೊಳ್ಳಲು ಭ್ರಷ್ಟಾಚಾರ ನಿಗ್ರಹ ದಳಕ್ಕೆ ಆದೇಶಿಸಿರುತ್ತದೆ. ಅದರನ್ವಯ ದಿನಾಂಕ:07.11.2020 ರಂದು ದಾಳಿ ನಡೆಸಿ ಸದರಿಯವರನ್ನು ಅಮಾನತ್ತು ಪಡಿಸುವಂತೆ ಎಸಿಬಿಯಿಂದ ಪ್ರಸ್ತಾವನೆ ಸ್ವೀಕೃತವಾಗಿತ್ತು. | 27.11.20 20 | 11.10.20 21. | ಎಸಿಬಿಯಲ್ಲಿ ತನಿಖೆ ಬಾಕಿ ಇರುತ್ತದೆ. |

| | | | | | | | | | |
|---|---|---|---|---|---|---|---|---|---|
| 8 | ಹೆಮ್ಮಾಡಿ ಗ್ರಾಮ ಪಂಚಾಯತ್‌ನ ಸಂತೋಷನಗರ ಬುಗುರಿಕಡು ರಸ್ತೆಯ ಕೋಟೆಬೆಟ್ಟುವಿಗೆ ಹೋಗುವ ರಸ್ತೆ ಅಭಿವೃದ್ಧಿ | ಉಡುಪಿ | 25.00 | 30/2019-20 ದಿ:05/03/2020 | 21.89 | ಶ್ರೀ ಉದಯಕುಮಾರ್ ಶೆಟ್ಟಿ, ಕ್ಲಾಸ್-1 ಪಿ.ಡಬ್ಲ್ಯು.ಡಿ ಗುತ್ತಿಗೆದಾರರು ಮಚ್ಚಟ್ಟು ಪೋಸ್ಟ್ ಮತ್ತು ಗ್ರಾಮ ಕುಂದಾಪುರ | 21.89 | 21.89 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 9 | ಬೈಂದೂರು ವಿಧಾನಸಭಾ ಕ್ಷೇತ್ರದ ಹೆಮ್ಮಾಡಿ ಗ್ರಾಮ ಪಂಚಾಯತ್ ವ್ಯಾಪ್ತಿಯ ಹೆಮ್ಮಾಡಿಯಿಂದ ಸಂತೋಷನಗರದಿಂದ ಬುಗ್ರಿಕಡು ರಸ್ತೆ ಅಭಿವೃದ್ಧಿ, ಬೈಂದೂರು ವಿಧಾನಸಭಾ ಕ್ಷೇತ್ರದ ನಾಡ ಗ್ರಾಮ ಪಂಚಾಯತ್‌ನ ಗುಡ್ಡೆಯಂಗಡಿಯಿಂದ ಹರ್ಕೂರು ಮೂರುಕೈ ರಸ್ತೆ ಅಭಿವೃದ್ಧಿ, ಬೈಂದೂರು ವಿಧಾನಸಭಾ ಕ್ಷೇತ್ರದ ಕರ್ಕುಂಜೆ ಗ್ರಾಮ ಪಂಚಾಯತ್‌ನ ನೆಂಪು-ಶಾರಾಳಾ-ಹಂದಕುಂದ ರಸ್ತೆ ಅಭಿವೃದ್ಧಿ, ಬೈಂದೂರು ವಿಧಾನಸಭಾ ಕ್ಷೇತ್ರದ ಕರ್ಕುಂಜೆ ಗ್ರಾಮ ಪಂಚಾಯತ್‌ನ ಹೆರ್ಜಾಡಿ ರಸ್ತೆ ಅಭಿವೃದ್ಧಿ, ಇಡೂರು-ಕುಂಜ್ಞಾಡಿ ಗ್ರಾಮ ಪಂಚಾಯತ್‌ನ ತುಪ್ಪದಕೋರಿ ಅರೆಕಲ್ಲು ಮನೆಗೆ ಹೋಗುವ ಸಂಪರ್ಕ ಸೇತುವೆ ಸಹಿತ ರಸೆ ಅಭಿವೃದ್ಧಿ ಮತ್ತು ಬೈಂದೂರು ವಿಧಾನಸಭಾ ಕ್ಷೇತ್ರದ ಗುಲ್ವಾಡಿ ಗ್ರಾಮ ಪಂಚಾಯತ್ ವ್ಯಾಪ್ತಿಯ ಕುದ್ರು ರಸ್ತೆ ಅಭಿವೃದ್ಧಿ | ಉಡುಪಿ | 450.00 | 34/2019-20 ದಿ:27/03/2020 | 444.20 | ಶ್ರೀ ಸುನೀತ್ ಹೆಗಡೆ, ಕನಿನಿನಿ ಕೆಟಗರಿ-2 ಗುತ್ತಿಗೆದಾರರು, ಗುಲ್ವಾಡಿ, ಕುಂದಾಪುರ | 443.77 | 443.77 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 10 | ಸೌಪರ್ಣಿಕಾ ಏತ ನೀರಾವರಿ ಯೋಜನೆಯಡಿ, ಆಲೂರು ಗ್ರಾಮದಲ್ಲಿ ಡೆಲವರಿ ಛೇಂಬರ್ ನಿರ್ಮಾಣ ಮತ್ತು ಪೈಪ್‌ಲೈನ್ ಕಾಮಗಾರಿ | ಉಡುಪಿ | 56.60 | 18/2019-20 ದಿ:27/12/2019 | 58.11 | ಶ್ರೀ ಜಯಶೀಲ್ ಎನ್ ಶೆಟ್ಟಿ, ಕೆಟಗರಿ ಗುತ್ತಿಗೆದಾರರು, ಘಟಪ್ರಭಾ | 58.17 | 58.17 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 11 | ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನ ಸಿದ್ಧಾಪುರ-ಸೌಕೂರು ಏತ ನೀರಾವರಿ ಸಂಬಂಧಿತ ಸರ್ವೆ ಮತ್ತು ಇನ್ ವೆಸ್ಟೀಗೇಷನ್, ಅಂದಾಜುಪಟ್ಟಿ, ಡ್ರಾಯಿಂಗ್, ಯೋಜನಾ ವರದಿ ಮತ್ತು ಭೂಸ್ವಾಧೀನ ಪ್ರಸ್ತಾವನೆ ತಯಾರಿಕೆಗೆ ಏಜೆನ್ಸಿಯನ್ನು | ಉಡುಪಿ | 18.00 | 02/2019-20 ದಿ:30/05/2019 | 17.03 | ಮೆ॥ ರೂಟ್ ಡಿಸೈನ್, ಇಂಜಿನಿಯರ್ ಮತ್ತು ಟೆಕ್ನೋಕ್ರೇಟ್ಸ್ ಪ್ರೈ. ಲಿಮಿಟೆಡ್, ಸರ್ವೆ ಮತ್ತು ಡಿಸೈನ್ ಕನ್ಸ್‌ಲ್ಟಂಟ್, ಮೈಸೂರು | 17.05 | 17.05 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |

| | | | | | | | | | |
|---|---|---|---|---|---|---|---|---|---|
| | ನಿಗದಿಪಡಿಸುವ ಕಾಮಗಾರಿ | | | | | | | | |
| 12 | ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸುವ ಸೌಕೂರು ಏತ ನೀರಾವರಿ ಯೋಜನಾ ಕಾಮಗಾರಿ | ಉಡುಪಿ | 7371.00 | 16/2019-20 ದಿ:18/11/2019 | 8074.87 | ಶ್ರೀ ಜಿ.ಶಂಕರ್, ಕೆಟಗರಿ-1 ಗುತ್ತಿಗೆದಾರರು, ವಿಜಯಪುರ | 2226.18 | 2226.18 | ಕಾಮಗಾರಿ ಪ್ರಗತಿಯಲ್ಲಿರುತ್ತದೆ. |
| **ನಿಗಮದಿಂದ ನಿರ್ವಹಿಸಲಾದ 2019-20 ಎಸ್.ಸಿ.ಪಿ ಕಾಮಗಾರಿಗಳು** | | | | | | | | | |
| 13 | 2018-19ನೇ ಸಾಲಿಗೆ ಎಸ್.ಸಿ.ಪಿ ಯೋಜನೆಯಡಿ ಉಡುಪಿ ಜಿಲ್ಲೆ ಆಲೂರು ಗ್ರಾಮ ಪಂಚಾಯತ್ ವ್ಯಾಪ್ತಿಯ ಆಲೂರು ಗುಜ್ಜಾಡಿ ಮುಖ್ಯ ರಸ್ತೆಯಿಂದ ಹಳ್ಳಿ ಎಸ್.ಸಿ ಕಾಲೋನಿಗೆ ಸಂಪರ್ಕ ರಸ್ತೆ ಅಭಿವೃದ್ಧಿ (ಪ್ಯಾಕೇಜ್-3) | ಉಡುಪಿ | 100.00 | 15/2019-20 ದಿ:16/09/2019 | 100.00 | ಶ್ರೀ ರಾಜೇಶ್ ಕಾರಂತ್, ಕೆಟಗರಿ ಗುತ್ತಿಗೆದಾರರು, ಉಪ್ಪಿನಕುದ್ರು, ಕುಂದಾಪುರ ತಾ, ಉಡುಪಿ ಜಿಲ್ಲೆ | ಸದರಿ ಕಾಮಗಾರಿಯನ್ನು ಎಸ್.ಸಿ.ಪಿ ಯೋಜನೆಯಡಿ, ಕುಂದಾಪುರ ವಿಧಾನಸಭಾ ಕ್ಷೇತ್ರಕ್ಕೆ ಒಳಪಡುವ ಇತರ ಕಾಮಗಾರಿ (2ಸಂಖ್ಯೆ)ಗಳೊಂದಿಗೆ ಸೇರಿ, ಮೂರು ಕಾಮಗಾರಿಗಳಿಗೆ ಪ್ಯಾಕೇಜ್ ಟೆಂಡರ್ ಕರೆಯಲಾಗಿದ್ದು, ಕಾಮಗಾರಿ ಪೂರ್ಣಗೊಂಡು ರೂ. 418.16ಲಕ್ಷ ವೆಚ್ಚವಾಗಿರುತ್ತದೆ. | | |
| **ಕೆ.ಆರ್.ಐ.ಡಿ.ಎಲ್ ಉಡುಪಿ ಇವರಿಂದ ಕೈಗೊಂಡ ಎಸ್.ಸಿ.ಪಿ ಕಾಮಗಾರಿಗಳ ವಿವರಗಳು** | | | | | | | | | |
| 14 | ಬೈಂದೂರು ವಿಧಾನಸಭಾ ಕ್ಷೇತ್ರ ಕರ್ಕುಂಜೆ ಗ್ರಾಮ ಪಂಚಾಯತ್ ವ್ಯಾಪ್ತಿಯ ಕೋಟಿ ಫಾರಂ ರಸ್ತೆಯಿಂದ ಕೊಂಗರಕಾನ್ ಗೋವಿಂದ ಪ.ಜಾತಿ, ಅಣ್ಣು ಪ.ಜಾತಿ, ಗಣಪು ಪ.ಜಾತಿ ಹಾಗೂ ಇತರೆ ಪರಿಶಿಷ್ಟ ಕಾಲೋನಿ ರಸ್ತೆ ಅಭಿವೃದ್ಧಿ ಕಾಮಗಾರಿ. | ಉಡುಪಿ | 100.00 | - | - | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 100.00 | 100.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 15 | ಬೈಂದೂರು ವಿಧಾನಸಭಾ ಕ್ಷೇತ್ರದ ಶಂಕರನಾರಾಯಣ ಗ್ರಾಮ ಪಂಚಾಯತ್ ವ್ಯಾಪ್ತಿಯ ತಾರಿಮರನ ಜೆಡ್ಡು ಎಸ್.ಸಿ ಕಾಲೋನಿ ಹತ್ತಿರ ಮಂಗನ ಸೇತುವೆ ಮತ್ತು ರಸ್ತೆ ಅಭಿವೃದ್ಧಿ | ಉಡುಪಿ | 50.00 | - | - | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 50.00 | 50.00 | ಕಾಮಗಾರಿ ಪ್ರಗತಿಯಲ್ಲಿರುತ್ತದೆ. |
| 16 | ಬೈಂದೂರು ವಿಧಾನಸಭಾ ಕ್ಷೇತ್ರದ ಶಂಕರನಾರಾಯಣ ಗ್ರಾಮ ಪಂಚಾಯತ್ ವ್ಯಾಪ್ತಿಯ ಕಲ್ಲುಗದ್ದೆಯಿಂದ ಮಾವಿನಕಟ್ಟೆ ಪ್ರವೀಣ ಹರಿಜನ ಮನೆಗೆ ಹೋಗುವ ರಸ್ತೆ ಅಭಿವೃದ್ಧಿ | ಉಡುಪಿ | 50.00 | - | - | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 50.00 | 50.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 17 | ಶಂಕರನಾರಾಯಣ ಗ್ರಾಮ ಪಂಚಾಯತ್ ವ್ಯಾಪ್ತಿಯ ತಾರಿಮರನ ಜೆಡ್ಡು ಎಸ್‌ಸಿ ಕಾಲೋನಿಯಿಂದ ಕುಡಿಬೈಲು ರಸ್ತೆ ಅಭಿವೃದ್ಧಿ. | ಉಡುಪಿ | 100.00 | - | - | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 100.00 | 100.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |

| | | | | | | | | | |
|---|---|---|---|---|---|---|---|---|---|
| 18 | ಬೈಂದೂರು ವಿಧಾನ ಸಭಾ ಕ್ಷೇತ್ರದ ಅಂಪಾರು ಗ್ರಾಮಪಂಚಾಯತ್ ವ್ಯಾಪ್ತಿಯ ಪೇಟೆಯಿಂದ ಶಂಕರನಾರಾಯಣ ಗ್ರಾಮ ಪಂಚಾಯತ್ ವ್ಯಾಪ್ತಿಯ ಕ್ರೋಢಬೈಲೂರು ಪರಿಶಿಷ್ಟ ಜಾತಿ ಕಾಲೋನಿ ರಸ್ತೆ ಅಭಿವೃದ್ಧಿ. | ಉಡುಪಿ | 100.00 | - | - | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 100.00 | 100.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 19 | ಬೈಂದೂರು ವಿಧಾನ ಸಭಾ ಕ್ಷೇತ್ರದ ಅಂಪಾರು ಗ್ರಾಮಪಂಚಾಯತ್ ವ್ಯಾಪ್ತಿಯ ಪೇಟೆಯಿಂದ ಶಂಕರನಾರಾಯಣ ಗ್ರಾಮ ಪಂಚಾಯತ್ ವ್ಯಾಪ್ತಿಯ ಕ್ರೋಢಬೈಲೂರು ಪರಿಶಿಷ್ಟ ಜಾತಿ ಕಾಲೋನಿ ರಸ್ತೆ ಅಭಿವೃದ್ಧಿ. | ಉಡುಪಿ | 100.00 | - | - | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 100.00 | 100.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 20 | ಬೈಂದೂರು ವಿಧಾನ ಸಭಾ ಕ್ಷೇತ್ರದ ಅಜ್ರಿ ಮುಖ್ಯ ರಸ್ತೆಯಿಂದ ಅಜ್ರಿ ಗ್ರಾಮದ ಹೊಳಂದೂರು ತೆಂಕಬೈಲು ರಸ್ತೆ ಅಭಿವೃದ್ಧಿ. | ಉಡುಪಿ | 115.00 | - | - | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 115.00 | 115.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 21 | ಬೈಂದೂರು ವಿಧಾನ ಸಭಾ ಕ್ಷೇತ್ರದ ಆಲೂರು ಮುಖ್ಯ ರಸ್ತೆಯಿಂದ ನಾಡ ಗ್ರಾಮದ ವಿದ್ಯಾನಗರದ ಚುಂಗಿಗುಡ್ಡೆ ಎಸ್‌ಸಿ ಕಾಲೋನಿ ರಸ್ತೆ ಅಭಿವೃದ್ಧಿ. | ಉಡುಪಿ | 53.00 | - | - | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 53.00 | 53.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 22 | ಬೈಂದೂರು ವಿಧಾನ ಸಭಾ ಕ್ಷೇತ್ರದ ಕೆರಾಡಿ ಮುಖ್ಯ ರಸ್ತೆಯಿಂದ ಬೆಳ್ಳಾಲ ಮೋರ್ಟು ಧರ್ಬಾಸ್ತು ರಸ್ತೆ ಅಭಿವೃದ್ಧಿ. | ಉಡುಪಿ | 150.00 | - | - | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 150.00 | 150.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 23 | ಬೈಂದೂರು ವಿಧಾನ ಸಭಾ ಕ್ಷೇತ್ರದ ರಾಷ್ಟ್ರೀಯ ಹೆದ್ದಾರಿಯಿಂದ ಕಿರಿಮಂಜೇಶ್ವರ ಗ್ರಾಮ ಪಂಚಾಯತ್ ವ್ಯಾಪ್ತಿಯ ಅಗಸ್ತೇಶ್ವರ ದೇವಸ್ಥಾನದ ಮಾರ್ಗವಾಗಿ ಪ.ಜಾತಿ ಕಾಲೋನಿಗೆ ಹೋಗುವ ರಸ್ತೆ ಅಭಿವೃದ್ಧಿ | ಉಡುಪಿ | 47.00 | - | - | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 47.00 | 47.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 24 | ಬೈಂದೂರು ವಿಧಾನ ಸಭಾ ಕ್ಷೇತ್ರದ ಶಂಕರನಾರಾಯಣ ಗ್ರಾಮ ಪಂಚಾಯತ್ ವ್ಯಾಪ್ತಿಯ ಕುಪ್ಪಾರು ಮಹಾಬಲ ಪ.ಜಾತಿ ಮನೆಗೆ ಹೋಗುವ ರಸ್ತೆ ಅಭಿವೃದ್ಧಿ | ಉಡುಪಿ | 54.00 | - | - | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 54.00 | 54.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |

| | | | | | | | | | |
|---|---|---|---|---|---|---|---|---|---|
| 25 | ಗುಜ್ಜಾಡಿ ಗ್ರಾಮ ಪಂಚಾಯತ್‌ನ ನಾಯಕವಾಡಿ ಜನತಾ ಕಾಲೋನಿಯಿಂದ ಸ್ಮಶಾನಕ್ಕೆ ಹೋಗುವ ರಸ್ತೆ ಮತ್ತು ನಾಯಕವಾಡಿ ಜನತಾ ಕಾಲೋನಿ ಗೌರಿ ಪ.ಜಾತಿ ಮನೆಯಿಂದ ಚೆನ್ನಮ್ಮ ಪ.ಜಾತಿ ಮನೆಗೆ ಹೋಗುವ ಕೂಡು ರಸ್ತೆ ಮತ್ತು ನಾಯಕವಾಡಿ ಜನತಾ ಕಾಲೋನಿ ಲಕ್ಷ್ಮೀ ಪ.ಜಾತಿ ಮನೆಯಿಂದ ಮೋಹಿನಿ ಪ.ಜಾತಿ ಮನೆಗೆ ಹೋಗುವ ಕೂಡು ರಸ್ತೆ ಅಭಿವೃದ್ಧಿ | ಉಡುಪಿ | 15.00 | – | – | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 15.00 | 15.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 26 | ಜಡ್ಕಲ್ ಗ್ರಾಮ ಪಂಚಾಯತ್‌ನ ಮುದೂರು ಗ್ರಾಮದ ದೊಂಬೈಲಿನಿಂದ ಉಂಡಿವರೆಗೆ ರಸ್ತೆ ಅಭಿವೃದ್ಧಿ | ಉಡುಪಿ | 25.00 | – | – | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 25.00 | 25.00 | ಕಾಮಗಾರಿ ಪ್ರಗತಿಯಲ್ಲಿದೆ. |
| 27 | ಕಂಬದಕೋಣೆ ಗ್ರಾಮ ಪಂಚಾಯತ್ ವ್ಯಾಪ್ತಿಯ ಹೇರಂಜಾಲು ಎಸ್‌ಸಿ ಕಾಲೋನಿ ರಸ್ತೆ ಅಭಿವೃದ್ಧಿ | ಉಡುಪಿ | 18.00 | – | – | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 18.00 | 18.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 28 | ಗುಜ್ಜಾಡಿ ಗ್ರಾಮ ಪಂಚಾಯತ್‌ನ ಆಶ್ರಯ ಕಾಲೋನಿ ಕೊಡಪಾಡಿ ಅಕ್ಕಮ್ಮ ಪ.ಜಾತಿ ಮನೆಯಿಂದ ಲಚ್ಚು ಪ.ಜಾತಿ ಮನೆಗೆ ಹೋಗುವ ರಸ್ತೆ ಮತ್ತು ಆಶ್ರಯ ಕಾಲೋನಿ ಬೇಬಿ ಪ.ಜಾತಿ ಮನೆಯಿಂದ ಬಾಬಿ ಪ.ಜಾತಿ ಮನೆಗೆ ಹೋಗುವ ರಸ್ತೆ ಅಭಿವೃದ್ಧಿ | ಉಡುಪಿ | 10.00 | – | – | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 10.00 | 10.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 29 | ಗುಜ್ಜಾಡಿ ಗ್ರಾಮ ಪಂಚಾಯತ್‌ನ ಆಶ್ರಯ ಕಾಲೋನಿ ಕೊಡಪಾಡಿ ಚಂದ್ರ ಚಮಗಾರ ಮನೆಗೆ ಹೋಗುವ ರಸ್ತೆ ಅಭಿವೃದ್ಧಿ | ಉಡುಪಿ | 5.00 | – | – | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 5.00 | 5.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 30 | ಹಟ್ಟಿಯಂಗಡಿ ಗ್ರಾಮದ ಪಂಚಾಯತ್‌ನ ಕನ್ಯಾನ ಗ್ರಾಮದ ರಕ್ತೇಶ್ವರಿ ದೇವಸ್ಥಾನಕ್ಕೆ ಹೋಗುವ ರಸ್ತೆ ಅಭಿವೃದ್ಧಿ | ಉಡುಪಿ | 10.00 | – | – | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 10.00 | 10.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 31 | ಹಟ್ಟಿಯಂಗಡಿ ಗ್ರಾಮದ ಪಂಚಾಯತ್‌ನ ಕನ್ಯಾನ ಗ್ರಾಮದ ಕೂಡ್ಲುಗುಡ್ಡಗೆ ಹೋಗುವ ರಸ್ತೆ ಅಭಿವೃದ್ಧಿ | ಉಡುಪಿ | 10.00 | – | – | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 10.00 | 10.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 32 | ಕೆರಾಡಿ ಬೆಳ್ಳಾಲ ಗ್ರಾಮ ಪಂಚಾಯತ್‌ನ ನಂದ್ರೊಳ್ಳಿ ಗ್ರಾಮದ ನೂಜ್‌ಬಂಡ್ರಾಡಿ ಎಸ್.ಸಿ. ಕಾಲೋನಿಗೆ ಹೋಗುವ ರಸ್ತೆ | ಉಡುಪಿ | 7.00 | – | – | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 7.00 | 7.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |

| | | | | | | | | | |
|---|---|---|---|---|---|---|---|---|---|
| | ಅಭಿವೃದ್ಧಿ | | | | | | | | |
| 33 | ಬೈಂದೂರು ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯ ಕೆರ್ಗಾಲು ಗ್ರಾಮ ಪಂಚಾಯತ್ ವ್ಯಾಪ್ತಿಯ ಶೇಷು ಪ.ಜಾತಿ ಮನೆ ಹತ್ತಿರ ಕಿರು ಸೇತುವೆ ಸಹಿತ ರಸ್ತೆ ಅಭಿವೃದಿ | ಉಡುಪಿ | 10.00 | – | – | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 10.00 | 10.00 | ಕಾಮಗಾರಿ ಪ್ರಗತಿಯಲ್ಲಿದೆ. |
| 34 | ಬೈಂದೂರು ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯ ಸಿದ್ದಾಪುರ ಗ್ರಾಮ ಪಂಚಾಯತ್ ವ್ಯಾಪ್ತಿಯ ಗುಲಾಬಿ ನಾಯ್ಕತಿ ಮನೆಯಿಂದ ಮಾರುಕಟ್ಟೆ ಕೂಡು ರಸ್ತೆವರೆಗೆ ಕಾಂಕ್ರೀಟ್ ರಸ್ತೆ ಅಭಿವೃದ್ಧಿ | ಉಡುಪಿ | 25.00 | – | – | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 25.00 | 25.00 | ಕಾಮಗಾರಿ ಪ್ರಗತಿಯಲ್ಲಿದೆ. |
| 35 | 74ನೇ ಉಳ್ಳೂರು ಗ್ರಾಮ ಪಂಚಾಯತ್ ವ್ಯಾಪ್ತಿಯ ಕಾರೆಬೈಲು ಚಿಟ್ಟೆ ಹರಿಜನ ಮನೆ ಹೋಗುವ ರಸ್ತೆ ಅಭಿವೃದ್ಧಿ | ಉಡುಪಿ | 25.00 | – | – | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 25.00 | 25.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 36 | ಕೆರಾಡಿ–ಬೆಳಾಲ ಗ್ರಾಮ ಪಂಚಾಯತ್ ವ್ಯಾಪ್ತಿಯ ಮೋರ್ಟು ದರ್ಖಾಸ್ತಿಗೆ ಹೋಗುವ ರಸ್ತೆ ಅಭಿವೃದ್ಧಿ | ಉಡುಪಿ | 40.00 | – | – | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 40.00 | 40.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 37 | ಗುಲ್ವಾಡಿ ಗ್ರಾಮ ಪಂಚಾಯತ್ ವ್ಯಾಪ್ತಿಯ ಸೌಕೂರು ಭಜನಾ ಮಂದಿರದಿಂದ ಎಸ್‌ಸಿ ಕಾಲೋನಿಗೆ ರಸ್ತೆ ಅಭಿವೃದ್ಧಿ | ಉಡುಪಿ | 20.00 | – | – | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 20.00 | 20.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 38 | ಹಕ್ಲಾಡಿ ಗ್ರಾಮ ಪಂಚಾಯತ್ ವ್ಯಾಪ್ತಿಯ ಕೆಳಕಲಿ ಮಾರಿಕಾಂಬಾ ದೇವಸ್ಥಾಕ್ಕೆ ಹೋಗುವ ರಸ್ತೆ ಅಭಿವೃದ್ಧಿ | ಉಡುಪಿ | 10.00 | – | – | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 10.00 | 10.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 39 | ಹಟ್ಟಿಯಂಗಡಿ ಗ್ರಾಮ ಪಂಚಾಯತ್ ವ್ಯಾಪ್ತಿಯ ಕರ್ಕಿ ಎಸ್‌ಸಿ ಪುಟ್ಟಿ ಮನೆಯಿಣದ ಜೋತಾಡಿಗೆ ಹೋಗುವ ರಸ್ತೆ ಅಭಿವೃದ್ಧಿ | ಉಡುಪಿ | 20.00 | – | – | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 20.00 | 20.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 40 | ನಾಡ ಗ್ರಾಮ ಪಂಚಾಯತ್ ವ್ಯಾಪ್ತಿಯ ರಾಮನಗರ ಡಾ:ಬಿ.ಆರ್. ಕಾಲೋನಿಗೆ ಹೋಗುವ ರಸ್ತೆ ಅಭಿವೃದ್ಧಿ | ಉಡುಪಿ | 20.00 | – | – | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 20.00 | 20.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |

**ನಿಗಮದಿಂದ ನಿರ್ವಹಿಸಲಾದ 2019-20 ಟಿ.ಎಸ್.ಪಿ ಕಾಮಗಾರಿಗಳು**

| | | | | | | | | | |
|---|---|---|---|---|---|---|---|---|---|
| ಕೆ.ಆರ್.ಐ.ಡಿ.ಎಲ್ ಉಡುಪಿ ಇವರಿಂದ ಕೈಗೊಂಡ 2019-20 ಟಿ.ಎಸ್.ಪಿ ಕಾಮಗಾರಿಗಳ ವಿವರಗಳು | | | | | | | | | |
| 41 | ಬೈಂದೂರು ವಿಧಾನಸಭಾ ಕ್ಷೇತ್ರದ, ಕೊಲ್ಲೂರು ಮುಖ್ಯರಸ್ತೆಯಿಂದ ತಲ್ಲೂರು ಗ್ರಾಮ ಪಂಚಾಯತ್‌ನ ಜಿಲ್ಲಾ ಮುಖ್ಯ ರಸ್ತೆಯಿಂದ ಕೋಟೆಬಾಗಿಲು ಎಸ್.ಇ/ಎಸ್.ಟಿ ಕಾಲೋನಿ ರಸ್ತೆ ಅಭಿವೃದ್ಧಿ. | ಉಡುಪಿ | 100.00 | - | - | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 100.00 | 100.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 42 | ಬೈಂದೂರು ವಿಧಾನ ಸಭಾ ಕ್ಷೇತ್ರದ ಯಡ್ತರೆ ಗ್ರಾಮ ಪಂಚಾಯತ್ ಊದೂರಿನಿಂದ ಕಡ್ಕೆ ರಸ್ತೆ ಅಭಿವೃದ್ಧಿ. | ಉಡುಪಿ | 111.00 | - | - | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 111.00 | 111.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 43 | ಬೈಂದೂರು ವಿಧಾನ ಸಭಾ ಕ್ಷೇತ್ರದ ಖಂಬದಕೋಣೆ ಮುಖ್ಯ ರಸ್ತೆಯ ಕಾಲ್ತೋಡು ಗ್ರಾಮ ಪಂಚಾಯತ್ ವ್ಯಾಪ್ತಿಯ ಜಿಲ್ಲಾ ಮುಖ್ಯ ರಸ್ತೆಯಿಂದ ಬೊಳ್ಳಂಬಳ್ಳಿ ಎಸ್.ಟಿ ಕಾಲೋನಿವರೆಗೆರಸ್ತೆ ಅಭಿವೃದ್ಧಿ. | ಉಡುಪಿ | 150.00 | - | - | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 150.00 | 150.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 44 | ಬೈಂದೂರು ವಿಧಾನ ಸಭಾ ಕ್ಷೇತ್ರದ ಕೊಲ್ಲೂರು ಮುಖ್ಯ ರಸ್ತೆಯ ಗೋಳಿಹೊಳೆ ಗ್ರಾ ಪಂಚಾಯತ್ ವ್ಯಾಪ್ತಿಯ ಕೊಡಾಳ್‌ಕೆರೆ ಎಸ್.ಟಿ ಕಾಲೋನಿ ರಸ್ತೆ ಅಭಿವೃದ್ಧಿ. | ಉಡುಪಿ | 150.00 | - | - | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 150.00 | 150.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 45 | ಬೈಂದೂರು ವಿಧಾನ ಸಭಾ ಕ್ಷೇತ್ರದ ಹೊಸೂರು ಮರ್ಡಿ ಗಾಳಿ ಪ್ಲೋಟಿನಿಂದ ಮರ್ಡಿ ಮಾರ್ಗವಾಗಿ ಕುಷ್ಠ ಕೊಡ್ಲು ಅಪ್ಪು ನಾಯ್ಕರ ಮನೆ ತನಕ ರಸ್ತೆ ಡಾಂಬರೀಕರಣ ಅಥವಾ ಕಾಂಕ್ರೀಟೀಕರಣ. | ಉಡುಪಿ | 40.00 | - | - | ಕೆ.ಆರ್.ಐ.ಡಿ.ಎಲ್ ಇಲಾಖೆ, ಉಡುಪಿ | 40.00 | 40.00 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| ಒಟ್ಟು-2019-20 | | | 11755.60 | | 10779.69 | | 6341.67 | 6341.67 | |

| 2020-21ನೇ ಸಾಲಿನಲ್ಲಿ ಕೈಗೊಂಡ ಕಾಮಗಾರಿಗಳ ವಿವರ | | | | | | | | | |
|---|---|---|---|---|---|---|---|---|---|
| | 4701-ಕಾಮಗಾರಿಗಳು: 2020-21ನೇ ಸಾಲಿನಲ್ಲಿ ಕೈಗೊಂಡ ಕಾಮಗಾರಿಗಳ ವಿವರ | | | | | | | | |
| 1 | ಬೈಂದೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಅಜ್ರಿ-ನೇರಳಕಟ್ಟೆ ಮುಖ್ಯ ರಸ್ತೆಯಿಂದ ಅಜ್ರಿ-ಯಡೂರು-ಜಡ್ಡಿನಮುಲ್ಲಿಗೆ ಹೋಗುವ ರಸ್ತೆ ಅಭಿವೃದ್ಧಿ ಮತ್ತು ಬೈಂದೂರು ವಿಧಾನಸಭಾ ಕ್ಷೇತ್ರದ ಅಜ್ರಿ-ನೇರಳಕಟ್ಟೆ ಮುಖ್ಯ ರಸ್ತೆಯಿಂದ ಕುದ್ರುಬೇರುಕಟ್ಟೇ ರಾಮನಕೊಡ್ಲು ಆಗೋಡು ರಸ್ತೆ ಅಭಿವೃದ್ಧಿ-ಪ್ಯಾಕೇಜ್-1 | ಉಡುಪಿ | 420.00 | 01/2020-21 ದಿ:17/04/2020 | 435.05 | ಶ್ರೀ ವಿಜಯಾನಂದ ಶೆಟ್ಟಿ ಕನೀನಿನಿ, ಕೆಟಗರಿ-2 ಗುತ್ತಿಗೆದಾರರು, "ಸುಮತಿ", ಹಳ್ನಾಡು ಪೋಸ್ಟ್, ಕುಂದಾಪುರ ತಾಲೂಕು, ಉಡುಪಿ ಜಿಲ್ಲೆ-576211 | 260.32 | 260.32 | ಕಾಮಗಾರಿಯು ಪೂರ್ಣಗೊಂಡಿದ್ದು, ಅಂತಿಮ ಬಿಲ್ ಪಾವತಿಯಾಗಬೇಕಾಗಿರುತ್ತದೆ. |
| 2 | ಬೈಂದೂರು ವಿಧಾನಸಭಾ ಕ್ಷೇತ್ರದ ಅಂಪಾರು ಗ್ರಾಮ ಪಂಚಾಯತ್‌ನ ಗೊರಟೆಗೆ ಹೋಗುವ ರಸ್ತೆ ಅಭಿವೃದ್ಧಿ (3 ಕಿ.ಮೀ), ಬೈಂದೂರು ವಿಧಾನಸಭಾ ಕ್ಷೇತ್ರದ ಶಂಕರನಾರಾಯಣ ಗ್ರಾಮ ಪಂಚಾಯತ್ ವ್ಯಾಪ್ತಿಯ ಹಾಲಾಡಿ-ಅಮಾಸೆಬೈಲು ಮುಖ್ಯರಸ್ತೆಯಿಂದ ಕುಳಂಜೆ ಮಾವಿನಕೊಡ್ಲು ಬಾಕಾಡಿ ರಸ್ತೆ ಅಭಿವೃದ್ಧಿ ಮತ್ತು ಬೈಂದೂರು ವಿಧಾನಸಭಾ ಕ್ಷೇತ್ರದ ಕೊಲ್ಲೂರು ಮುಖ್ಯರಸ್ತೆಯಿಂದ ಆಲೂರು ಗ್ರಾಮ ಪಂಚಾಯತ್ ವ್ಯಾಪ್ತಿಯ ಹಳ್ಳಿ ಮಹಾಲಿಂಗೇಶ್ವರ ರಸ್ತೆ ಅಭಿವೃದ್ಧಿ-ಪ್ಯಾಕೇಜ್-4 | ಉಡುಪಿ | 400.00 | 02/2020-21 ದಿ:17/04/2020 | 417.89 | ಶ್ರೀ ವಿಜಯಾನಂದ ಶೆಟ್ಟಿ ಕನೀನಿನಿ, ಕೆಟಗರಿ-2 ಗುತ್ತಿಗೆದಾರರು, "ಸುಮತಿ", ಹಳ್ನಾಡು ಪೋಸ್ಟ್, ಕುಂದಾಪುರ ತಾಲೂಕು, ಉಡುಪಿ ಜಿಲ್ಲೆ-576211 | 207.08 | 207.08 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 3 | Providing Auto gauge level reader and Flood Foreasting system with asociated works & instruments for Sowparnika LIS | ಉಡುಪಿ | 10.00 | 03/2020-21 ದಿ:04/06/2020 | 9.92 | ಶ್ರೀ ಗಣರಾಜ್ ಶೆಟ್ಟಿ, ಬಿ೦ ಚಂದ್ರಶೇಖರ್ ಶೆಟ್ಟಿ ಕ್ಲಾಸ್-2 ಸಿವಿಲ್ ಗುತ್ತಿಗೆದಾರರು, ವಕ್ವಾಡಿ ಅಂಚೆ, ಕುಂದಾಪುರ ತಾ।, ಉಡುಪಿ ಜಿಲ್ಲೆ | 9.96 | 9.96 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |

| | | | | | | | | | |
|---|---|---|---|---|---|---|---|---|---|
| 4 | ಬೈಂದೂರು ವಿಧಾನಸಭಾ ಕ್ಷೇತ್ರದ ಮರವಂತೆ ಗ್ರಾಮ ಪಂಚಾಯತ್‌ನ ಮೀನುಗಾರಿಕಾ ರಸ್ತೆ ಅಭಿವೃದ್ಧಿ | ಉಡುಪಿ | 50.00 | 04/2020-21 ದಿ:04/06/2020 | 48.68 | ಶ್ರೀ ಸಿ.ಕೆ ವೈರಮುಡಿ ಕ್ಲಾಸ್-1 ಪಿ.ಡಬ್ಲ್ಯು.ಡಿ ಗುತ್ತಿಗೆದಾರರು, ಚಿಕ್ಕನಾಯಕನಹಳ್ಳಿ, ಸಾಲಿಗ್ರಾಮ ಹೋಬಳಿ, ಕೆ.ಆರ್.ನಗರ, ಮೈಸೂರು ಜಿಲ್ಲೆ-571602. | 46.97 | 46.97 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 5 | ಗಂಗೊಳ್ಳಿ ಗ್ರಾಮ ಪಂಚಾಯತ್‌ನ ಉಮಾನಾಥ ದೇವಾಡಿಗರ ಮನೆಯಿಂದ ಸಂಜೀವ ಪೂಜಾರಿ ಅವರ ಮನೆತನಕ ರಸ್ತೆ ಅಭಿವೃದ್ಧಿ | ಉಡುಪಿ | 15.00 | 05/2020-21 ದಿ:04/06/2020 | 14.66 | ಶ್ರೀ ಕೆ.ಜೆ ಕುಚೇಲ ಕ್ಲಾಸ್-2 ಪಿ.ಡಬ್ಲ್ಯು.ಡಿ ಗುತ್ತಿಗೆದಾರರು, ಕಗೇರಿ ಗ್ರಾಮ, ಕೆ.ಆರ್. ನಗರ ತಾಲೂಕು, ಮೈಸೂರು ಜಿಲ್ಲೆ-571602. | 14.66 | 14.66 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 6 | ಶಿವಮೊಗ್ಗ ಲೋಕಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಉಡುಪಿ ಜಿಲ್ಲೆಯ ಬೈಂದೂರು ವಿಧಾನಸಭಾ ಕ್ಷೇತ್ರದ ಸಿದ್ಧಾಪುರ ಪೇಟೆ ಭಾಗದ ಜಂಕ್ಷನ್‌ನಲ್ಲಿನ ರಸ್ತೆ ಅಭಿವೃದ್ಧಿ ಕಾಮಗಾರಿ | ಉಡುಪಿ | 300.00 | 06/2020-21 ದಿ:23/10/2020 | 306.56 | ಶ್ರೀ. ಕಮಲ್ ಕಿಶೋರ್ ಹೆಗಡೆ, ಕನೀನಿನಿ, ಕೆಟಗರಿ-3 ಗುತ್ತಿಗೆದಾರರು, ಕೆಳಹೇಸಿನ ಕಟ್ಟೆ, ಮೊಳಹಳ್ಳಿ ಅಂಚೆ, ಕುಂದಾಪುರ ತಾಲೂಕು, ಉಡುಪಿ ಜಿಲ್ಲೆ-576222. | 259.71 | 259.71 | ಕಾಮಗಾರಿಯು ಪೂರ್ಣಗೊಂಡಿದ್ದು, ಅಂತಿಮ ಬಿಲ್ ಪಾವತಿಸ-ಬೇಕಾಗಿರುತ್ತದೆ. |
| 7 | ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನ ಗುಲ್ವಾಡಿ ಗ್ರಾಮದ ಶ್ರೀ ಸೌಕೂರು ದುರ್ಗಾಪರಮೇಶ್ವರಿ ದೇವಸ್ಥಾನಕ್ಕೆ ಹೋಗುವ ರಸ್ತೆ ಕಾಂಕ್ರೀಟ್ ರಸ್ತೆ ಅಭಿವೃದ್ಧಿ ಕಾಮಗಾರಿ | ಉಡುಪಿ | 200.00 | 08/2020-21 ದಿ:02/11/2020 | 209.74 | ಶ್ರೀ ಪ್ರಶಾಂತ್, ಕನೀನಿನಿ, ಕೆಟಗರಿ-2 ಗುತ್ತಿಗೆದಾರರು, ಮೊಳಹಳ್ಳಿ, ಕುಂದಾಪುರ | 209.35 | 209.35 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 8 | ವಾರಾಹಿ ಬಲದಂಡೆ ನಾಲಾ ಸರಪಳಿ 11.00ರಿಂದ 12.00ಕಿ.ಮೀನಲ್ಲಿ ಬರುವ ಸರ್ವೀಸ್ ರಸ್ತೆ ಸರಪಳಿ 11.330ರಿಂದ 11.360ಕಿ.ಮೀ, ಸರಪಳಿ 11.410ಕಿ.ಮೀರಿಂದ 11.540ಕಿ.ಮೀವರೆಗೆ ರಕ್ಷಣಾ ತಡೆಗೋಡೆ ನಿರ್ಮಾಣ. (ಸರಪಳಿ 11.400 ರಿಂದ 11.493 ಸರ್ವೀಸ್ ರಸ್ತೆ ಬದಿ, ಸ.11.323ರಿಂದ 11.413 ಪರಿಶೀಲನೆ ಬದಿ, ಸ.11.365ರಿಂದ 11.374 ಸರ್ವೀಸ್ ರಸ್ತೆ ಬದಿ ಮತ್ತು ಸ. 11.3479ರಿಂದ 11.355 ಸರ್ವೀಸ್ ರಸ್ತೆ ಬದಿ)-ಗ್ರ್ಯಾವಿಟಿ ರಕ್ಷಣಾ ತಡೆಗೋಡೆ | ಉಡುಪಿ | 460.00 | 10/2020-21 ದಿ:06/11/2020 | 488.69 | ಮೆ॥ ಶ್ರೀ ಭುವನೇಶ್ವರಿ ಕನ್‌ಸ್ಟ್ರಕ್ಷನ್ಸ್ ಕನೀನಿನಿ, ಕೆಟಗರಿ-1 ಗುತ್ತಿಗೆದಾರರು 2ನೇ ಮಹಡಿ, 674, 5ನೇ ಕ್ರಾಸ್, ಬಿ.ಎಸ್.ಕೆ ಫಸ್ಟ್ ಸ್ಟೇಜ್, 2ನೇ ಬ್ಲಾಕ್ ಬೆಂಗಳೂರು-560050. | 488.77 | 488.77 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |

| | | | | | | | | | |
|---|---|---|---|---|---|---|---|---|---|
| 9 | ವಾರಾಹಿ ಬಲದಂಡೆ ನಾಲಾ ಸರಪಳಿ 11.00ರಿಂದ 12.00ಕಿ.ಮೀನಲ್ಲಿ ಬರುವ ಪರಿಶೀಲನಾ ರಸ್ತೆ ಸರಪಳಿ 11.110ರಿಂದ 11.120ಕಿ.ಮೀ, ಸರಪಳಿ 11.175ಕಿ.ಮೀರಿಂದ 11.210ಕಿ.ಮೀ, ಸ. 11.147ರಿಂದ 11.152ವರೆಗೆ ಮತ್ತು ಸ.11.300ರಿಂದ 11.415ವರೆಗೆ ರಕ್ಷಣಾ ತಡೆಗೋಡೆ ನಿರ್ಮಾಣ. (ಸರಪಳಿ 10.902 ರಿಂದ 10.942 ಸರ್ವೀಸ್ ಮತ್ತು ಪರಿಶೀಲನಾ ರಸ್ತೆ ಬದಿ, ಸ.11.273ರಿಂದ 11.323 ಪರಿಶೀಲನೆ ಬದಿ, ಸ.11.3179ರಿಂದ 11.3479 ಸರ್ವೀಸ್ ರಸ್ತೆ ಬದಿ, ಸ.11.196ರಿಂದ 11.213 ಪರಿಶೀಲನೆ ರಸ್ತೆ ಬದಿ ಮತ್ತು ಸ. 11.163ರಿಂದ 11.1799 ಸರ್ವೀಸ್ ರಸ್ತೆ ಬದಿ) | ಉಡುಪಿ | 450.00 | 11/2020-21 ದಿ:06/11/2020 | 478.23 | ಮೆ॥ ಶ್ರೀ ಭುವನೇಶ್ವರಿ ಕನ್‌ಸ್ಟ್ರಕ್ಷನ್ಸ್ ಕನೀನಿನಿ, ಕೆಟಗರಿ-1 ಗುತ್ತಿಗೆದಾರರು 2ನೇ ಮಹಡಿ, 674, 5ನೇ ಕ್ರಾಸ್, ಬಿ.ಎಸ್.ಕೆ ಫಸ್ಟ್ ಸ್ಟೇಜ್, 2ನೇ ಬ್ಲಾಕ್ ಬೆಂಗಳೂರು-560050. | 477.71 | 477.71 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 10 | ವಾರಾಹಿ ಬಲದಂಡೆ ಸಾಮಾನ್ಯ ನಾಲೆಯಲ್ಲಿನ ಆಳವಾದ ಸ್ಥಳಗಳಲ್ಲಿ ಕ್ಯಾಟಲ್ ರ್‍ಯಾಂಪ್ ನಿರ್ಮಾಣ ಕಾಮಗಾರಿ | ಉಡುಪಿ | 30.00 | 15/2020-21 ದಿ:01/01/2021 | 26.28 | ಶ್ರೀ ಪ್ರಶಾಂತ್, ಕನೀನಿನಿ, ಪಿ.ಡಬ್ಲ್ಯು.ಡಿ-1 ಗುತ್ತಿಗೆದಾರರು, ಮೊಳಹಳ್ಳಿ, ಕುಂದಾಪುರ | 26.19 | 26.19 | ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| 11 | ಶಿವಮೊಗ್ಗ ಲೋಕಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಉಡುಪಿ ಜಿಲ್ಲೆಯ ಬೈಂದೂರು ವಿಧಾನಸಭಾ ಕ್ಷೇತ್ರದ ಸಿದ್ಧಾಪುರ ಪೇಟೆ ಭಾಗದ ಜಂಕ್ಷನ್‌ನಲ್ಲಿನ ರಸ್ತೆ ಅಭಿವೃದ್ಧಿ ಕಾಮಗಾರಿಯಲ್ಲಿ ಬರುವ ವಿದ್ಯುತ್ ಲೈನ್ ಮತ್ತು ಟ್ರಾನ್ಸ್‌ಫಾರ್ಮರ್ ಸ್ಥಳಾಂತರ ಕಾಮಗಾರಿ | ಉಡುಪಿ | 7.80 | 20/2020-21 ದಿ:12/03/2021 | 7.36 | ಶ್ರೀ ಜಯಂತ್ ಶೆಟ್ಟಿ, ಕ್ಲಾಸ್-1 ಎಲೆಕ್ಟ್ರಿಕಲ್ ಗುತ್ತಿಗೆದಾರರು, ಮೆ॥ ವಿಷ್ಣೇಶ್ವರ್ ಎಲೆಕ್ಟ್ರಿಕಲ್ಸ್, ಅಜ್ರಿ, ಕುಂದಾಪುರ | 0.00 | 0.00 | ಕಾಮಗಾರಿಯು ಪೂರ್ಣಗೊಂಡಿದ್ದು, ಅಂತಿಮ ಬಿಲ್ ಪಾವತಿಯಾಗ ಬೇಕಾಗಿರುತ್ತದೆ. |
| **ನಿರ್ಮಿತಿ ಕೇಂದ್ರ, ಉಡುಪಿ ಇವರಿಂದ ನಿರ್ವಹಿಸಲಾದ 2020-21 ಸಮುದಾಯ ಭವನ ನಿರ್ಮಾಣ ಕಾಮಗಾರಿಗಳು** | | | | | | | | | |
| 12 | ಬೈಂದೂರು ತಾಲ್ಲೂಕಿನ ಬಿಜೂರು ಗ್ರಾಮದ ಸ.ನ. 86ರ ಖಾಲಿ ನಿವೇಶನದಲ್ಲಿ ಸಾರ್ವಜನಿಕ ಸಮುದಾಯ ಭವನ ನಿರ್ಮಾಣ | ಉಡುಪಿ | 100.00 | - | - | ನಿರ್ಮಿತಿ ಕೇಂದ್ರ, ಉಡುಪಿ | 0.00 | 0.00 | ಅಂದಾಜುಪಟ್ಟಿ ಅನುಮೋದನೆ-ಗೊಳ್ಳಬೇಕಿದ್ದು, ಕಾಮಗಾರಿಯನ್ನು ನಿರ್ಮಿತಿ ಕೇಂದ್ರ, ಉಡುಪಿ ಇವರಿಂದ ಕೈಗೊಳ್ಳಬೇಕಾಗಿರುತ್ತದೆ. |
| 13 | ಕುಂದಾಪುರ ತಾಲ್ಲೂಕಿನ ಹಟ್ಟಿಯಂಗಡಿ ಗ್ರಾಮದ ಸ.ನ. 95/1 ರ ನಿವೇಶನದಲ್ಲಿ ಸಾರ್ವಜನಿಕ ಸಮುದಾಯ ಭವನ ನಿರ್ಮಾಣ | ಉಡುಪಿ | 50.00 | - | - | ನಿರ್ಮಿತಿ ಕೇಂದ್ರ, ಉಡುಪಿ | 0.00 | 0.00 | ಅಂದಾಜುಪಟ್ಟಿ ಅನುಮೋದನೆಗೊಂಡಿದ್ದು, ಕಾಮಗಾರಿಯನ್ನು ನಿರ್ಮಿತಿ ಕೇಂದ್ರ, ಉಡುಪಿ ಇವರಿಂದ ಕೈಗೊಳ್ಳಬೇಕಾಗಿರುತ್ತದೆ. |

| | | | | | | | | | |
|---|---|---|---|---|---|---|---|---|---|
| 14 | ಬೈಂದೂರು ತಾಲ್ಲೂಕಿನ ಕಾಲ್ತೋಡು ಗ್ರಾಮದ ಮಟ್ಟನಹೊಳೆ ಗ್ರಾಮದ ಸ.ನ. 246/4 ಖಾಲಿ ನಿವೇಶಾನದಲ್ಲಿ ಸಾರ್ವಜನಿಕ ಸಮುದಾಯ ಭವನ ನಿರ್ಮಾಣ | ಉಡುಪಿ | 50.00 | - | - | ನಿರ್ಮಿತಿ ಕೇಂದ್ರ, ಉಡುಪಿ | 0.00 | 0.00 | ಅಂದಾಜು ಪಟ್ಟಿ ಅನುಮೋದನೆ-ಗೊಂಡಿದ್ದು, ಕಾಮಗಾರಿಯನ್ನು ನಿರ್ಮಿತಿ ಕೇಂದ್ರ, ಉಡುಪಿ ಇವರಿಂದ ಕೈಗೊಳ್ಳಬೇಕಾಗಿರುತ್ತದೆ. |
| 15 | ಬೈಂದೂರು ತಾಲ್ಲೂಕಿನ ಶಿರೂರು ಗ್ರಾಮದ ಕರಿಕಟ್ಟೆ ಗ್ರಾಮದ ಸ.ನ. 51 ರ ನಿವೇಶನದಲ್ಲಿ ಸಾರ್ವಜನಿಕ ಸಮುದಾಯ ಭವನದ ಮುಂದುವರಿದ ಕಾಮಗಾರಿ | ಉಡುಪಿ | 25.00 | - | - | ನಿರ್ಮಿತಿ ಕೇಂದ್ರ, ಉಡುಪಿ | 0.00 | 0.00 | ಅಂದಾಜುಪಟ್ಟಿ ಅನುಮೋದನೆ-ಗೊಂಡಿದ್ದು, ಕಾಮಗಾರಿಯನ್ನು ನಿರ್ಮಿತಿ ಕೇಂದ್ರ, ಉಡುಪಿ ಇವರಿಂದ ಕೈಗೊಳ್ಳಬೇಕಾಗಿರುತ್ತದೆ. |
| 16 | ಬೈಂದೂರು ತಾಲ್ಲೂಕಿನ ಉಪ್ಪುಂದ ಗ್ರಾಮದ ಸ.ನ. 96/5 ಎ1 ರ ನಿವೇಶನದಲ್ಲಿ ಸಾರ್ವಜನಿಕ ಸಮುದಾಯ ಭವನ ನಿರ್ಮಾಣ | ಉಡುಪಿ | 50.00 | - | - | ನಿರ್ಮಿತಿ ಕೇಂದ್ರ, ಉಡುಪಿ | 0.00 | 0.00 | ಅಂದಾಜು ಪಟ್ಟಿ ಅನುಮೋದನೆ-ಗೊಳ್ಳಬೇಕಿದ್ದು, ಕಾಮಗಾರಿಯನ್ನು ನಿರ್ಮಿತಿ ಕೇಂದ್ರ, ಉಡುಪಿ ಇವರಿಂದ ಕೈಗೊಳ್ಳಬೇಕಾಗಿರುತ್ತದೆ. |
| 17 | ಬೈಂದೂರು ತಾಲ್ಲೂಕಿನ ಉಳ್ಳೂರು-11 ಗ್ರಾಮದ ಸ.ನ. 18/2 ರ ನಿವೇಶನದಲ್ಲಿ ಸಾರ್ವಜನಿಕ ಸಮುದಾಯ ಭವನ ನಿರ್ಮಾಣ | ಉಡುಪಿ | 100.00 | - | - | ನಿರ್ಮಿತಿ ಕೇಂದ್ರ, ಉಡುಪಿ | 0.00 | 0.00 | ಅಂದಾಜುಪಟ್ಟಿ ಅನುಮೋದನೆ-ಗೊಂಡಿದ್ದು, ಕಾಮಗಾರಿಯನ್ನು ನಿರ್ಮಿತಿ ಕೇಂದ್ರ, ಉಡುಪಿ ಇವರಿಂದ ಕೈಗೊಳ್ಳಬೇಕಾಗಿರುತ್ತದೆ. |
| 18 | ಬೈಂದೂರು ತಾಲ್ಲೂಕಿನ ಕೆರ್ಗಾಲು ಗ್ರಾಮದ ಸ.ನ. 63/1 ರ ನಿವೇಶನದಲ್ಲಿ ಸಾರ್ವಜನಿಕ ಸಮುದಾಯ ಭವನದ ಮುಂದುವರಿದ ಕಾಮಗಾರಿ | ಉಡುಪಿ | 50.00 | - | - | ನಿರ್ಮಿತಿ ಕೇಂದ್ರ, ಉಡುಪಿ | 0.00 | 0.00 | ಅಂದಾಜುಪಟ್ಟಿ ಅನುಮೋದನೆ-ಗೊಂಡಿದ್ದು, ಕಾಮಗಾರಿಯನ್ನು ನಿರ್ಮಿತಿ ಕೇಂದ್ರ, ಉಡುಪಿ ಇವರಿಂದ ಕೈಗೊಳ್ಳಬೇಕಾಗಿರುತ್ತದೆ. |
| 19 | ಕುಂದಾಪುರ ತಾಲ್ಲೂಕಿನ ತ್ರಾಸಿ ಗ್ರಾಮದ ಸ.ನ. 65/2 ಸಿ1 ಮತ್ತು 65/2 ಸಿ5 ರ ನಿವೇಶನದಲ್ಲಿ ಕೊಂಕಣ ಸಮಾಜದ ಸಾರ್ವಜನಿಕ ಸಮುದಾಯ ಭವನದ ಮುಂದುವರಿದ ಕಾಮಗಾರಿ | ಉಡುಪಿ | 50.00 | - | - | ನಿರ್ಮಿತಿ ಕೇಂದ್ರ, ಉಡುಪಿ | 0.00 | 0.00 | ಅಂದಾಜುಪಟ್ಟಿ ಅನುಮೋದನೆ-ಗೊಂಡಿದ್ದು, ಕಾಮಗಾರಿಯನ್ನು ನಿರ್ಮಿತಿ ಕೇಂದ್ರ, ಉಡುಪಿ ಇವರಿಂದ ಕೈಗೊಳ್ಳಬೇಕಾಗಿರುತ್ತದೆ. |

| | | | | | | | | | |
|---|---|---|---|---|---|---|---|---|---|
| 20 | ಬೈಂದೂರು ತಾಲ್ಲೂಕಿನ ಬೈಂದೂರು ಗ್ರಾಮದ ಸ.ನ. 296 ರ ನಿವೇಶನದಲ್ಲಿ ಸಾರ್ವಜನಿಕ ಸಮುದಾಯ ಭವನ ನಿರ್ಮಾಣ | ಉಡುಪಿ | 50.00 | – | – | ನಿರ್ಮಿತಿ ಕೇಂದ್ರ, ಉಡುಪಿ | 0.00 | 0.00 | ಅಂದಾಜುಪಟ್ಟಿ ಅನುಮೋದನೆ-ಗೊಂಡಿದ್ದು, ಕಾಮಗಾರಿಯನ್ನು ನಿರ್ಮಿತಿ ಕೇಂದ್ರ, ಉಡುಪಿ ಇವರಿಂದ ಕೈಗೊಳ್ಳಬೇಕಾಗಿರುತ್ತದೆ. |
| 21 | ಬೈಂದೂರು ತಾಲ್ಲೂಕಿನ ಮುದೂರು ಗ್ರಾಮದ ಸ.ನ. 83/4 ರ ನಿವೇಶನದಲ್ಲಿ ಸಾರ್ವಜನಿಕ ಸಮುದಾಯ ಭವನ ನಿರ್ಮಾಣ | ಉಡುಪಿ | 50.00 | – | – | ನಿರ್ಮಿತಿ ಕೇಂದ್ರ, ಉಡುಪಿ | 0.00 | 0.00 | ಅಂದಾಜುಪಟ್ಟಿ ಅನುಮೋದನೆ-ಗೊಂಡಿದ್ದು, ಕಾಮಗಾರಿಯನ್ನು ನಿರ್ಮಿತಿ ಕೇಂದ್ರ, ಉಡುಪಿ ಇವರಿಂದ ಕೈಗೊಳ್ಳಬೇಕಾಗಿರುತ್ತದೆ. |
| 22 | ಬೈಂದೂರು ತಾಲ್ಲೂಕಿನ ಜಡ್ಡಲ್ ಗ್ರಾಮದ ಸ.ನ. 145/91 ರ ನಿವೇಶನದಲ್ಲಿ ಸಾರ್ವಜನಿಕ ಸಮುದಾಯ ಭವನ ನಿರ್ಮಾಣ | ಉಡುಪಿ | 100.00 | – | – | ನಿರ್ಮಿತಿ ಕೇಂದ್ರ, ಉಡುಪಿ | 0.00 | 0.00 | ಅಂದಾಜುಪಟ್ಟಿ ಅನುಮೋದನೆ-ಗೊಂಡಿದ್ದು, ಕಾಮಗಾರಿಯನ್ನು ನಿರ್ಮಿತಿ ಕೇಂದ್ರ, ಉಡುಪಿ ಇವರಿಂದ ಕೈಗೊಳ್ಳಬೇಕಾಗಿರುತ್ತದೆ. |
| | ಒಟ್ಟು-2020-21 | | 3017.80 | | 2443.06 | | 2000.72 | 2000.72 | |
| | ಒಟ್ಟು(2018-19+2019-20+2020-21) | | 16688.30 | | 14615.40 | | 10005.61 | 10005.61 | |

*****

**ಕಳೆದ 3 ವರ್ಷಗಳಲ್ಲಿ ಬೈಂದೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಕೈಗೊಂಡ ಕಾಮಗಾರಿಗಳ ಘೋಶ್ವಾರ ವಿವರ**

| ವರ್ಷ | ಕಾಮಗಾರಿ ಸಂಖ್ಯೆ | ಕಾಮಗಾರಿ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಕಾಮಗಾರಿ ಗುತ್ತಿಗೆ ಮೊತ್ತ (ರೂ. ಲಕ್ಷಗಳಲ್ಲಿ) | ಬಿಡುಗಡೆ ಮಾಡಿದ ಮೊತ್ತ (ರೂ. ಲಕ್ಷಗಳಲ್ಲಿ) | ಖರ್ಚು ಮಾಡಲಾದ ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|---|---|---|
| 2018-19 | 22 | 1914.90 | 1392.65 | 1663.22 | 1663.22 |
| 2019-20 | 45 | 11755.60 | 10779.69 | 6341.67 | 6341.67 |
| 2020-21 | 22 | 3017.80 | 2443.06 | 2000.72 | 2000.72 |
| ಒಟ್ಟು | 89 | 16688.30 | 14615.40 | 10005.61 | 10005.61 |

*****

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 12 |
| ಸದಸ್ಯರ ಹೆಸರು | : ಶ್ರೀ ದೊಡ್ಡನಗೌಡ ಜಿ.ಪಾಟೀಲ್ (ಹುನಗುಂದ) |
| ಉತ್ತರಿಸುವ ದಿನಾಂಕ | : 15.02.2022 |
| ಉತ್ತರಿಸುವ ಸಚಿವರು | : ಜಲಸಂಪನ್ಮೂಲ ಸಚಿವರು |

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | 2001-02ನೇ ಸಾಲಿನಲ್ಲಿ ಆಲಮಟ್ಟಿ ಬಲದಂಡೆ (ಎ.ಆರ್.ಬಿ.ಸಿ. ಕೆನಾಲ್) ಕಾಲುವೆ ಸಂಪೂರ್ಣ ಶಿಥಿಲಗೊಂಡಿದ್ದು, ಪೂರ್ಣ ಪ್ರಮಾಣದಲ್ಲಿ ನೀರು ಹರಿಸಲು ಸಾಧ್ಯವಾಗದೇ ರೈತರ ಹೊಲಗಳಿಗೆ ಸಮರ್ಪಕವಾಗಿ ನೀರು ಪೂರೈಕೆ ಆಗದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-2ರಡಿ ಆಲಮಟ್ಟಿ ಬಲದಂಡೆ ಕಾಲುವೆ ಒಂದು ಉಪ ಯೋಜನೆಯಾಗಿದ್ದು, ಈ ಯೋಜನೆಯಡಿ ಮುಖ್ಯ ಕಾಲುವೆ 67.50 ಕಿ.ಮೀ. ಉದ್ದ ಹಾಗೂ ವಿತರಣಾ ಕಾಲುವೆ ಸಂ.1 ರಿಂದ 24 ನಿರ್ಮಾಣ ಮಾಡಲಾಗಿರುತ್ತದೆ.<br><br>ಸದರಿ ಕಾಲುವೆ ಜಾಲದ ಕಿ.ಮೀ. 0.00 ದಿಂದ 58.00 ರ ವರೆಗಿನ ಮುಖ್ಯ ಕಾಲುವೆ ಹಾಗೂ ವಿತರಣಾ ಕಾಲುವೆ ಸಂ. 1 ರಿಂದ 21 ರ ವರೆಗಿನ ಕಾಲುವೆ ಜಾಲದ ಕೊನೆಯ ಅಂಚಿನವರೆಗೆ ಯಾವುದೇ ಅಡೆತಡೆ ಇಲ್ಲದೇ ಸಮರ್ಪಕವಾಗಿ ನೀರು ಪೂರೈಸಲಾಗುತ್ತಿದೆ. ಕಿ.ಮೀ. 59.00 ರಿಂದ 67.00 ರ ವರೆಗೆ ಕೆಲವು ತಾಂತ್ರಿಕ ಸಮಸ್ಯೆಯಿಂದ ನೀರು ಪೂರೈಕೆಯಾಗಿರುವುದಿಲ್ಲ. ಸದರಿ ಕಾಲುವೆ ರಿಚ್‌ನಲ್ಲಿ ವಾರಬಂದಿ ಪದ್ಧತಿಯನ್ನು ಅಳವಡಿಸಿ ಕಾಲುವೆ ಕೊನೆಯ ಅಂಚಿನ ಭಾಗದವರೆಗೆ ಸಮರ್ಪಕವಾಗಿ ನೀರು ಪೂರೈಸಲು ಸೂಕ್ತ ಕ್ರಮ ಕೈಗೊಳ್ಳಲಾಗುತ್ತಿದೆ. |
| ಆ) | ಬಂದಿದ್ದಲ್ಲಿ. ಆಲಮಟ್ಟಿ ಬಲದಂಡೆ ಕಾಲುವೆ ಮರು ನವೀಕರಣ ಮಾಡಲಾಗುವುದೇ; ಯಾವಾಗ ಮಾಡಲಾಗುವುದು? (ಸಂಪೂರ್ಣ ವಿವರ ನೀಡುವುದು) | ಆಲಮಟ್ಟಿ ಬಲದಂಡೆ ಕಾಲುವೆ ಆಧುನೀಕರಣ ಕುರಿತು Pradhan Mantri Krishi Sinchayee Yojana (PMKSY) – Accelerated Irrigation Benefits Programme (AIBP) ಕೇಂದ್ರ ಸರ್ಕಾರದ ಅನುದಾನದಲ್ಲಿ ಕೈಗೆತ್ತಿಕೊಳ್ಳುವ ಕುರಿತು ಕೇಂದ್ರ ಜಲ ಆಯೋಗ, ಬೆಂಗಳೂರು ತಂಡವು ಸದರಿ ಕಾಲುವೆ ಜಾಲವನ್ನು ಆಗಸ್ಟ್ 2021 ರಲ್ಲಿ ಪರಿವೀಕ್ಷಣೆ ಮಾಡಿರುತ್ತಾರೆ.<br><br>ಪ್ರಸ್ತುತ ಪ್ರಸ್ತಾಪಿತ ಯೋಜನಾ ಕಾಮಗಾರಿಯ ಅಂದಾಜು ಪ್ರಸ್ತಾವನೆ ಕೃಷ್ಣಾ ಭಾಗ್ಯ ಜಲ ನಿಗಮದ ಪರಿಶೀಲನೆ ಹಂತದಲ್ಲಿರುತ್ತದೆ. |

ಸಂಖ್ಯೆ:ಜಸಂಇ 13 ಡಬ್ಲ್ಯೂಬಿಎಂ 2022

**(ಗೋವಿಂದ ಎಂ.ಕಾರಜೋಳ)**

ಜಲ ಸಂಪನ್ಮೂಲ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 120
ಮಾನ್ಯ ಸದಸ್ಯರ ಹೆಸರು : ಶ್ರೀ. ವೇದವ್ಯಾಸ ಕಾಮತ್ ಡಿ. (ಮಂಗಳೂರು ದಕ್ಷಿಣ)
ಉತ್ತರಿಸುವ ಸಚಿವರು : ಮಾನ್ಯ ಗೃಹ ಸಚಿವರು
ಉತ್ತರಿಸುವ ದಿನಾಂಕ : 15-02-20222

<table>
<tr><th>ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಆರ್ಥಿಕ ಇಲಾಖೆಯಿಂದ 2020-21 ಮತ್ತು 2021-2022 ರ ಸಾಲಿನವರೆಗೆ ಯಾವ ಯಾವ ಇಲಾಖೆಗೆ ಅಭಿವೃದ್ಧಿ ಕಾರ್ಯಗಳಿಗೆ ಅನುದಾನ ಬಿಡುಗಡೆ ಮಾಡಲು ಅನುಮತಿಯನ್ನು ನೀಡಲಾಗಿದೆ.</td><td>
<u>ಪೊಲೀಸ್ ಇಲಾಖೆ:</u><br>
2020-21 ಮತ್ತು 2021-22ನೇ ಸಾಲಿನವರೆಗೆ ಅಭಿವೃದ್ಧಿ ಕಾರ್ಯಗಳಿಗೆ ಪೊಲೀಸ್ ಇಲಾಖೆಗೆ ಅನುದಾನ ಬಿಡುಗಡೆ ಮಾಡಿರುವುದಿಲ್ಲ ಮತ್ತು ಅನುಮತಿಯನ್ನು ನೀಡಿರುವುದಿಲ್ಲ.<br>
<u>ಕಾರಾಗೃಹ ಮತ್ತು ಸುಧಾರಣೆ ಸೇವೆ ಇಲಾಖೆ:</u><br>
2020-21ಮತ್ತು 2021-22ರ ಸಾಲಿನಲ್ಲಿ ಆರ್ಥಿಕ ಇಲಾಖೆಯಿಂದ ಕಾರಾಗೃಹ ಮತ್ತು ಸುಧಾರಣಾ ಸೇವಾ ಇಲಾಖೆಯ ವಿವಿಧ ಮುಂದುವರಿದ ಮತ್ತು ನೂತನ ಯೋಜನೆಗಳಿಗೆ ಅನುದಾನ ಬಿಡುಗಡೆ ಮಾಡಲು ಅನುಮತಿ ನೀಡಲಾಗಿರುತ್ತದೆ.<br>
<u>ಅಗ್ನಿಶಾಮಕ ಮತ್ತು ತುರ್ತು ಸೇವೆಗಳು ಇಲಾಖೆ:</u><br>
2020-21ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಅಗ್ನಿಶಾಮಕ ಮತ್ತು ತುರ್ತು ಸೇವೆಗಳ ಇಲಾಖೆಗೆ ಹಂಚಿಕೆಯಾಗಿರುವ ಅನುದಾನ ವಿವರ.
<table>
<tr><th>ಕ್ರ.ಸಂ</th><th>ಲೆಕ್ಕಶೀರ್ಷಿಕೆ</th><th>ಹಂಚಿಕೆಯಾದ ಅನುದಾನ</th><th>ಬಿಡುಗಡೆ ಅನುದಾನ</th></tr>
<tr><td>01</td><td>4059-80-051-0-41-132 ಬಂಡಾವಳ ವೆಚ್ಚಗಳು</td><td>1500.00</td><td>939.12</td></tr>
<tr><td>02</td><td>4059-80-051-0-41-132 ವಿಶೇಷ ಅಭಿವೃದ್ಧಿ ಯೋಜನೆ</td><td>314.00</td><td>314.00</td></tr>
</table>
2021-22ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಅಗ್ನಿಶಾಮಕ ಮತ್ತು ತುರ್ತು ಸೇವೆಗಳ ಇಲಾಖೆಗೆ ಹಂಚಿಕೆಯಾಗಿರುವ ಅನುದಾನ ವಿವರ.
<table>
<tr><th>ಕ್ರ.ಸಂ</th><th>ಲೆಕ್ಕಶೀರ್ಷಿಕೆ</th><th>ಹಂಚಿಕೆಯಾದ ಅನುದಾನ</th><th>ಬಿಡುಗಡೆ ಅನುದಾನ</th></tr>
<tr><td>01</td><td>4059-80-51-0-41-132 ಬಂಡವಾಳ ವೆಚ್ಚಗಳು</td><td>2000.00</td><td>1947.68</td></tr>
<tr><td>02</td><td>4059-80-051-0-41-199 ಸಾರಿಗೆ ಸ್ವತ್ತುಗಳು</td><td>500.00</td><td>500.00</td></tr>
</table>
<u>ಗೃಹರಕ್ಷಕ ಹಾಗೂ ಪೌರರಕ್ಷಣಾ ಇಲಾಖೆ:</u><br>
ಈ ಇಲಾಖೆಯಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳು ಇರುವುದಿಲ್ಲ.<br>
<u>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ:</u><br>
2020-21 ಮತ್ತು 2021-22ರ ಸಾಲಿನವರೆಗೆ ಈ ಇಲಾಖೆನವರೆಗೆ ಅಭಿವೃದ್ಧಿ ಕಾರ್ಯಗಳಿಗೆ ರೂ.450.00 ಲಕ್ಷಗಳ ಅನುದಾನ ಬಿಡುಗಡೆ ಮಾಡಲು ಅನುಮತಿಯನ್ನು ನೀಡಲಾಗಿದೆ.
</td></tr>
</table>

| | | |
|---|---|---|
| | | **ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ:**<br>ಅನ್ವಯಿಸುವುದಿಲ್ಲ.<br>**ರಾಜ್ಯ ಪೊಲೀಸ್ ವಸತಿ ಮತ್ತು ಮೂಲಭೂತ ಸೌಲಭ್ಯ ಅಭಿವೃದ್ಧಿ ನಿಗಮ:**<br>ಕರ್ನಾಟಕ ರಾಜ್ಯ ಪೊಲೀಸ್ ವಸತಿ ಮತ್ತು ಮೂಲಭೂತ ಸೌಲಭ್ಯ ಅಭಿವೃದ್ಧಿ ನಿಗಮವು ರಾಜ್ಯ ಸರ್ಕಾರದ ಒಂದು ಉದ್ದಿಮೆಯಾಗಿದ್ದು, ರಾಜ್ಯ ಒಳಾಡಳಿತ ಇಲಾಖೆಯ ಅಡಳಿತ ನಿಯಂತ್ರಣಗೊಳಪಟ್ಟಿದೆ. ನಿಗಮವು ಪೊಲೀಸ್ ಮತ್ತು ಇತರೆ ಸಂಬಂಧಸಿದ ಇಲಾಖೆಗಳಾದ ಬಂಧಿಖಾನೆ, ಅಗ್ನಿಶಾಮಕ ಮತ್ತು ಇತರೆ ಇಲಾಖೆಗಳಿಗೆ ವಸತಿ ಮತ್ತು ವಸತಿಯೇತರ ಕಟ್ಟಡಗಳನ್ನುನಿರ್ಮಿಸಿ ಬಳಕೆದಾರರ ಇಲಾಖೆಗೆ ಹಸ್ತಾಂತರ ಮಾಡುವುದು ಇದರ ಮುಖ್ಯ ಉದ್ದೇಶವಾಗಿದೆ. |
| **ಆ)** | ಅನುಮತಿ ನೀಡಿದ್ದಲ್ಲಿ, ಯಾವ ಯಾವ ಇಲಾಖೆಗೆ ಎಷ್ಟೆಷ್ಟು ಅನುದಾನವನ್ನು ನೀಡಲಾಗಿದೆ; (ಸಂಪೂರ್ಣ ವಿವರ ನೀಡುವುದು) | **ಪೊಲೀಸ್ ಇಲಾಖೆ:**<br>ಅನ್ವಯಿಸುವುದಿಲ್ಲ.<br>**ಕಾರಾಗೃಹ ಮತ್ತು ಸುಧಾರಣೆ ಸೇವೆ ಇಲಾಖೆ:** |

| ಇಲಾಖೆಯ ಹೆಸರು | 2021-2-21ನೇ ಸಾಲಿನಲ್ಲಿ ಬಿಡುಗಡೆ ಮಾಡಲಾದ ಅನುದಾನ (ರೂ.ಲಕ್ಷಗಳಲ್ಲಿ) | 2021-22ನೇ ಸಾಲಿನಲ್ಲಿ ಬಿಡುಗಡೆ ಮಾಡಲಾದ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|
| ಕಾರಾಗೃಹ ಮತ್ತು ಸುಧಾರಣಾ | 6750.00 | 14000.00 |

**ಅಗ್ನಿಶಾಮಕ ಮತ್ತುತುರ್ತು ಸೇವೆಗಳು ಇಲಾಖೆ:**

2020-21 ನೇ ಸಾಲಿನಲ್ಲಿ ಇಲಾಖೆಗೆ ಹಂಚಿಕೆಯಾಗಿರುವ ಅನುದಾನ ವಿವರ.

| ಕ್ರ.ಸಂ | ಲೆಕ್ಕಶೀರ್ಷಿಕೆ | ಹಂಚಿಕೆಯಾದ ಅನುದಾನ | ಬಿಡುಗಡೆ ಅನುದಾನ |
|---|---|---|---|
| **01** | 4059-80-051-0-41-132 ಬಂಡವಾಳ ವೆಚ್ಚಗಳು | 1500.00 | 939.12 |
| **02** | 4059-80-051-0-41-132 ವಿಶೇಷ ಅಭಿವೃದ್ಧಿ ಯೋಜನೆ | 314.00 | 314.00 |

2021-22 ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಅಗ್ನಿಶಾಮಕ ಮತ್ತು ತುರ್ತು ಸೇವೆಗಳ ಇಲಾಖೆಗೆ ಹಂಚಿಕೆಯಾಗಿರುವ ಅನುದಾನ ವಿವರ.

| ಕ್ರ.ಸಂ | ಲೆಕ್ಕಶೀರ್ಷಿಕೆ | ಹಂಚಿಕೆಯಾದ ಅನುದಾನ | ಬಿಡುಗಡೆ ಅನುದಾನ |
|---|---|---|---|
| 01 | 4059-80-051-0-41-132ಬಂಡವಾಳ ವೆಚ್ಚಗಳು | 2000.00 | 1947.68 |
| 02 | 4059-80-051-0-41-199 ಸಾರಿಗೆ ಸ್ವತ್ತುಗಳು | 500.00 | 500.00 |

| | | |
|---|---|---|
| | | **<u>ಗೃಹರಕ್ಷಕ ಹಾಗೂ ಪೌರರಕ್ಷಣಾ ಇಲಾಖೆ:</u>**<br>ಅನ್ವಯಿಸುವುದಿಲ್ಲ.<br>**<u>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ:</u>**<br>ಇಲಾಖೆಗೆ ರೂ.450.00 ಲಕ್ಷಗಳ ಅನುದಾನ ನೀಡಲಾಗಿದೆ. ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ.<br>**<u>ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ:</u>**<br>ಅನ್ವಯಿಸುವುದಿಲ್ಲ<br>**<u>ರಾಜ್ಯ ಪೊಲೀಸ್ ವಸತಿ ಮತ್ತು ಮೂಲಭೂತ ಸೌಲಭ್ಯ ಅಭಿವೃದ್ಧಿ ನಿಗಮ:</u>**<br>ಕರ್ನಾಟಕ ರಾಜ್ಯ ಪೊಲೀಸ್ ವಸತಿ ಮತ್ತು ಮೂಲಭೂತ ಸೌಲಭ್ಯ ಅಭಿವೃದ್ಧಿ ನಿಗಮವು ರಾಜ್ಯ ಸರ್ಕಾರದ ಒಂದು ಉದ್ದಿಮೆಯಾಗಿದ್ದು, ರಾಜ್ಯ ಒಳಾಡಳಿತ ಇಲಾಖೆಯ ಅಡಳಿತ ನಿಯಂತ್ರಣಗೊಳಪಟ್ಟಿದೆ. ನಿಗಮವು ಪೊಲೀಸ್ ಮತ್ತು ಇತರೆ ಸಂಬಂಧಸಿದ ಇಲಾಖೆಗಳಾದ ಬಂಧಿಖಾನೆ, ಅಗ್ನಿಶಾಮಕ ಮತ್ತು ಇತರೆ ಇಲಾಖೆಗಳಿಗೆ ವಸತಿ ಮತ್ತು ವಸತಿಯೇತರ ಕಟ್ಟಡಗಳನ್ನುನಿರ್ಮಿಸಿ ಬಳಕೆದಾರರ ಇಲಾಖೆಗೆ ಹಸ್ತಾಂತರ ಮಾಡುವುದು ಇದರ ಮುಖ್ಯ ಉದ್ದೇಶವಾಗಿದೆ. |
| **ಇ)** | 2020-21 ಮತ್ತು 2021-22ನೇ ಸಾಲಿನವರೆಗೆ ದಕ್ಷಿಣ ಕನ್ನಡ ಜಿಲ್ಲೆಗೆ ಅಭಿವೃದ್ಧಿ ಕಾರ್ಯಗಳಿಗೆ ಆರ್ಥಿಕ ಇಲಾಖೆಯಿಂದ ನೀಡಲಾದ ಅನುದಾನ ಎಷ್ಟು; | **<u>ಪೊಲೀಸ್ ಇಲಾಖೆ:</u>**<br>2020-21 ಮತ್ತು 2021-22ನೇ ಸಾಲಿನವರೆಗೆ ದಕ್ಷಿಣ ಕನ್ನಡ ಜಿಲ್ಲೆಯ ಅಭಿವೃದ್ಧಿ ಕಾರ್ಯಗಳಿಗೆ ಅನುದಾನ ನೀಡಿರುವುದಿಲ್ಲ.<br>**<u>ಕಾರಾಗೃಹ ಮತ್ತು ಸುಧಾರಣೆ ಸೇವೆ ಇಲಾಖೆ:</u>**<br>2021-22ನೇ ಸಾಲಿನಲ್ಲಿ ಮಂಗಳೂರು ನೂತನ ಕೇಂದ್ರ ಕಾರಾಗೃಹ ನಿರ್ಮಾಣ ಕಾಮಗಾರಿಯ ಮುಂದುವರಿಕೆಗಾಗಿ ಆರ್ಥಿಕ ಇಲಾಖೆಯಿಂದ ರೂ.2000.00 ಲಕ್ಷಗಳ ಅನುದಾನವನ್ನು ಬಿಡುಗಡೆಗೊಳಿಸಲಾಗಿರುತ್ತದೆ.<br>**<u>ಅಗ್ನಿಶಾಮಕ ಮತ್ತುತುರ್ತು ಸೇವೆಗಳು ಇಲಾಖೆ:</u>**.<br>2020-21ಮತ್ತು 2021-22ನೇ ಸಾಲಿನವರೆಗೆ ದಕ್ಷಿಣ ಕನ್ನಡ ಜಿಲ್ಲೆಗೆ ಅಭಿವೃದ್ಧಿ ಕಾರ್ಯಗಳಿಗೆ ಆರ್ಥಿಕ ಇಲಾಖೆಯಿಂದ ಕರ್ನಾಟಕ ರಾಜ್ಯ ಅಗ್ನಿಶಾಮಕ ಮತ್ತು ತುರ್ತು ಸೇವೆಗಳ ಇಲಾಖೆಗೆ ಯಾವುದೇ ಅನುದಾನ ನೀಡಿರುವುದಿಲ್ಲ<br>**<u>ಗೃಹರಕ್ಷಕ ಹಾಗೂ ಪೌರರಕ್ಷಣಾ ಇಲಾಖೆ:</u>**<br>ಅನ್ವಯಿಸುವುದಿಲ್ಲ.<br>**<u>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ:</u>**<br>2020-21ನೇ ಮತ್ತು 2021-22ನೇ ಸಾಲಿನವರೆಗೆ ಈ ಇಲಾಖೆಯ ದಕ್ಷಿಣ ಕನ್ನಡ ಜಿಲ್ಲೆಗೆ ಅಭಿವೃದ್ಧಿ ಕಾರ್ಯಗಳಿಗೆ ಆರ್ಥಿಕ ಇಲಾಖೆಯಿಂದ ರೂ.5.75 ಲಕ್ಷಗಳ ಅನುದಾನವನ್ನು ಹಂಚಿಕೆ ಮಾಡಲಾಗಿದೆ<br>**<u>ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ:</u>**<br>ಅನ್ವಯಿಸುವುದಿಲ್ಲ.<br>**<u>ರಾಜ್ಯ ಪೊಲೀಸ್ ವಸತಿ ಮತ್ತು ಮೂಲಭೂತ ಸೌಲಭ್ಯ ಅಭಿವೃದ್ಧಿ ನಿಗಮ:</u>**<br>ರಾಜ್ಯ ಸರ್ಕಾರವು,ನಿಗಮಕ್ಕೆ 2020-21 ಮತ್ತು 2021-22ರ ಸಾಲಿನಲ್ಲಿ ನಿಗಮಕ್ಕೆ ಅಭಿವೃದ್ಧಿ ಕಾರ್ಯಗಳಿಗೆ ತಾಲ್ಲೂಕುವಾರು ಹಾಗೂ ವಿಧಾನಸಭಾ ಕ್ಷೇತ್ರವಾರು ಪ್ರತ್ಯೇಕವಾಗಿ ಯಾವುದೇ ಅನುದಾನವನ್ನು ಮೀಸಲಿಟ್ಟಿರುವುದಿಲ್ಲ ಹಾಗೂ ಬಿಡುಗಡೆಗೊಳಿಸಿರುವುದಿಲ್ಲ.<br>ರಾಜ್ಯ ಸರ್ಕಾರವು, ನಿಗಮಕ್ಕೆ ಯೋಜನಾವಾರು ವಿವಿಧ ಲೆಕ್ಕಶೀರ್ಷಿಕೆಯಡಿಯಲ್ಲಿ ವಿವಿಧ ಕಾಮಗಾರಿಗಳಿಗೆ ಮಂಜೂರು ಮಾಡಿದ ಅನುದಾನದಲ್ಲಿ, ಬಿಡುಗಡೆಗೊಳಿಸಿದ ಅನುದಾನದ ವಿವರಗಳನ್ನು **ಅನುಬಂಧ-01ರಲ್ಲಿ** ನೀಡಲಾಗಿದೆ. |

| | | |
|---|---|---|
| **ಈ)** | ಅನುದಾನಕ್ಕೆ ಅನುಮತಿ ನೀಡಲಾಗಿದ್ದಲ್ಲಿ, ದಕ್ಷಿಣ ಕನ್ನಡ ಜಿಲ್ಲೆಯ ತಾಲ್ಲೂಕು, ವಿಧಾನಸಭಾ ಕ್ಷೇತ್ರವಾರು ಆರ್ಥಿಕ ಇಲಾಖೆಯಿಂದ ಎಷ್ಟು ಅನುದಾನವನ್ನು ಹಂಚಿಕೆ ಮಾಡಲಾಗಿದೆ? (ಸಂಪೂರ್ಣ ವಿವರ ನೀಡುವುದು) | **ಪೊಲೀಸ್ ಇಲಾಖೆ:**<br>ಅನ್ವಯಿಸುವುದಿಲ್ಲ.<br>**ಕಾರಾಗೃಹ ಮತ್ತು ಸುಧಾರಣೆ ಸೇವೆ ಇಲಾಖೆ:**<br>ದಕ್ಷಿಣ ಕನ್ನಡ ಜಿಲ್ಲೆ, ಭಂಟ್ವಾಳ ತಾಲ್ಲೂಕಿನಲ್ಲಿ ಮಂಗಳೂರು ನೂತನ ಕೇಂದ್ರ ಕಾರಾಗೃಹ ನಿರ್ಮಾಣದ ಮುಂದುವರಿದ ಕಾಮಗಾರಿಗೆ ಆರ್ಥಿಕ ಇಲಾಖೆಯು ರೂ.2000.00 ಲಕ್ಷಗಳ ಅನುದಾನವನ್ನು ಹಂಚಿಕೆ ಮಾಡಲಾಗಿರುತ್ತದೆ.<br>**ಅಗ್ನಿಶಾಮಕ ಮತ್ತು ತುರ್ತು ಸೇವೆಗಳು ಇಲಾಖೆ:**<br>ಅನ್ವಯಿಸುವುದಿಲ್ಲ.<br>**ಗೃಹರಕ್ಷಕ ಹಾಗೂ ಪೌರರಕ್ಷಣಾ ಇಲಾಖೆ:**<br>ಅನ್ವಯಿಸುವುದಿಲ್ಲ.<br>**ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ:**<br>ಇಲಾಖೆಯ ದಕ್ಷಿಣ ಕನ್ನಡ ಜಿಲ್ಲೆಗೆ ಆರ್ಥಿಕ ಇಲಾಖೆಯಿಂದ ರೂ.5.75 ಲಕ್ಷಗಳ ಅನುದಾನವನ್ನು ಹಂಚಿಕೆ ಮಾಡಲಾಗಿದೆ.<br>**ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ:**<br>ಅನ್ವಯಿಸುವುದಿಲ್ಲ.<br>**ರಾಜ್ಯ ಪೊಲೀಸ್ ವಸತಿ ಮತ್ತು ಮೂಲಭೂತ ಸೌಲಭ್ಯ ಅಭಿವೃದ್ಧಿ ನಿಗಮ:**<br>ರಾಜ್ಯ ಸರ್ಕಾರವು, ನಿಗಮಕ್ಕೆ ಅಭಿವೃದ್ಧಿ ಕಾರ್ಯಗಳಿಗೆ ದಕ್ಷಿಣ ಕನ್ನಡ ಜಿಲ್ಲೆಯ ತಾಲ್ಲೂಕು, ವಿಧಾನಸಭಾ ಕ್ಷೇತ್ರವಾರು ಪ್ರತ್ಯೇಕವಾಗಿ ಯಾವುದೇ ಅನುದಾನವನ್ನು ಹಂಚಿಕೆ ಮಾಡಿರುವುದಿಲ್ಲ.<br>ಸರ್ಕಾರದಿಂದ ಅನುಮೋದನೆಗೊಂಡು ಯೋಜನಾವಾರು ವಿವಿಧ ಲೆಕ್ಕಶೀರ್ಷಿಕೆಯಡಿಯಲ್ಲಿ ವಿವಿಧ ಕಾಮಗಾರಿಗಳಿಗೆ ಬಿಡುಗಡೆ ಮಾಡಿದ ಅನುದಾನದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಂದಾಜು ವೆಚ್ಚ ರೂ.1540.96 ಲಕ್ಷಗಳ ಕಾಮಗಾರಿಗಳನ್ನು ನಿಗಮದ ವತಿಯಿಂದ ಕೈಗೆತ್ತಿಕೊಳ್ಳಲಾಗಿದೆ |

**ಹೆಚ್ ಡಿ/15/ಎಸ್ಎಎಸ್ಎಚ್/2021**

**[ಆರಗ ಜ್ಞಾನೇಂದ್ರ]**
ಗೃಹ ಸಚಿವರು

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ : **121**
2. ಸದಸ್ಯರ ಹೆಸರು : ಶ್ರೀ ರೇವಣ್ಣ ಹೆಚ್.ಡಿ (ಹೊಳೇನರಸೀಪುರ ವಿಧಾನಸಭಾ ಕ್ಷೇತ್ರ)
3. ಉತ್ತರಿಸುವ ದಿನಾಂಕ : **15/02/2022**
4. ಉತ್ತರಿಸುವ ಸಚಿವರ ಹೆಸರು : ಮುಖ್ಯ ಮಂತ್ರಿಗಳು.

| ಪ್ರಶ್ನೆ | ಉತ್ತರ |
|---|---|
| ಅ) ಹೊಳೇನರಸೀಪುರ ಮತಕ್ಷೇತ್ರ ವ್ಯಾಪ್ತಿಯ ಹೊಳೇನರಸೀಪುರ ತಾಲ್ಲೂಕು, ಹಳೇಕೋಟೆ ಹೋಬಳಿ, ಹರದನಹಳ್ಳಿ ಗ್ರಾಮದಲ್ಲಿ ಹಿಂದುಳಿದ ವರ್ಗಗಳ ಇಲಾಖೆವತಿಯಿಂದ ಸಮುದಾಯ ಭವನ ಕಟ್ಟಡ ನಿರ್ಮಾಣ ಮಾಡಲು ರೂ.100.00ಲಕ್ಷಗಳ ಅನುದಾನ ಬಿಡುಗಡೆಯಾಗಿದ್ದು, ಅದರಲ್ಲಿ ರೂ.25.00 ಲಕ್ಷಗಳ ಅನುದಾನದ ಬಿಲ್ಲನ್ನು ಹಾಸನ ಜಿಲ್ಲೆಯ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಹಾಸನ ಜಿಲ್ಲಾ ಖಜಾನೆಗೆ ನೀಡಿದ್ದು, ಸದರಿಯವರು ದಿ:14/11/2019ರಂದು ಖಜಾನೆ-2 ತಂತ್ರಾಂಶದ (ಕೆ-2) ಮೂಲಕ ತೀರ್ಣಗೊಳಿಸಲಾಗಿರುತ್ತದೆ ಮತ್ತು ಈ ಬಿಲ್ಲಿನ ಬಾಬ್ತು ರೂ.25.00 ಲಕ್ಷ, UTR No.RBI3201981876926 ಆಗಿರುವುದು ನಿಜವೇ; (ಸಂಪೂರ್ಣ ಮಾಹಿತಿ ನೀಡುವುದು). | ಹೌದು.<br>ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಹರದನಗಳ್ಳಿ ಗ್ರಾಮ, ಹೊಳೇನರಸೀಪುರ ತಾಲ್ಲೂಕಿನಲ್ಲಿ ಸಮುದಾಯ ಭವನ ಕಟ್ಟಡ ನಿರ್ಮಾಣ ಮಾಡಲು ಕಟ್ಟಲು ರೂ.25 ಲಕ್ಷಗಳ ಅನುದಾನ ಬಿಡುಗಡೆಯಾಗಿದೆ. ಸದರಿ ಬಿಲ್ಲಿನ UTR No.**RBI 3201981876926** ಆಗಿದ್ದು, ಡಿ.ಡಿ.ಓ ರವರು ದಿ:**05/11/2019** ರಂದು ಬಿಲ್ಲನ್ನು ತಯಾರಿಸಿರುತ್ತಾರೆ. ಸದರಿ ಬಿಲ್ಲು ದಿ:**12/11/2019** ರಂದು ಜಿಲ್ಲಾ ಖಜಾನೆಯಲ್ಲಿ ಸ್ವೀಕೃತವಾಗಿದೆ ಹಾಗೂ ಜಿಲ್ಲಾ ಖಜಾನೆಯು ದಿ:**16/11/2019** ರಂದೇ ಪಾವತಿ ಪ್ರಾಧಿಕರಿಸಿದೆ.<br><br>ಮುಂದುವರೆದು, ಈ ಬಿಲ್ಲಿನ ಪಾವತಿಯು ವಿಫಲವಾಗಿ ದಿ:18/11/2019ರಂದು ವಾಪಸ್ಸಾಗಿದೆ. ಹೀಗಾಗಿ ದಿನಾಂಕ: 01/12/2020ರಂದು ಪಾವತಿಯು ವ್ಯಪಗತವಾಗಿದೆ (lapse). |
| ಆ) ಈ ಬಿಲ್ಲಿನ ಬಾಬ್ತು ರೂ.25.00 ಲಕ್ಷ FAILED E PAYMENT ಆಗಿ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಹಾಸನ ರವರ ಲಾಗಿನ್‌ನಲ್ಲಿ ಒಂದು ವರ್ಷಕ್ಕೂ ಮೇಲ್ಪಟ್ಟು ಉಳಿದಿದ್ದು, ಈ ಬಿಲ್ಲಿಗೆ ಸಂಬಂಧಿಸಿದಂತೆ ಬಟವಾಡೆ ಅಧಿಕಾರಿಗಳು ದಿ:08/06/2021ರ ಪತ್ರದಲ್ಲಿ ಸದರಿ ಮೊತ್ತವನ್ನು DDO Code-172970ಗೆ ಮರು ಬಿಡುಗಡೆ ಮಾಡಿಸಿಕೊಡಲು ALTERATION MEMORANDUM ಕಳುಹಿಸಿ ಕೊಡುವಂತೆ ಪತ್ರ ಕಳುಹಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಸಂಪೂರ್ಣ ಮಾಹಿತಿ ನೀಡುವುದು) | ಈ ಬಿಲ್ಲಿನ ಬಾಬ್ತು ರೂ.25.00 ಲಕ್ಷ FAILED PAYMENT ಆಗಿ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಹಾಸನ ಇವರ ಲಾಗಿನ್‌ನಲ್ಲಿ ಒಂದು ವರ್ಷಕ್ಕೂ ಮೇಲ್ಪಟ್ಟಿದ್ದು, ವ್ಯಪಗತವಾದ ನಂತರ ಈ ಬಿಲ್ಲಿಗೆ ಸಂಬಂಧಿಸಿದಂತೆ ಬಟವಾಡೆ ಅಧಿಕಾರಿಗಳು ದಿ:08/06/2021ರ ಪತ್ರದಲ್ಲಿ ಸದರಿ ಮೊತ್ತವನ್ನು ಡಿಡಿಓ ಕೋಡ್-172970ಗೆ ಮರು ಬಿಡುಗಡೆ ಮಾಡಿಸಿಕೊಡಲು ಜಿಲ್ಲಾ ಖಜಾನೆ, ಹಾಸನ ಇವರನ್ನು ಕೋರಿದ್ದಾರೆ. |

...2.

| | |
|---|---|
| ಇ) ಉಪನಿರ್ದೇಶಕರು, ಜಿಲ್ಲಾ ಖಜಾನೆ, ಹಾಸನ ರವರು ದಿ:17/06/2021ರಲ್ಲಿ ಹೆಚ್ಚುವರಿ ನಿರ್ದೇಶಕರು, ಟಿ.ಎನ್.ಎಂ.ಸಿ., ಖನಿಜ ಭವನ, ಬೆಂಗಳೂರು ರವರಿಗೆ ಪ್ರಸ್ತಾವನೆ ಸಲ್ಲಿಸಿದ್ದು, ಪ್ರಸ್ತಾವನೆಯನ್ನು ಸಲ್ಲಿಸಿ 03 ತಿಂಗಳು ಕಳೆದಿದ್ದು, ರೂ.25.00ಲಕ್ಷ FAILED E PAYMENT ಆಗಿ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಹಾಸನ ರವರ ಲಾಗಿನ್‌ನಲ್ಲಿ ಎರಡೂವರೆ ವರ್ಷಕ್ಕೂ ಮೇಲ್ಪಟ್ಟು ಉಳಿದಿದ್ದರೂ ಸಹ ಇಲಾಖೆಯವರು ಮಾಡಿರುವ ತಪ್ಪಿನಿಂದಾಗಿ ಪಾವತಿಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ ಈ ತಪ್ಪಿಗೆ ಕಾರಣರಾದ ಅಧಿಕಾರಿಗಳ ವಿರುದ್ಧ ನಿಯಮಾನುಸಾರ ಕ್ರಮ ಜರುಗಿಸಿ, ಕೂಡಲೇ ರೂ.25.00 ಲಕ್ಷಗಳ ಹಣವನ್ನು ಪಾವತಿಸಲು ಸರ್ಕಾರ ಮುಂದಾಗುವುದೇ? (ಸಂಪೂರ್ಣ ಮಾಹಿತಿ ನೀಡುವುದು) | ಲೆಕ್ಕ ಬದಲಾವಣೆ ಜ್ಞಾಪನ (Alteration Memorandum) ಮಹಾಲೇಖಪಾಲರ ಕಚೇರಿಯಲ್ಲಿ ಅನುಮೋದಿತವಾಗಬೇಕಾಗಿದ್ದು, ಜಿಲ್ಲಾ ಖಜಾನೆ, ಹಾಸನ ಇವರು ದಿನಾಂಕ:17/08/2021ರಂದು ವಿಫಲ ಇ-ಪಾವತಿಗೆ ಲೆಕ್ಕ ಬದಲಾವಣೆ ಮಾಡಿಕೊಡುವ ಬಗ್ಗೆ Alteration Memorandum ನ್ನು ಮಹಾಲೇಖಪಾಲರ ಕಚೇರಿಗೆ ಕಳುಹಿಸಿರುತ್ತಾರೆ.<br><br>ಮಹಾಲೇಖಪಾಲರಿಂದ ಸದರಿ ಲೆಕ್ಕ ಬದಲಾವಣೆ ಜ್ಞಾಪನವು ಸಂಖ್ಯೆ: SBR/R-8/2021-22/2383, ದಿನಾಂಕ:06/12/2021ರಲ್ಲಿ ಅನುಮೋದಿತವಾಗಿರುತ್ತದೆ.<br><br>Failed payment ಆದ ರೂ.25 ಲಕ್ಷಗಳನ್ನು ಲೆ.ಶೀ.2225-03-001-0-05 ಆಬ್ಜೆಕ್ಟ್ ಕೋಡ್ 103 (ರಾಜ್ಯ), ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣ ಅಧಿಕಾರಿಯವರ ಡಿ.ಡಿ.ಓ ಕೋಡ್ 172970 ಗೆ ಮರುಬಿಡುಗಡೆ ಮಾಡುವ ಸಂಬಂಧ ಈಗಾಗಲೇ ಮಹಾಲೇಖಪಾಲರಿಂದ Alteration memorandum ನೀಡಿರುವುದರಿಂದ ಪ್ರಸಕ್ತ ಸಾಲಿನಲ್ಲಿ ವಿವಿಧ ಸಮುದಾಯಗಳ ಅಭಿವೃದ್ಧಿ ಕಾರ್ಯಕ್ರಮದಡಿ ಒದಗಿಸಿರುವ ಅನುದಾನದಿಂದ ಬಿಡುಗಡೆಮಾಡುವ ಬಗ್ಗೆ ಇಲಾಖಾ ಕಾರ್ಯದರ್ಶಿಗಳಿಗೆ ಇರುವ ಅಧಿಕಾರ ಪ್ರತ್ಯಯೋಜನೆಯಂತೆ ಅಗತ್ಯ ಕ್ರಮವಹಿಸಲು ಹಿಂದುಳಿದ ವರ್ಗಗಳ ಇಲಾಖೆಗೆ ತಿಳಿಸಲಾಗಿದೆ. |
| ಈ) ರೂ.100.00 ಲಕ್ಷಗಳಲ್ಲಿ ಉಳಿಕೆ ರೂ.75.00ಲಕ್ಷಗಳ ಅನುದಾನವನ್ನು ಯಾವ ಕಾಲ ಮಿತಿಯಲ್ಲಿ ಬಿಡುಗಡೆಗೊಳಿಸಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು) | ರಾಜ್ಯದ ಒಟ್ಟಾರೆ ಬೇಡಿಕೆ ಹಾಗೂ ಅನುದಾನದ ಲಭ್ಯತೆಯನ್ನು ಆಧರಿಸಿ ಉಳಿಕೆ ಅನುದಾನವನ್ನು ಬಿಡುಗಡೆ ಮಾಡಲು ಕ್ರಮ ವಹಿಸಲಾಗುವುದು. |

**ಸಂಖ್ಯೆ: ಆಇ 09 ಆಖಇ 2022.**

**(ಬಸವರಾಜ ಬೊಮ್ಮಾಯಿ)**
**ಮುಖ್ಯಮಂತ್ರಿ**

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 122
2. ಸದಸ್ಯರ ಹೆಸರು : ಶ್ರೀ ರೇವಣ್ಣ ಹೆಚ್.ಡಿ.
3. ಉತ್ತರಿಸಬೇಕಾದ ದಿನಾಂಕ : 15.02.2022

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಗೊರೂರು ಹೇಮಾವತಿ ಜಲಾಶಯ ಯೋಜನೆಯಡಿಯಲ್ಲಿ 2018-19 ನೇ ಸಾಲಿನಲ್ಲಿ ಅನುಮೋದನೆಗೊಂಡಿರುವ ಹಾಸನ ಜಿಲ್ಲೆಯ ಹೊಳೆನರಸೀಪುರ ವಿಧಾನಸಭಾ ಕ್ಷೇತ್ರ, ಸಕಲೇಶಪುರ ವಿಧಾನಸಭಾ ಕ್ಷೇತ್ರ ಮತ್ತು ಅರಕಲಗೂಡು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ನೀರಾವರಿ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಈಗಾಗಲೇ ಟೆಂಡರ್ ಪ್ರಕ್ರಿಯೆ ನಡೆದಿದ್ದು, ಹಲವು ಕಾಮಗಾರಿಗಳ ತಾಂತ್ರಿಕ ಬಿಡ್ ಹಾಗೂ ಆರ್ಥಿಕ ಬಿಡ್‌ಗಳು ಅನುಮೋದನೆಗಾಗಿ ವಿವಿಧ ಹಂತದಲ್ಲಿದ್ದು, ಸದರಿ ಕಾಮಗಾರಿಗಳ ಟೆಂಡರ್ ಪ್ರಕ್ರಿಯೆಗಳನ್ನು ತಡೆಹಿಡಿದಿರುವುದು ನಿಜವೇ (ಸಂಪೂರ್ಣ ಮಾಹಿತಿ ನೀಡುವುದು) | ಹೇಮಾವತಿ ಯೋಜನಾ ವಲಯ, ಗೊರೂರು ವ್ಯಾಪ್ತಿಯಡಿಯಲ್ಲಿ 2018-19ನೇ ಸಾಲಿನಲ್ಲಿ ಅನುಮೋದನೆಗೊಂಡ ಕಾಮಗಾರಿಗಳ ಪೈಕಿ ಹೊಳೆನರಸೀಪುರ ಕ್ಷೇತ್ರ, ಅರಕಲಗೂಡು ಕ್ಷೇತ್ರ ಹಾಗೂ ಆಲೂರು ಸಕಲೇಶಪುರ ಕ್ಷೇತ್ರಗಳಿಗೆ ಸಂಬಂಧಿಸಿದಂತೆ 70ನೇ ಮಂಡಳಿ ಸಭೆಯ ನಿರ್ಣಯ ಹಾಗೂ ನಂತರದ ದಿನಗಳಲ್ಲಿ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆಯಾಗಿರುವ ಕಾಮಗಾರಿಗಳು (Grounded works) ಮತ್ತು ಅನುದಾನದ ಕೊರತೆಯಿಂದ ತಡೆಹಿಡಿದಿರುವ ಕಾಮಗಾರಿಗಳ (Non Grounded works) ವಿವರಗಳು ಈ ಕೆಳಕಂಡಂತಿವೆ. (see table below) |
| ಆ) | ಸದರಿ ಕಾಮಗಾರಿಗಳ ಟೆಂಡರ್ ಪ್ರಕ್ರಿಯೆಗಳನ್ನು ತಡೆಹಿಡಿದಿರುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರಿಗೆ | ಹೌದು |

| ಕ್ರ ಸಂ | ವಿಧಾನ ಸಭಾ ಕ್ಷೇತ್ರ | 2018-19ನೇ ಸಾಲಿನ ಕಾರ್ಯಕ್ರಮಪಟ್ಟಿಯಂತೆ ಅನುಮೋದನೆಗೊಂಡ ಕಾಮಗಾರಿಗಳು | | 70ನೇ ಮಂಡಳಿ ಸಭೆಯ ನಿರ್ಣಯ ಮತ್ತು ನಂತರ ದಿನಗಳಲ್ಲಿ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆಗೊಂಡ ಕಾಮಗಾರಿಗಳು (Grounded works) | | ಅನುದಾನದ ಕೊರತೆಯಿಂದ ತಡೆಯಿಡಿಯಲಾಗಿರುವ ಕಾಮಗಾರಿಗಳು (Non Grounded works) | |
|---|---|---|---|---|---|---|---|
| | | ಸಂಖ್ಯೆ | ಮೊತ್ತ (ರೂ. ಕೋಟಿಗಳಲ್ಲಿ) | ಸಂಖ್ಯೆ | ಮೊತ್ತ (ರೂ. ಕೋಟಿಗಳಲ್ಲಿ) | ಸಂಖ್ಯೆ | ಮೊತ್ತ (ರೂ. ಕೋಟಿಗಳಲ್ಲಿ) |
| **1** | **2** | **3** | **4** | **5** | **6** | **7** | **8** |
| 1 | ಹೊಳೆನರಸೀಪುರ | 1911 | 1927.15 | 1242 | 1515.70 | 669 | 411.45 |
| 2 | ಅರಕಲಗೂಡು | 1136 | 842.73 | 461 | 532.27 | 675 | 310.46 |
| 3 | ಆಲೂರು-ಸಕಲೇಶಪುರ | 596 | 264.10 | 383 | 122.76 | 213 | 141.34 |
| | ಒಟ್ಟು | **3643** | **3033.98** | **2086** | **2170.73** | **1557** | **863.25** |

| | | |
|---|---|---|
| | ಅರಕಲಗೂಡು, ಹೊಳೆನರಸೀಪುರ ಮತ್ತು ಸಕಲೇಶಪುರ ವಿಧಾನಸಭಾ ಕ್ಷೇತ್ರದ ಶಾಸಕರುಗಳು ದಿನಾಂಕ: 06.03.2020 ರಲ್ಲಿ ಮನವಿ ನೀಡಿದ್ದು, ಸದರಿ ಮನವಿ ಪತ್ರದಲ್ಲಿ ಮಾನ್ಯ ಮುಖ್ಯಮಂತ್ರಿಯವರ ಕಛೇರಿ ಕಡತ ಸಂ: ಇ.ಸಿ.ಎಂ 1230358/2020 ದಿ: 06.03.2020 ರಲ್ಲಿ ಕೂಡಲೇ ಸೂಕ್ತ ಕ್ರಮ ಕೈಗೊಳ್ಳಲು ಕಡತ ಮಂಡಿಸಿ" ಎಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರು, ಜಲಸಂಪನ್ಮೂಲ ಇಲಾಖೆ ರವರಿಗೆ ನಿರ್ದೇಶನ ನೀಡಿರುವುದು ನಿಜವೇ? | |
| ಇ) | ತಡೆಹಿಡಿದಿರುವ ಕಾಮಗಾರಿಗಳ ಬಗ್ಗೆ ಕಾವೇರಿ ನೀರಾವರಿ ನಿಗಮದಿಂದ ಮಾನ್ಯ ಜಲಸಂಪನ್ಮೂಲ ಸಚಿವರಿಗೆ ಕಡತ ಮಂಡಿಸಿದ್ದು, ಮಾನ್ಯ ಜಲಸಂಪನ್ಮೂಲ ಸಚಿವರು ಆರ್ಥಿಕ ಇಲಾಖೆಗೆ ದಿ: 04.05.2020 ರ ಸುತ್ತೋಲೆಯಂತೆ ಕ್ರಮವಹಿಸಲು ಸೂಚಿಸಿರುವ ಹಿನ್ನೆಲೆಯಲ್ಲಿ ಸರ್ಕಾರದ ಜಲಸಂಪನ್ಮೂಲ ಕಾರ್ಯದರ್ಶಿಯವರ ಮುಖೇನ ಆರ್ಥಿಕ ಅನುಮೋದನೆಗಾಗಿ ಆರ್ಥಿಕ ಇಲಾಖೆಗೆ ಕಡತವನ್ನು ಕಳುಹಿಸಿದ್ದು, ಸದರಿ ಕಡತವು ಇನ್ನೂ ಬಾಕಿ ಇರುವುದು ನಿಜವೇ? | ಹೌದು. ಸದರಿ ಪ್ರಸ್ತಾವನೆಯು ಪರಿಶೀಲನೆಯಲ್ಲಿದೆ. |
| ಈ) | ಹಾಗಿದ್ದಲ್ಲಿ, ಈ ಕಡತದ ಪ್ರಸ್ತಾವನೆಗೆ ಅನುಮತಿ ನೀಡಿ ತಡೆಹಿಡಿದಿರುವ ಟೆಂಡರ್ ನೋಟಿಫಿಕೇಷನ್‌ಗಳಲ್ಲಿನ ಕಾಮಗಾರಿಗಳನ್ನು ಯಾವ ಕಾಲಮಿತಿಯಲ್ಲಿ ಕೈಗೆತ್ತಿಕೊಳ್ಳಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು) | ಮುಂಬರುವ ಆರ್ಥಿಕ ವರ್ಷಗಳಲ್ಲಿ ಅನುದಾನದ ಲಭ್ಯತೆಯ ಅನುಸಾರ ಹಾಗೂ ಆರ್ಥಿಕ ಇಲಾಖೆಯು ನೀಡುವ ಸೂಚನೆಗಳನ್ವಯ ಸದರಿ ಕಾಮಗಾರಿಗಳನ್ನು ಕೈಗೊಳ್ಳುವ ಬಗ್ಗೆ ಪರಿಶೀಲಿಸಲಾಗುವುದು. |

*ಸಂಖ್ಯೆ:ಜಸಂಇ 01 ಎನ್‌ಎಲ್‌ಎ 2022*

(ಗೋವಿಂದ ಎಂ. ಕಾರಜೋಳ)
ಜಲಸಂಪನ್ಮೂಲ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 123
ಸದಸ್ಯರ ಹೆಸರು : ಶ್ರೀ ರೇವಣ್ಣ ಹೆಚ್.ಡಿ (ಹೊಳೇನರಸೀಪುರ)
ಉತ್ತರಿಸಬೇಕಾದ ದಿನಾಂಕ : 15.02.2022
ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | 2019ನೇ ಆಗಸ್ಟ್ ಮಾಹೆಯಿಂದ 2020-21 ಮತ್ತು 2021-22ನೇ ಸಾಲಿನಲ್ಲಿ ಕಾವೇರಿ ನೀರಾವರಿ ನಿಗಮ ನಿಯಮಿತದ ವತಿಯಿಂದ ಎಸ್.ಸಿ.ಎಸ್.ಪಿ/ಟಿ.ಎಸ್.ಪಿ ಯೋಜನೆಯಡಿಯಲ್ಲಿ ಬಿಡುಗಡೆಯಾದ ಅನುದಾನವೆಷ್ಟು. (ವರ್ಷವಾರು ಮತ್ತು ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು) | 2019ನೇ ಆಗಸ್ಟ್ ಮಾಹೆಯಿಂದ 2020-21 ಸಾಲಿನಲ್ಲಿ ಜಲಸಂಪನ್ಮೂಲ ಇಲಾಖೆಯಡಿಯಲ್ಲಿನ ಕಾವೇರಿ ನೀರಾವರಿ ನಿಗಮ ನಿಯಮಿತ ವತಿಯಿಂದ ಎಸ್.ಸಿ.ಪಿ/ಟಿ.ಎಸ್.ಪಿ ಯೋಜನೆಯಡಿಯಲ್ಲಿ ವಿಧಾನಸಭಾ ಕ್ಷೇತ್ರವಾರು ಬಿಡುಗಡೆಯಾದ ಅನುದಾನದ ವಿವರಗಳನ್ನು ಅನುಬಂಧ-1ರಲ್ಲಿ ನೀಡಲಾಗಿದೆ.<br>ಮುಂದುವರೆದು, 2021-22 ನೇ ಸಾಲಿಗೆ ವಿಧಾನಸಭಾ/ ಲೋಕಸಭಾ ಕ್ಷೇತ್ರವಾರು ಅನುದಾನವನ್ನು ಹಂಚಿಕೆ ಮಾಡಲಾಗಿದ್ದು, ಎಸ್.ಸಿ & ಎಸ್.ಟಿ ಅಧಿನಿಯಮ 2013 ಮತ್ತು ನಿಯಮಗಳು 2017 ರನ್ವಯ ಕ್ರಿಯಾ ಯೋಜನೆಯನ್ನು ರೂಪಿಸಿಕೊಂಡು ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಕ್ರಮ ವಹಿಸಲಾಗುತ್ತಿದೆ. ಕಾಮಗಾರಿಗಳ ಪ್ರಗತಿಗನುಸಾರ ಅನುದಾನವನ್ನು ಬಿಡುಗಡೆಗೊಳಿಸಲು ಕ್ರಮ ವಹಿಸಲಾಗುವುದು. |
| ಆ | ಈ ಯೋಜನೆಯಡಿಯಲ್ಲಿ ಅನುದಾನ ಬಿಡುಗಡೆಗೊಳಿಸಲು ಅನುಸರಿಸಲಾಗುವ ಮಾನದಂಡಗಳೇನು (ಸಂಪೂರ್ಣ ಮಾಹಿತಿ ನೀಡುವುದು) | ಎಸ್.ಸಿ & ಎಸ್.ಟಿ ಅಧಿನಿಯಮ 2013 ಮತ್ತು ನಿಯಮಗಳು 2017 ರನ್ವಯ ಹಾಗೂ ರಾಜ್ಯ ಅನುಸೂಚಿತ ಜಾತಿಗಳ/ಅನುಸೂಚಿತ ಪಂಗಡಗಳ ಅಭಿವೃದ್ಧಿ ಪರಿಷತ್ತಿನಲ್ಲಿ ಸೂಚಿಸಿದಂತೆ ಕಾಮಗಾರಿಗಳನ್ನು ಕೈಗೊಳ್ಳಲು ಕ್ರಮ ಕೈಗೊಂಡು ಅನುದಾನವನ್ನು ಬಿಡುಗಡೆಗೊಳಿಸಲಾಗುತ್ತಿದೆ. |
| ಇ | 2019ನೇ ಅಗಸ್ಟ್ ಮಾಹೆಯಿಂದ 2020-21 ಮತ್ತು 2021-22ನೇ ಸಾಲಿನಲ್ಲಿ ಈ ಯೋಜನೆಯಡಿಯಲ್ಲಿ ಅನುದಾನ ಬಿಡುಗಡೆಗೂಳಿಸಲು ತಾರತಮ್ಯ ನೀತಿ ಅನುಸರಿಸುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ , ಈ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು (ಸಂಪೂರ್ಣ ಮಾಹಿತಿ ನೀಡುವುದು) | ಕಾವೇರಿ ನೀರಾವರಿ ನಿಗಮ ವ್ಯಾಪ್ತಿಯಲ್ಲಿ ಬರುವ ವಿಧಾನಸಭಾ ಕ್ಷೇತ್ರದನ್ವಯ ಬೇಡಿಕೆಯನ್ನು ಅವಲೋಕಿಸಿ, ಎಲ್ಲಾ ವಿಧಾನಸಭಾ/ಲೋಕಸಭಾ ಕ್ಷೇತ್ರಗಳಿಗೆ ಅನುದಾನ ಹಂಚಿಕೆ ಮಾಡುವ ಕುರಿತು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆದು ಹಂಚಿಕೆ ಮಾಡಲಾಗುತ್ತಿರುತ್ತದೆ. |
| ಈ | ಈ ನಿಗಮದ ವತಿಯಿಂದ ಎಸ್.ಸಿ.ಎಸ್.ಪಿ/ಟಿ.ಎಸ್.ಪಿ ಯೋಜನೆಯಡಿಯಲ್ಲಿ ಯಾವ ಯಾವ ಕಾಮಗಾರಿಗಳನ್ನು | ಜಲಸಂಪನ್ಮೂಲ ಇಲಾಖೆಯಡಿಯಲ್ಲಿನ ಕಾವೇರಿ ನೀರಾವರಿ ನಿಗಮ ನಿಯಮಿತ ವತಿಯಿಂದ ಕರ್ನಾಟಕ ರಾಜ್ಯ ಅನುಸೂಚಿತ ಜಾತಿಗಳು ಮತ್ತು |

| | | |
|---|---|---|
| | ಕೈಗೊಳ್ಳಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು) | ಬುಡಕಟ್ಟು ಯೋಜನೆಗಳ ಅಭಿವೃದ್ಧಿ ಪರಿಷತ್ ನಿರ್ಣಯದಂತೆ ಎಸ್.ಸಿ.ಪಿ/ಟಿ.ಎಸ್.ಪಿ ಯೋಜನೆಯಡಿಯಲ್ಲಿ ವೈಯಕ್ತಿಕ ಕೊಳವೆಬಾವಿ ಹಾಗೂ ವಿದ್ಯುತ್ ಸಂಪರ್ಕ, ಸಾಮೂಹಿಕ ಕೊಳವೆಬಾವಿ ಹಾಗೂ ವಿದ್ಯುತ್ ಸಂಪರ್ಕ, ಪಿಕಪ್ ಅಭಿವೃದ್ಧಿ ಹಾಗೂ ನಿರ್ಮಾಣ, ಸೂಕ್ಷ್ಮ ನೀರಾವರಿ ಕಾಮಗಾರಿಗಳು, ಕಾಲೋನಿ ರಸ್ತೆ ಅಭಿವೃದ್ಧಿ ಹಾಗೂ ನಿರ್ಮಾಣ, ಕಾಲುವೆ ಅಭಿವೃದ್ಧಿ, ಕಟ್ಟಡಗಳು, ನಾಲೆಗಳ ಅಭಿವೃದ್ಧಿ, ಸಮುದಾಯ ಭವನ ನಿರ್ಮಾಣ, ಕೆರೆ ಅಭಿವೃದ್ಧಿ ಕಾಮಗಾರಿಗಳನ್ನು ಆಯಾ ಸಾಲಿನಲ್ಲಿ ಆದ್ಯತೆ ಮೇರೆಗೆ ಕೈಗೆತ್ತಿಕೊಂಡು ಅನುಷ್ಠಾನಗೊಳಿಸಲು ಕ್ರಮ ವಹಿಸಲಾಗುತ್ತಿದೆ. |

ಜಸಂಇ 05 ಎಂಎಲ್ಎ 2022

(ಗೋವಿಂದ ಎಂ. ಕಾರಜೋಳ)
ಜಲಸಂಪನ್ಮೂಲ ಸಚಿವರು

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ.ರೇವಣ್ಣ ಹೆಚ್.ಡಿ. (ಹೊಳೆನರಸೀಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 123 ಕ್ಕೆ

ಅನುಬಂಧ-1:

| ಕ್ರ. ಸಂ | ವಿಧಾನಸಭಾ ಕ್ಷೇತ್ರ | 2019-20 | | | 2020-21 | | |
|---|---|---|---|---|---|---|---|
| | | ಎಸ್‌ಸಿಪಿ | ಟಿಎಸ್‌ಪಿ | ಒಟ್ಟು | ಎಸ್‌ಸಿಪಿ | ಟಿಎಸ್‌ಪಿ | ಒಟ್ಟು |
| | | ಬಿಡುಗಡೆಯಾದ ಅನುದಾನ | ಬಿಡುಗಡೆಯಾದ ಅನುದಾನ | ಬಿಡುಗಡೆಯಾದ ಅನುದಾನ | ಬಿಡುಗಡೆಯಾದ ಅನುದಾನ | ಬಿಡುಗಡೆಯಾದ ಅನುದಾನ | ಬಿಡುಗಡೆಯಾದ ಅನುದಾನ |
| 1 | ಚಾಮುಂಡೇಶ್ವರಿ | 7.98 | 3.83 | 11.81 | 1.47 | 6.62 | 8.09 |
| 2 | ಕೆ.ಆರ್.ನಗರ | 2.86 | 1.81 | 4.67 | 2.39 | 1.84 | 4.22 |
| 3 | ಹುಣಸೂರು | 3.32 | 1.42 | 4.74 | 5.12 | 2.67 | 7.79 |
| 4 | ಪಿರಿಯಪಟ್ಟಣ | 1.87 | 3.27 | 5.14 | 1.44 | 2.90 | 4.34 |
| 5 | ಚಾಮರಾಜನಗರ | 1.48 | 2.07 | 3.55 | 3.65 | 3.00 | 6.65 |
| 6 | ಗುಂಡ್ಲುಪೇಟೆ | 2.76 | 2.25 | 5.01 | 2.20 | 4.53 | 6.73 |
| 7 | ಕೊಳ್ಳೇಗಾಲ | 2.45 | 2.49 | 4.94 | 8.20 | 8.23 | 16.43 |
| 8 | ಹನೂರು | 2.58 | 2.08 | 4.65 | 3.23 | 2.37 | 5.60 |
| 9 | ಶ್ರೀರಂಗಪಟ್ಟಣ | 2.13 | 1.38 | 3.51 | 2.20 | 1.64 | 3.83 |
| 10 | ಮಳವಳ್ಳಿ | 2.56 | 0.59 | 3.14 | 4.89 | 1.12 | 6.01 |
| 11 | ಹೆಚ್.ಡಿ.ಕೋಟೆ | 1.59 | 1.31 | 2.90 | 5.45 | 25.60 | 31.04 |
| 12 | ನಂಜನಗೂಡು | 1.66 | 1.42 | 3.08 | 2.98 | 6.73 | 9.71 |
| 13 | ವರುಣಾ | 1.72 | 2.27 | 3.99 | 2.70 | 2.11 | 4.80 |
| 14 | ಟಿ.ನರಸೀಪುರ | 10.64 | 6.65 | 17.29 | 15.54 | 8.88 | 24.42 |
| 15 | ಮದ್ದೂರು | 3.69 | 0.00 | 3.69 | 4.19 | 0.85 | 5.04 |
| 16 | ರಾಮನಗರ | 2.56 | 0.08 | 2.64 | 6.99 | 3.33 | 10.31 |
| 17 | ಕನಕಪುರ | 20.61 | 10.45 | 31.06 | 28.41 | 12.08 | 40.49 |
| 18 | ಚನ್ನಪಟ್ಟಣ | 4.43 | 0.01 | 4.44 | 6.61 | 0.12 | 6.72 |
| 19 | ಮೇಲುಕೋಟೆ | 1.72 | 1.02 | 2.74 | 2.84 | 1.15 | 3.99 |
| 20 | ಮಂಡ್ಯ | 3.34 | 0.41 | 3.74 | 5.71 | 2.54 | 8.24 |
| 21 | ಮಾಗಡಿ | 1.88 | 1.23 | 3.11 | 12.64 | 4.91 | 17.55 |

| ಕ್ರ. ಸಂ | ವಿಧಾನಸಭಾ ಕ್ಷೇತ್ರ | 2019-20 | | | 2020-21 | | |
|---|---|---|---|---|---|---|---|
| | | ಎಸ್‌ಸಿಪಿ | ಟಿಎಸ್‌ಪಿ | ಒಟ್ಟು | ಎಸ್‌ಸಿಪಿ | ಟಿಎಸ್‌ಪಿ | ಒಟ್ಟು |
| | | ಬಿಡುಗಡೆಯಾದ ಅನುದಾನ | ಬಿಡುಗಡೆಯಾದ ಅನುದಾನ | ಬಿಡುಗಡೆಯಾದ ಅನುದಾನ | ಬಿಡುಗಡೆಯಾದ ಅನುದಾನ | ಬಿಡುಗಡೆಯಾದ ಅನುದಾನ | ಬಿಡುಗಡೆಯಾದ ಅನುದಾನ |
| 22 | ಮಡಿಕೇರಿ | 2.06 | 0.98 | 3.04 | 3.45 | 2.89 | 6.34 |
| 23 | ಅರಕಲಗೂಡು | 3.29 | 1.87 | 5.16 | 3.40 | 1.78 | 5.18 |
| 24 | ಬೆಂಗಳೂರು ಗ್ರಾಮಾಂತರ | 0.00 | 0.00 | 0.00 | 0.00 | 0.16 | 0.16 |
| 25 | ಗುಬ್ಬಿ | 1.10 | 1.40 | 2.51 | 3.21 | 2.58 | 5.79 |
| 26 | ತುಮಕೂರು ಗ್ರಾಮಾಂತರ | 3.76 | 2.81 | 6.57 | 4.09 | 2.70 | 6.78 |
| 27 | ತುರುವೇಕೆರೆ | 3.87 | 2.41 | 6.28 | 7.06 | 4.09 | 11.15 |
| 28 | ಕುಣಿಗಲ್ | 2.77 | 0.18 | 2.95 | 5.04 | 2.01 | 7.05 |
| 29 | ಶ್ರವಣಬೆಳಗೊಳ | 2.31 | 0.31 | 2.62 | 3.23 | 1.05 | 4.27 |
| 30 | ತಿಪಟೂರು | 2.70 | 1.66 | 4.36 | 3.09 | 2.50 | 5.58 |
| 31 | ನಾಗಮಂಗಲ | 1.91 | 0.59 | 2.50 | 7.24 | 3.11 | 10.36 |
| 32 | ಅರಸೀಕೆರೆ | 1.75 | 1.25 | 3.00 | 2.55 | 1.30 | 3.84 |
| 33 | ಚಿಕ್ಕನಾಯಕನಹಳ್ಳಿ | 0.14 | 1.34 | 1.48 | 3.43 | 4.11 | 7.53 |
| 34 | ಆಲೂರು-ಸಕಲೇಶಪುರ | 2.09 | 0.08 | 2.17 | 6.02 | 1.87 | 7.89 |
| 35 | ಸೋಮವಾರಪೇಟೆ | 0.8 | 0.59 | 1.39 | 1.56 | 0.62 | 2.18 |
| 36 | ಕೆ ಆರ್ ಪೇಟೆ | 0.47 | 0.22 | 0.69 | 0.36 | 0.23 | 0.59 |
| 37 | ಹೊಳೆನರಸಿಪುರ | 1.31 | 0.19 | 1.50 | 6.88 | 1.42 | 8.30 |
| 38 | ಬೇಲೂರು | 3.41 | 0.49 | 3.90 | 4.02 | 1.44 | 5.46 |
| 39 | ಹಾಸನ | 0.94 | 0.17 | 1.11 | 4.91 | 3.34 | 8.25 |
| 40 | ಚಿಕ್ಕಮಗಳೂರು | 2.60 | 0.54 | 3.14 | 0.10 | 0.01 | 0.11 |
| 41 | ಮೂಡಿಗೆರೆ | 0.48 | 0.12 | 0.60 | 1.36 | 0 | 1.36 |
| 42 | ಕೃಷ್ಣರಾಜಪೇಟೆ | 2.59 | 0.67 | 3.26 | 4.75 | 2.33 | 7.08 |
| **Total** | | **124.15** | **63.90** | **188.05** | **204.56** | **142.74** | **347.30** |

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 124
2. ಸದಸ್ಯರ ಹೆಸರು : ಶ್ರೀ ರೇವಣ್ಣ ಹೆಚ್.ಡಿ. (ಹೊಳೇನರಸೀಪುರ)
3. ಉತ್ತರಿಸಬೇಕಾದ ದಿನಾಂಕ : 15-02-2022
4. ಉತ್ತರಿಸಬೇಕಾದ ಸಚಿವರು : ಶ್ರೀ ಮುನಿರತ್ನ

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಪ್ರತಿ ತಿಂಗಳು ಕರ್ನಾಟಕ ಪ್ರಗತಿ ಮಾಹೆಯ ಸಮೀಕ್ಷಾ (ಕೆ.ಡಿ.ಪಿ) ಸಭೆಯಲ್ಲಿ ಹಲವಾರು ಇಲಾಖೆಗಳಿಗೆ ಸಂಬಂಧಿಸಿದ ಸಿ.& ಎ.ಜಿ.(ಭಾರತದ ಲೆಕ್ಕ ನಿಯಂತ್ರಕರು ಮತ್ತು ಮಹಾಲೆಕ್ಕಪರಿಶೋಧಕರು) ವರದಿಗಳು ಸಭೆಯಲ್ಲಿ ಮಂಡನೆಯಾಗುತ್ತಿದೆಯೇ; ಹಾಗಿದ್ದಲ್ಲಿ, ಸಿ.&ಎ.ಜಿ.(ಭಾರತದ ಲೆಕ್ಕ ನಿಯಂತ್ರಕರು ಮತ್ತು ಮಹಾಲೆಕ್ಕಪರಿಶೋಧಕರು) ವರದಿಯಲ್ಲಿ ಎತ್ತಿರುವ ಆಕ್ಷೇಪಣೆಗಳಿಗೆ ಕಂಡಿಕೆವಾರು ಉತ್ತರ ನೀಡಿರುವುದನ್ನು ವಿಮರ್ಶಿಸಲಾಗುತ್ತಿದೆಯೇ; ಸಿ.&ಎ.ಜಿ.(ಭಾರತದ ಲೆಕ್ಕ ನಿಯಂತ್ರಕರು ಮತ್ತು ಮಹಾಲೆಕ್ಕಪರಿಶೋಧಕರು) ಪ್ಯಾರಾದಲ್ಲಿ ಆಕ್ಷೇಪಣೆ ಎತ್ತಿರುವ ಹಣದ ಮೊಬಲಗನ್ನು ಸಂಬಂಧಿಸಿದ ಅಧಿಕಾರಿಗಳಿಂದ ಮತ್ತು ಗುತ್ತಿಗೆದಾರರುಗಳಿಂದ ವಸೂಲಿ ಮಾಡಲಾಗುತ್ತಿದೆ ಎಂಬುದನ್ನು ದೃಢೀಕರಿಸಲಾಗುತ್ತಿದೆಯೇ; (ಇಲಾಖಾವಾರು ಸಂಪೂರ್ಣ ಮಾಹಿತಿ ನೀಡುವುದು) | ಇಲ್ಲ.<br>ಪ್ರಸ್ತುತ ಈ ವಿಷಯವು ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯ ಮೂಲಕ ಸಂಬಂಧಪಟ್ಟ ಇಲಾಖೆಗಳಿಂದ ಆಕ್ಷೇಪಣೆಗಳನ್ನು ಪರಿಶೀಲಿಸಿ ಉತ್ತರಗಳನ್ನು ನೀಡಲಾಗುತ್ತದೆ ಹಾಗೂ ಆಕ್ಷೇಪಣೆ ಎತ್ತಿರುವ ಹಣದ ಮೊಬಲಗನ್ನು ಸಂಬಂಧಿಸಿದ ಇಲಾಖಾ ಕಾರ್ಯದರ್ಶಿಗಳಿಂದ ಕ್ರಮ ವಹಿಸಲಾಗುತ್ತಿದೆ. |
| ಆ) | ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಪ್ರತಿ ಮಾಹೆ ಕೆ.ಡಿ.ಪಿ ಸಭೆಯಲ್ಲಿ ಸಿ.&ಎ.ಜಿ.(ಭಾರತದ ಲೆಕ್ಕ ನಿಯಂತ್ರಕರು ಮತ್ತು ಮಹಾ ಲೆಕ್ಕಪರಿಶೋಧಕರು) ವರದಿಗಳ ಮೇಲೆ ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿ, ಸಾರ್ವಜನಿಕ ಉದ್ದಿಮೆಗಳ ಸಮಿತಿ ಮತ್ತು ನಗರ ಸ್ಥಳೀಯ ಸಂಸ್ಥೆ & ಪಂಚಾಯತ್ ರಾಜ್ ಸಂಸ್ಥೆಗಳ ಸಮಿತಿಯಲ್ಲಿ ಮಾಡಿರುವ ಶಿಫಾರಸ್ಸುಗಳ ಅನುಷ್ಠಾನದ ಬಗ್ಗೆ ಚರ್ಚಿಸಲಾಗುತ್ತಿದೆಯೇ; ಇಲಾಖೆಗಳ ಮುಖ್ಯಸ್ಥರಿಂದ ಅನುಷ್ಠಾನದ ಬಗ್ಗೆ ನೀಡಿರುವ ವರದಿಯನ್ನು ದಾಖಲು ಮಾಡಲಾಗುತ್ತಿದೆಯೇ; ಮತ್ತು ಸದನ ಸಮಿತಿಗೆ ಶಿಫಾರಸ್ಸನ್ನು ಅನುಷ್ಠಾನ ಮಾಡಿರುವ ಬಗ್ಗೆ ವರದಿಯನ್ನು ಕಳುಹಿಸಲಾಗುತ್ತಿದೆಯೇ? (ಇಲಾಖಾವಾರು ಸಂಪೂರ್ಣ ಮಾಹಿತಿ ನೀಡುವುದು) | ಇಲ್ಲ.<br>ಸದರಿ ವಿಷಯದ ಬಗ್ಗೆ ಕೆ.ಡಿ.ಪಿ. ಸಭೆಯಲ್ಲಿ ಪರಿಶೀಲನೆಯಾಗದೇ ಇರುವುದರಿಂದ ಇಲಾಖಾವಾರು ಸಂಪೂರ್ಣ ಮಾಹಿತಿಯನ್ನು ನೀಡಲು ಸಾಧ್ಯವಿಲ್ಲ. |

ಸಂಖ್ಯೆ: ಪಿಡಿಎಸ್ 6 ಐಪಿಆರ್ 2022

(ಮುನಿರತ್ನ)
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖಾ ಸಚಿವರು

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 125
2. ಸದಸ್ಯರ ಹೆಸರು : ಶ್ರೀ ರೇವಣ್ಣ ಹೆಚ್. ಡಿ.
3. ಉತ್ತರಿಸಬೇಕಾದ ದಿನಾಂಕ : 15-02-2022

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಹೊಳೆನರಸೀಪುರ ಮತಕ್ಷೇತ್ರ ವ್ಯಾಪ್ತಿಯ ಹಾಸನ ತಾಲ್ಲೂಕು ದುದ್ದ ಹಾಗೂ ಶಾಂತಿ ಗ್ರಾಮ ಹೋಬಳಿಯ 160 ಕೆರೆಗಳು ಹಾಗೂ 10 ಕಟ್ಟೆಗಳಿಗೆ ಕುಡಿಯುವ ನೀರಿಗಾಗಿ ಕೆರೆ ತುಂಬಿಸುವ ಏತ ನೀರಾವರಿ ಯೋಜನೆಯಿಂದ ಕೈಬಿಟ್ಟಿರುವ ಗ್ರಾಮಗಳ 30 ಕೆರೆಗಳಿಗೆ ನೀರು ತುಂಬಿಸುವ ಯೋಜನೆಗಾಗಿ ರೂ.45.00 ಕೋಟಿಗಳ ಅಂದಾಜು ಪಟ್ಟಿಯೊಂದಿಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಕಳುಹಿಸಿರುವುದು ನಿಜವೇ; (ಸಂಪೂರ್ಣ ಮಾಹಿತಿ ನೀಡುವುದು) | ಹೊಳೆನರಸೀಪುರ ತಾಲ್ಲೂಕು ಮಾವಿನಕೆರೆ ಗ್ರಾಮದ ಹತ್ತಿರ ಹೇಮಾವತಿ ನದಿಯಿಂದ ಹಾಸನ ತಾಲ್ಲೂಕು ದುದ್ದ ಮತ್ತು ಶಾಂತಿಗ್ರಾಮ ಹೋಬಳಿ ವ್ಯಾಪ್ತಿಯ 160 ಕೆರೆಗಳು ಮತ್ತು ಕಟ್ಟೆಗಳಿಗೆ ಕುಡಿಯುವ ನೀರಿಗಾಗಿ ಕೆರೆ ತುಂಬಿಸುವ ಯೋಜನೆಯನ್ನು ಎರಡು ಹಂತಗಳಲ್ಲಿ ಕೈಗೆತ್ತಿಕೊಳ್ಳಲು ಉದ್ದೇಶಿಸಿ ಸರ್ಕಾರದ ಆದೇಶ ದಿನಾಂಕ:28-09-2018 ರಲ್ಲಿ ರೂ333.00 ಕೋಟಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ. ಅದರಂತೆ ಸದರಿ ಕಾಮಗಾರಿಗೆ ದಿನಾಂಕ:11-10-2018 ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿ, ಟೆಂಡರ್ ಆದಾರದ ಮೇಲೆ ಕಾಮಗಾರಿಯನ್ನು ಕೈಗೆತ್ತಿಕೊಂಡು ನಿರ್ವಹಿಸಲಾಗುತ್ತಿದೆ.<br><br>ಹೊಳೆನರಸೀಪುರ ತಾಲ್ಲೂಕು ಮಾವಿನಕೆರೆ ಗ್ರಾಮದ ಹತ್ತಿರ ಹೇಮಾವತಿ ನದಿಯಿಂದ ದುದ್ದ ಹಾಗೂ ಶಾಂತಿಗ್ರಾಮ ಹೋಬಳಿಯ 160 ಕೆರೆಗಳು ಹಾಗೂ ಕಟ್ಟೆಗಳಿಗೆ ಕುಡಿಯುವ ನೀರಿಗಾಗಿ ಕೆರೆ ತುಂಬಿಸುವ ಯೋಜನೆಯಲ್ಲಿ ಕೈಬಿಟ್ಟು ಹೋಗಿರುವ ದುದ್ದ ಹೋಬಳಿಯ ಉಳಿಕೆ 27 ಕೆರೆಗಳಿಗೆ ಮತ್ತು 18 ಕಟ್ಟೆಗಳಿಗೆ ನೀರು ತುಂಬಿಸಲು ಸ್ಥಳೀಯ ಜನಪ್ರತಿನಿಧಿಗಳು ಹಾಗೂ ಗ್ರಾಮಸ್ಥರುಗಳು ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ. ಮೂಲ ಯೋಜನೆಯಿಂದ ಈ ಕೆರೆಗಳಿಗೆ ಹಾಗೂ ಕಟ್ಟೆಗಳಿಗೆ ನೀರು ತುಂಬಿಸಲು ಕಾವೇರಿ ನೀರಾವರಿ ನಿಗಮದ ವತಿಯಿಂದ ವಿವರವಾದ ಅಂದಾಜು ಪಟ್ಟಿಯನ್ನು ರೂ.45.00 ಕೋಟಿಗಳಿಗೆ ತಯಾರಿಸಿದ್ದು, ನಿಗಮದ ಪರಿಶೀಲನೆಯಲ್ಲಿದೆ. |
| ಆ | ದುದ್ದ ಹೋಬಳಿ ವ್ಯಾಪ್ತಿಯ ಗ್ರಾಮಗಳಾದ ಸೋಮನಹಳ್ಳಿ, ಸೋಮನಹಳ್ಳಿಕಾವಲು, ಲಿಂಗಸನಹಳ್ಳಿ, ಕುದುರೆಗುಂಡಿ, ಮುತ್ತತ್ತಿ, ಬೊಗಾರನಹಳ್ಳಿ, ಬೊಗಾರನಹಳ್ಳಿಕೊಪ್ಪಲು, ಕಬ್ಬಳಿ, ಹೊಸಹಳ್ಳಿ, ಮುದ್ದಾಪುರ, ತಿರುಪತಿಹಳ್ಳಿ, ಹಂಗರಹಳ್ಳಿ, ವೇದಾವತಿ, ಬಸವಾಘಟ್ಟ, ಬೈರಾಪುರ, ಹುಲಹಳ್ಳಿ, ಮಹದೇವರಹಳ್ಳಿ, ಚೀರನಹಳ್ಳಿ, ಚಿಕ್ಕಾಮೇನಹಳ್ಳಿ ಮುಂತಾದ ಸುಮಾರು 20ಕ್ಕೂ ಹೆಚ್ಚು ಹಳಿಗಳು ನೀರಿನ ಸಮಸ್ಯೆಯಿಂದ ಬಹಳ ತೊಂದರೆಗೊಳಪಡುತ್ತಿರುತ್ತಾರೆ. ಈ ಹಳ್ಳಿಗಳ ಸುಮಾರು 30 ಕ್ಕೂ ಹೆಚ್ಚು ಕೆರೆಗಳು ಹಾಲಿ ದುದ್ಧ-ಶಾಂತಿಗ್ರಾಮ ಏತ ನೀರಾವರಿ ಯೋಜನೆಯಿಂದ ಹೊರ ಉಳಿದಿದ್ದು, ಈ ಕೆರೆಗಳನ್ನು ಈ ಯೋಜನೆ ವ್ಯಾಪ್ತಿಗೆ ಒಳಪಡಿಸಲು ಈಗಾಗಲೇ ಕಾಮಗಾರಿ ಪ್ರಗತಿಯಲ್ಲಿರುವ ದುದ್ಧ ಶಾಂತಿಗ್ರಾಮ ಏತ ನೀರಾವರಿ ಯೋಜನೆಯಿಂದ ಕೈಬಿಟ್ಟುಹೋಗಿರುವ ಕೆರೆಗಳನ್ನು ಈ ಯೋಜನೆಯ ವ್ಯಾಪ್ತಿಗೆ ಒಳಪಡಿಸಿ ತುಂಬಿಸಲು ಕ್ರಮಕೈಗೊಳ್ಳುವಂತೆ ಮಾನ್ಯ ಮುಖ್ಯಮಂತ್ರಿಯವರಿಗೆ ದಿನಾಂಕ: 17.05.2021ರ ಪತ್ರ ಮುಖೇನ ಕೋರಿದ್ದು, ಅಂದಿನ ಮಾನ್ಯ ಮುಖ್ಯಮಂತ್ರಿಯವರು ಕಾರ್ಯಪಾಲಕ ಇಂಜಿನಿಯರ್, ಹೇಮಾವತಿ ಬಲದಂಡೆ ನಾಲಾ ವಿಭಾಗ, ಹೊಳೆನರಸೀಪ್ಮರ ರವರಿಗೆ ನಿರ್ದೇಶನ ನೀಡಿರುವ್ವದು ನಿಜವೇ; (ಸಂಪೂರ್ಣ ಮಾಹಿತಿ ನೀಡುವುದು) | |
| ಇ | ದುದ್ದ-ಶಾಂತಿಗ್ರಾಮ ಏತ ನೀರಾವರಿ ಯೋಜನೆಯಿಂದ ಕೈ ಬಿಟ್ಟುಹೋಗಿರುವ ಕೆರೆಗಳನ್ನು ಈ ಯೋಜನೆ ವ್ಯಾಪ್ತಿಗೆ ಒಳಪಡಿಸಿ ತುಂಬಿಸಲು ಕ್ರಮಕೈಗೊಳ್ಳುವಂತೆ ಮಾನ್ಯ ಮುಖ್ಯಮಂತ್ರಿಯವರಿಗೆ ದಿನಾಂಕ: 11.06.2021ರ ಒತ್ರ ಮುಖೇನ ಕೋರಿದ್ದು, ಅಂದಿನ ಮಾನ್ಯ ಮುಖ್ಯಮಂತ್ರಿಯವರು "ದುದ್ದ ಹೋಬಳಿಯ ಉಳಿಕೆ | |

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| | ಕೆರೆಗಳಿಗೆ ನೀರು ತುಂಬಿಸಲು ಸೂಕ್ತ ಕ್ರಮ ತೆಗೆದುಕೊಳ್ಳುವುದು" ಎಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರು, ಜಲಸಂಪನ್ಮೂಲ ಇಲಾಖೆ ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ, ಬೆಂಗಳೂರು ರವರಿಗೆ ಇ-ಸಿಎಂ/2623971/2021/ ದಿನಾಂಕ:14.06.2021ರಲ್ಲಿ ನಿರ್ದೇಶನ ನೀಡಿರುವ್ವದು ನಿಜವೇ; (ಸಂಪೂರ್ಣ ಮಾಹಿತಿ ನೀಡುವುದು) | ಮುಂದುವರೆದು, ನಿಗಮದ ಕಾಮಗಾರಿಗಳ ಕಾರ್ಯಭಾರ ಅಧಿಕವಾಗಿದ್ದು, ನಿಗಮಕ್ಕೆ ಹಂಚಿಕೆಯಾಗಿರುವ ಪ್ರಸಕ್ತ ಸಾಲಿನ ಅನುದಾನದಲ್ಲಿ ಹಾಲಿ ಮುಂದುವರೆದ ಕಾಮಗಾರಿಗಳನ್ನೇ ಸರಿದೂಗಿಸಿಕೊಳ್ಳುವುದು ಕಷ್ಟಸಾಧ್ಯವಾಗುತ್ತಿರುತ್ತದೆ. ಆದಾಗ್ಯೂ, ಸದರಿ ಕಾಮಗಾರಿಯನ್ನು ನೀರಿನ ಲಭ್ಯತೆ ಹಾಗೂ ಅನುದಾನದ ಲಭ್ಯತೆಯನ್ನಾಧರಿಸಿ ಕೈಗೊಳ್ಳುವ ಬಗ್ಗೆ ಪರಿಶೀಲಿಸಲಾಗುವುದು. |
| ಈ | ಹಿಂದಿನ ಮಾನ್ಯ ಮುಖ್ಯಮಂತ್ರಿಗಳ ನಿರ್ದೇಶನಗಳ ಮೇರೆಗೆ ಮುಖ್ಯ ಇಂಜಿನಿಯರ್, ಹೇಮಾವತಿ ಜಲಾಶಯ ಯೋಜನೆ, ಗೊರೂರುರವರು ತಮ್ಮ ಪತ್ರ ಸಂಖ್ಯೆ: ಮುಇಂ:ಹೇಯೋವಲಯ:ಗೊರೂರು:ತಾಂಸ2:2021-22/1006/13.09.2021ರಲ್ಲಿ ದುದ್ದ-ಶಾಂತಿಗ್ರಾಮ ಏತ ನೀರಾವರಿ ಯೋಜನೆಯಿಂದ ಕೈ ಬಿಟ್ಟುಹೋಗಿರುವ ಕೆರೆಗಳನ್ನು ಈ ಯೋಜನೆ ವ್ಯಾಪ್ತಿಗೆ ಒಳಪಡಿಸಿ ನೀರನ್ನು ತುಂಬಿಸುವ ಕಾಮಗಾರಿಗೆ ಯೋಜನಾ ವರದಿಯಂತೆ ರೇಖಾ ಅಂದಾಜು ಪಟ್ಟಿಯನ್ನು 2018-19ನೇ ಸಾಲಿನ ಜಲಸಂಪನ್ಮೂಲ ಇಲಾಖೆ, ಲೋಕೋಪಯೋಗಿ ಇಲಾಖೆ ಹಾಗೂ ಮಾರುಕಟ್ಟೆ ದರಗಳನ್ನು ಪರಿಗಣಿಸಿ ರೂ.45.00 ಕೋಟಿಗಳ ಅಂದಾಜು ಪಟ್ಟಿಯೊಂದಿಗೆ ಪ್ರಸ್ತಾವನೆಯನ್ನು ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ಬೆಂಗಳೂರು ರವರಿಗೆ ಕಳುಹಿಸಿರುವುದು ನಿಜವೇ; ಹಾಗಿದ್ದಲ್ಲಿ, ರೂ.45.00 ಕೋಟಿಗಳ ಅಂದಾಜು ಪಟ್ಟಿಯ ಪ್ರಸ್ತಾವನೆಯನ್ನು ಕಾವೇರಿ ನೀರಾವರಿ ನಿಗಮದ ಆಡಳಿತ ಮಂಡಳಿ ಸಭೆಯಲ್ಲಿ ಮಂಡಿಸಿ, ಆಡಳಿತಾತ್ಮಕ ಅನುಮೋದನೆಯನ್ನು ಯಾವ ಕಾಲಮಿತಿಯಲ್ಲಿ ನೀಡಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು) | |

*ಸಂಖ್ಯೆ: ಜಸಂಇ 06 ಎನ್‌ಎಲ್‌ಎ 2022*

(ಗೋವಿಂದ ಎಂ. ಕಾರಜೋಳ)
ಜಲಸಂಪನ್ಮೂಲ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಡಾ॥ ಯತೀಂದ್ರ ಸಿದ್ದರಾಮಯ್ಯ (ವರುಣ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 126 |
| ಉತ್ತರಿಸುವ ದಿನಾಂಕ | : | 15.02.2022 |
| ಉತ್ತರಿಸುವ ಸಚಿವರು | : | ಕಾರ್ಮಿಕ ಸಚಿವರು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ವಿವಿಧ ಕಂಪನಿಗಳಲ್ಲಿ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ನೌಕರರಿಗೆ ಸೇವಾ ಭದ್ರತೆಯನ್ನು ಒದಗಿಸಲು ಸರ್ಕಾರವು ತೆಗೆದುಕೊಂಡಿರುವ ಕ್ರಮಗಳೇನು;<br>(ವಿವರ ನೀಡುವುದು) | 1970 ರ ಗುತ್ತಿಗೆ ಕಾರ್ಮಿಕ (ನಿಯಂತ್ರಣ ಮತ್ತು ನಿಷೇಧ) ಕಾಯ್ದೆಯು ಕೇಂದ್ರ ಅಧಿಸೂಚಿತ ಕಾಯ್ದೆಯಾಗಿದ್ದು, ಅದರನ್ವಯ ಗುತ್ತಿಗೆ ಕಾರ್ಮಿಕರನ್ನು ನೇಮಕ ಮಾಡಿಕೊಳ್ಳಲು ಸಂಬಂಧಿಸಿದ ಮೂಲ ಮಾಲೀಕರು ಹಾಗೂ ಗುತ್ತಿಗೆದಾರರಿಗೆ ಅವಕಾಶ ಕಲ್ಪಿಸಲಾಗಿದೆ.<br><br>ಗುತ್ತಿಗೆದಾರರಿಗೆ ಗುತ್ತಿಗೆ ಕಾರ್ಮಿಕರನ್ನು ನೇಮಕ ಮಾಡಿಕೊಳ್ಳಲು ನಿರ್ದಿಷ್ಟ ಅವಧಿಗೆ ಷರತ್ತು ನಿಬಂಧನೆಗಳಿಗೆ ಒಳಪಟ್ಟು ಪರವಾನಿಗೆಯನ್ನು ನೀಡಲಾಗುವುದು. ಪರವಾನಿಗೆಯ ಅವಧಿಯಲ್ಲಿ ಗುತ್ತಿಗೆ ಕಾರ್ಮಿಕರ ಸೇವಾ ಸೌಲಭ್ಯಕ್ಕೆ (ವೇತನ, ರಜೆ, ಕೆಲಸದ ಅವಧಿ, ಇತ್ಯಾದಿ) ಸಂಬಂಧಪಟ್ಟ ದೂರುಗಳ ಬಗ್ಗೆ ಕಾರ್ಮಿಕ ಇಲಾಖೆಯ ಅಧಿಕಾರಿಗಳು ಕಾನೂನಿನನ್ವಯ ಸೂಕ್ತ ಕ್ರಮ ಕೈಗೊಳ್ಳುತ್ತಾರೆ.<br><br>1970 ರ ಗುತ್ತಿಗೆ ಕಾರ್ಮಿಕ (ನಿಯಂತ್ರಣ ಮತ್ತು ನಿಷೇಧ) ಕಾಯ್ದೆಯಡಿ ಸೇವಾ ಭದ್ರತೆಯ ಬಗ್ಗೆ ಕ್ರಮ ಕೈಗೊಳ್ಳಲು ಯಾವುದೇ ಪ್ರಾವಧಾನಗಳಿರುವುದಿಲ್ಲ. |
| ಆ) | ಹೊರಗುತ್ತಿಗೆ ಆಧಾರದ ಮೇಲೆ ಕೆಲಸ ಮಾಡುವವರಿಗೆ ವಯೋಮಿತಿ ಮೀರುತ್ತಿದ್ದು ಸೇವಾ ಭದ್ರತೆಯಿಲ್ಲದ ಕಾರಣ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿಲ್ಲವೇ; ಬಂದಿದ್ದಲ್ಲಿ, ಈ ಬಗ್ಗೆ ತೆಗೆದುಕೊಂಡಿರುವ ಕ್ರಮಗಳೇನು?<br>(ವಿವರ ನೀಡುವುದು) | 1970 ರ ಗುತ್ತಿಗೆ ಕಾರ್ಮಿಕ (ನಿಯಂತ್ರಣ ಮತ್ತು ನಿಷೇಧ) ಕಾಯ್ದೆಯಡಿಯಲ್ಲಿ ಸೇವಾ ಭದ್ರತೆಗಳಲ್ಲಿ ಒಂದಾದ ವಯೋನಿವೃತ್ತಿಯವರೆಗಿನ ಸೇವೆಯ ಕುರಿತು ಯಾವುದೇ ಪ್ರಾವಧಾನಗಳು ಇರುವುದಿಲ್ಲ. ಬಾಧಿತ ಕಾರ್ಮಿಕರು ಕೈಗಾರಿಕಾ ವಿವಾದ ಕಾಯ್ದೆ 1948ರಡಿ ದೂರನ್ನು ದಾಖಲಿಸಬಹುದಾಗಿರುತ್ತದೆ. ಸದರಿ ಕಾಯ್ದೆಯನ್ವಯ ಸಂಧಾನಾಧಿಕಾರಿಗಳು ಉಭಯರ ನಡುವೆ ಸಂಧಾನವನ್ನು ನಡೆಸಿ ಒಪ್ಪಂದವನ್ನು ಏರ್ಪಡಿಸಬಹುದಾಗಿರುತ್ತದೆ. ಇಲ್ಲದಿದ್ದ ಪಕ್ಷದಲ್ಲಿ ಪ್ರಕರಣವನ್ನು ಹೆಚ್ಚಿನ ನ್ಯಾಯ ನಿರ್ಣಯಕ್ಕಾಗಿ ಮಾನ್ಯ ನ್ಯಾಯಾಲಯಕ್ಕೆ ಶಿಫಾರಸ್ಸು ಮಾಡಲಾಗುತ್ತದೆ. |

ಸಂಖ್ಯೆ: ಎಲ್‌ಡಿ 19 ಎಲ್‌ಡಬ್ಲ್ಯೂಎ 2022

(ಅರಬೈಲ್ ಶಿವರಾಮ್ ಹೆಬ್ಬಾರ್)
ಕಾರ್ಮಿಕ ಸಚಿವರು

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 127
2. ಸದಸ್ಯರ ಹೆಸರು : ಡಾ||ಯತ್ರೀಂದ್ರ ಸಿದ್ದರಾಮಯ್ಯ
3. ಉತ್ತರಿಸಬೇಕಾದ ದಿನಾಂಕ : 15-02-2022
4. ಉತ್ತರಿಸುವವರು : ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಕಳೆದ ಮೂರು ವರ್ಷಗಳಲ್ಲಿ ವರುಣ ವಿಧಾನ ಸಭಾ ಕ್ಷೇತ್ರಕ್ಕೆ ಕೆರೆಗಳ ಅಭಿವೃದ್ಧಿಗೆ ಮಂಜೂರು ಮಾಡಿದ ಅನುದಾನವೆಷ್ಟು; ಎಷ್ಟು ಕಾಮಗಾರಿಗಳು ಪ್ರಾರಂಭವಾಗಿವೆ; ಎಷ್ಟು ಬಾಕಿಯಿದೆ; ಕಾಮಗಾರಿ ವಿಳಂಬ ಮಾಡಲು ಕಾರಣವೇನು; (ವಿವರ ನೀಡುವುದು) | ವರುಣ ವಿಧಾನಸಭಾ ಕ್ಷೇತ ವ್ಯಾಪ್ತಿಯಲ್ಲಿ ಕಳೆದ 3 ವರ್ಷಗಳಲ್ಲಿ ಕೆರೆಗಳ ಅಭಿವೃದ್ಧಿಗಾಗಿ ಸಣ್ಣ ನೀರಾವರಿ ಇಲಾಖೆ ವತಿಯಿಂದ, 2018-19ನೇ ಸಾಲಿನಲ್ಲಿ ಒಟ್ಟಾರೆ 4 ಕಾಮಗಾರಿಗಳು ರೂ.769.20ಲಕ್ಷಗಳಿಗೆ ಅನುಮೋದನೆಯಾಗಿದ್ದು, ಅವುಗಳಲ್ಲಿ 3 ಕಾಮಗಾರಿಗಳು ಪೂರ್ಣಗೊಂಡಿವೆ. 01 ಕಾಮಗಾರಿಯು ಟೆಂಡರ್ ಪ್ರಕ್ರಿಯೆಯಲ್ಲಿರುತ್ತದೆ. 2019-20 ಮತ್ತು 2020-21ನೇ ಸಾಲಿನಲ್ಲಿ ಯಾವುದೇ ಕಾಮಗಾರಿಯು ಅನುಮೋದನೆಗೊಂಡಿರುವುದಿಲ್ಲ<br><br>ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ. |
| ಆ | ಮಳೆಯಿಂದ ಹಾನಿಯಾದ ಕೆರೆಗಳು ಎಷ್ಟು; ಎಷ್ಟು ಕೆರೆಗಳನ್ನು ಅಭಿವೃದ್ಧಿ ಪಡಿಸ ಲಾಗಿದೆ; ಎಷ್ಟು ಅನುದಾನ ಮಂಜೂರು ಮಾಡಲಾಗಿದೆ; ಎಷ್ಟು ಕಾಮಗಾರಿ ಪೂರ್ಣ ಗೊಂಡಿದೆ? (ವಿವರ ನೀಡುವುದು) | ತಗಡೂರು ಕೊಮ್ಮಗೆರೆ ಕೆರೆ ಮಾತ್ರ ವರುಣಾ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುತ್ತದೆ.<br><br>ಪ್ರಸ್ತುತ ಸಾಲಿನಲ್ಲಿ ಸುರಿದ ಭಾರಿ ಮಳೆಯಿಂದಾಗಿ ತಗಡೂರು ಕೊಮ್ಮಗೆರೆ ಕೆರೆಯ ತೂಬಿನ ಬದಿಯ ಏರಿಯು ಅಲ್ಪ ಪ್ರಮಾಣದಲ್ಲಿ ಹಾನಿಯಾಗಿದ್ದು, ದುರಸ್ತಿ ಕಾಮಗಾರಿಗಾಗಿ ರೂ.40.00 ಲಕ್ಷಗಳ ಅನುದಾನ ಅವಶ್ಯವಿದ್ದು, ಅನುದಾನದ ಲಭ್ಯತೆಗೆ ಅನುಗುಣವಾಗಿ ಕಾಮಗಾರಿಯನ್ನು ಕೈಗೊಳ್ಳಲು ಪರಿಶೀಲಿಸಲಾಗುವುದು. |

**ಸಂಖ್ಯೆ:ಎಂಐಡಿ 22 ಎಲ್‌ಎಕ್ಯೂ 2022**

**(ಜೆ.ಸಿ.ಮಾಧುಸ್ವಾಮಿ)**
ಕಾನೂನು, ಸಂಸದೀಯ ವ್ಯವಹಾರಗಳು
ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು

## 2019–20 ನೇ ಸಾಲಿನ ವಿಶ್ವೇಶ್ವರಯ್ಯ ಜಲ ನಿಗಮದ ವ್ಯಾಪಿಯ ಬಾಗೇಪಲ್ಲಿ ವಿಧಾನಸಭಾ ಕ್ಷೇತ್ರದ ಕೆ.ಆರ್.ಐ.ಡಿ.ಎಲ್ ಸಂಸ್ಥೆಗೆ ವಹಿಸಿದ ಎಸ್.ಸಿ.ಪಿ–ಟಿ.ಎಸ್.ಪಿ ಕಾಮಗಾರಿಗಳ ವಿವರ

ರೂ ಲಕ್ಷಗಳಲ್ಲಿ

| ಕ್ರ.ಸಂ | ವರ್ಷ | ಜಿಲ್ಲೆ | ವಿಧಾನ ಸಭಾ ಕ್ಷೇತ್ರ | ಕಾರ್ಯಗತಗೊಳಿಸಿರುವ/ಕೈಗೊಂಡಿರುವ ಕಾಮಗಾರಿಗಳ ವಿವರ | ಗುತ್ತಿಗೆದಾರರ ವಿವರ | ಅಂದಾಜು ಮೊತ್ತ | ಒಟ್ಟು ಬಿಡುಗಡೆ | ಇದುವರೆಗಿನ ವೆಚ್ಚ | ಕಾಮಗಾರಿಗಳ ಪ್ರಸ್ತುತ ಹಂತ | ಷರಾ |
|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 |
| | | | | 2019–20 ನೇ ಸಾಲಿನ ಎಸ್.ಸಿ.ಪಿ ಕಾಮಗಾರಿಗಳ ವಿವರ | | | | | | |
| 1 | 2019-20 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಚಿಕ್ಕಬಳ್ಳಾಪುರ ಜಿಲ್ಲೆ, ಗುಡಿಬಂಡೆ ತಾಲ್ಲೂಕು ಕಸಬಾ ಹೋಬಳಿ ಭತ್ತಲಹಳ್ಳಿ (ಮ್ಯಾಕಲಹಳ್ಳಿ) ಗ್ರಾಮದ ಎಸ್.ಸಿ.ಕಾಲೋನಿಯಲ್ಲಿ ಸಿ.ಸಿ.ರಸ್ತೆ ನಿರ್ಮಾಣ ಕಾಮಗಾರಿ | ಕೆ.ಆರ್.ಐ.ಡಿ.ಎಲ್ | 20.00 | 20.00 | 20.00 | ಕಾಮಗಾರಿ ಪೂರ್ಣಗೊಂಡಿರುತ್ತದೆ | ಕೆ.ಆರ್.ಐ.ಡಿ.ಎಲ್ ಸಂಸ್ಥೆಯಿಂದ ಹಣ ಬಳಕೆ ಪ್ರಮಾಣ ಪತ್ರ ಸಲ್ಲಿಸಲಾಗಿರುತ್ತದೆ |
| 2 | 2019-20 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಚಿಕ್ಕಬಳ್ಳಾಪುರ ಜಿಲ್ಲೆ, ಗುಡಿಬಂಡೆ ತಾಲ್ಲೂಕು ಕೊಲುವ ಗಡ್ಡಹಳ್ಳಿ ಎಸ್.ಸಿ.ಕಾಲೋನಿಯಲ್ಲಿ ಚರಂಡಿ ನಿರ್ಮಾಣ ಕಾಮಗಾರಿ | ಕೆ.ಆರ್.ಐ.ಡಿ.ಎಲ್ | 20.00 | 20.00 | 20.00 | ಕಾಮಗಾರಿ ಪೂರ್ಣಗೊಂಡಿರುತ್ತದೆ | |
| 3 | 2019-20 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಚಿಕ್ಕಬಳ್ಳಾಪುರ ಜಿಲ್ಲೆ, ಬಾಗೇಪಲ್ಲಿ ತಾಲ್ಲೂಕು ಗೆರಿರೆಡ್ಡಿ ಪಾಳ್ಯ ಗ್ರಾಮದ ಎಸ್.ಸಿ.ಕಾಲೋನಿಯಲ್ಲಿ ರಸ್ತೆ ಅಭಿವೃದ್ಧಿ ಕಾಮಗಾರಿ | ಕೆ.ಆರ್.ಐ.ಡಿ.ಎಲ್ | 30.00 | 30.00 | 30.00 | ಕಾಮಗಾರಿ ಪೂರ್ಣಗೊಂಡಿರುತ್ತದೆ | |
| 4 | 2019-20 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಚಿಕ್ಕಬಳ್ಳಾಪುರ ಜಿಲ್ಲೆ, ಗುಡಿಬಂಡೆ ತಾಲ್ಲೂಕು ಕರಿಗಾನತಮ್ಮನಹಳ್ಳಿ ಗ್ರಾಮದಿಂದ ಹಲಗದರೇನಹಳ್ಳಿ ಗ್ರಾಮದವರೆಗೆ ಎಸ್.ಸಿ.ಕಾಲೋನಿಯ ರಸ್ತೆ ಅಭಿವೃದ್ಧಿ ಕಾಮಗಾರಿ | ಕೆ.ಆರ್.ಐ.ಡಿ.ಎಲ್ | 30.00 | 30.00 | 30.00 | ಕಾಮಗಾರಿ ಪೂರ್ಣಗೊಂಡಿರುತ್ತದೆ | |
| 5 | 2019-20 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಚಿಕ್ಕಬಳ್ಳಾಪುರ ಜಿಲ್ಲೆ, ಬಾಗೇಪಲ್ಲಿ ತಾಲ್ಲೂಕು ಬೆಲ್ಲಾಂಪಲ್ಲಿ ಗ್ರಾಮದಿಂದ ಡಬ್ಬರವಾರಪಲ್ಲಿ ಗ್ರಾಮದ ಎಸ್.ಸಿ.ಕಾಲೋನಿಯಲ್ಲಿ ರಸ್ತೆ ಅಭಿವೃದ್ಧಿ ಕಾಮಗಾರಿ | ಕೆ.ಆರ್.ಐ.ಡಿ.ಎಲ್ | 50.00 | 50.00 | 50.00 | ಕಾಮಗಾರಿ ಪೂರ್ಣಗೊಂಡಿರುತ್ತದೆ | |
| 6 | 2019-20 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಚಿಕ್ಕಬಳ್ಳಾಪುರ ಜಿಲ್ಲೆ, ಬಾಗೆಪಲ್ಲಿ ತಾಲ್ಲೂಕು ದಿಗವಮದ್ದಲಖಾತೆ ಕ್ರಾಸ್‌ನಿಂದ ಸದ್ದುಪಲ್ಲಿ ಗ್ರಾಮದ ಎಸ್.ಸಿ. ಕಾಲೋನಿಗೆ ರಸ್ತೆ | - | 53.00 | 53.00 | 0.00 | ನಿಗಮದ ವತಿಯಿಂದ ಅಂದಾಜು ಪಟ್ಟಿ ತಯಾರಿಕಾ ಹಂತದಲ್ಲಿದೆ | 80% ಅನುದಾನವನ್ನು ಬಿಡುಗಡೆ ಮಾಡಲು ಮುಖ್ಯ ಲೆಕ್ಕಾಧಿಕಾರಿಗಳಿಗೆ ಈ ಕಛೇರಿ ಪತ್ರ ಸಂ. 3342/2019–20 ದಿನಾಂಕ: 31-03-2020 ರಲ್ಲಿ ಪತ್ರ ವ್ಯವಹರಿಸಲಾಗಿರುತ್ತದೆ. ಆದರೆ ಈ ಮಧ್ಯೆ ಕೆ.ಆರ್.ಐ.ಡಿ.ಎಲ್ ಸಂಸ್ಥೆಗೆ ಕಾಮಗಾರಿಗಳನ್ನು ವಹಿಸಲು ಕರ್ನಾಟಕದ ಮಾನ್ಯ ಉಚ್ಚ-ನ್ಯಾಯಾಲಯದ ತಡಯಾಜ್ಞೆ ನೀಡಿದ್ದರಿಂದ ಸದರಿ ಕಾಮಗಾರಿಗಳನ್ನು ಕೆ.ಆರ್.ಐ.ಡಿ.ಎಲ್ ಸಂಸ್ಥೆಯಿಂದ ಹಿಂಪಡೆದು ನಿಗಮದ ವತಿಯಿಂದ ಕೈಗೊಳ್ಳಲು ಕ್ರಮ ವಹಿಸಲಾಗಿದೆ |
| 7 | 2019-20 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಚಿಕ್ಕಬಳ್ಳಾಪುರ ಜಿಲ್ಲೆ, ಬಾಗೆಪಲ್ಲಿ ಸೋಮೇನಹಳ್ಳಿ ಹೋಬಳಿ ಕದಿರಿಶೆಟ್ಟಿಹಳ್ಳಿ ಗ್ರಾಮದ ಎಸ್.ಸಿ. ಕಾಲೋನಿಗೆ ಸಿ.ಸಿ.ರಸ್ತೆ ಅಭಿವೃದ್ಧಿ | - | 22.00 | 22.00 | 0.00 | ನಿಗಮದ ವತಿಯಿಂದ ಅಂದಾಜು ಪಟ್ಟಿ ತಯಾರಿಕಾ ಹಂತದಲ್ಲಿದೆ | |
| 8 | 2019-20 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಚಿಕ್ಕಬಳ್ಳಾಪುರ ಜಿಲ್ಲೆ, ಬಾಗೆಪಲ್ಲಿ ತಾಲ್ಲೂಕು ಎನ್.ಹೆಚ್–7 ರಿಂದ ಪರಗೋಡು ಎಸ್.ಸಿ. ಕಾಲೋನಿಗೆ ರಸ್ತೆ ಅಭಿವೃದ್ಧಿ | - | 50.00 | 50.00 | 0.00 | ಬದಲಿ ಕಾಮಗಾರಿಗೆ ಯಲ್ಲಂಪಲ್ಲಿ ಗ್ರಾಮದ ಎಸ್.ಸಿ ಕಾಲೋನಿಯಲ್ಲಿ ಸಿ.ಸಿ ರಸ್ತೆ ಮತ್ತು ಚರಂಡಿ ನಿರ್ಮಾಣ ಕಾಮಗಾರಿಯ ಟೆಂಡರ್ ಪ್ರಕ್ರಿಯೆಯಲ್ಲಿದೆ | |
| | | | | 2019-20 SCP GRAND TOTAL | | 225.00 | 225.00 | 150.00 | | |

## 2019-20 ನೇ ಸಾಲಿನ ಟಿ.ಎಸ್.ಪಿ ಕಾಮಗಾರಿಗಳ ವಿವರ

| | | | | | | | | | | |
|---|---|---|---|---|---|---|---|---|---|---|
| 1 | 2019-20 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಬಾಗೇಪಲ್ಲಿ ತಾಲ್ಲೂಕು ದೇವರಗುಡಿಪಲ್ಲಿ ಗ್ರಾಮದ ಎಸ್.ಟಿ. ಕಾಲೋನಿಯಲ್ಲಿ ಚರಂಡಿ ನಿರ್ಮಾಣ ಕಾಮಗಾರಿ | - | 15.00 | 15.00 | 0.00 | ನಿಗಮದ ವತಿಯಿಂದ ಅಂದಾಜು ಪಟ್ಟಿ ತಯಾರಿಕಾ ಹಂತದಲ್ಲಿದೆ | 80% ಅನುದಾನವನ್ನು ಬಿಡುಗಡೆ ಮಾಡಲು ಮುಖ್ಯ ಲೆಕ್ಕಾಧಿಕಾರಿಗಳಿಗೆ ಈ ಕಛೇರಿ ಪತ್ರ ಸಂ. 3342/2019-20 ದಿನಾಂಕ: 31-03-2020 ರಲ್ಲಿ ಪತ್ರ ವ್ಯವಹರಿಸಲಾಗಿರುತ್ತದೆ. ಆದರೆ ಈ ಮಧ್ಯೆ ಕೆ.ಆರ್.ಐ.ಡಿ.ಎಲ್ ಸಂಸ್ಥೆಗೆ ಕಾಮಗಾರಿಗಳನ್ನು ವಹಿಸಲು ಕರ್ನಾಟಕದ ಮಾನ್ಯ ಉಚ್ಚ-ನ್ಯಾಯಾಲಯದ ತಡೆಯಾಜ್ಞೆ ನೀಡಿದ್ದರಿಂದ ಸದರಿ ಕಾಮಗಾರಿಗಳನ್ನು ಕೆ.ಆರ್.ಐ.ಡಿ.ಎಲ್ ಸಂಸ್ಥೆಯಿಂದ ಹಿಂಪಡೆದು ನಿಗಮದ ವತಿಯಿಂದ ಕೈಗೊಳ್ಳಲು ಕ್ರಮ ವಹಿಸಲಾಗಿದೆ |
| 2 | 2019-20 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಬಾಗೇಪಲ್ಲಿ ತಾಲ್ಲೂಕು ನಲ್ಲಪ್ಪರೆಡ್ಡಿಪಲ್ಲಿ ಗ್ರಾಮದ ಎಸ್.ಟಿ. ಕಾಲೋನಿಯಲ್ಲಿ ಸಿಸಿ ರಸ್ತೆ ನಿರ್ಮಾಣ | - | 10.00 | 10.00 | 0.00 | ನಿಗಮದ ವತಿಯಿಂದ ಅಂದಾಜು ಪಟ್ಟಿ ತಯಾರಿಕಾ ಹಂತದಲ್ಲಿದೆ | |
| 3 | 2019-20 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಗುಡಿಬಂಡೆ ತಾಲ್ಲೂಕು ಚಿಕ್ಕತಿಮ್ಮನಹಳ್ಳಿ ಎಸ್.ಟಿ. ಕಾಲೋನಿಯ ಬಳಿ ಸಿ.ಸಿ.ರಸ್ತೆ | - | 6.00 | 6.00 | 0.00 | ನಿಗಮದ ವತಿಯಿಂದ ಅಂದಾಜು ಪಟ್ಟಿ ತಯಾರಿಕಾ ಹಂತದಲ್ಲಿದೆ | |
| 4 | 2019-20 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಬಾಗೇಪಲ್ಲಿ ತಾಲ್ಲೂಕು ಕದಿರೆನ್ನಗಾರಪಲ್ಲಿ ಎಸ್.ಟಿ. ಕಾಲೋನಿಯಲ್ಲಿ ಸಿ.ಸಿ.ರಸ್ತೆ ನಿರ್ಮಾಣ | - | 6.00 | 6.00 | 0.00 | ನಿಗಮದ ವತಿಯಿಂದ ಅಂದಾಜು ಪಟ್ಟಿ ತಯಾರಿಕಾ ಹಂತದಲ್ಲಿದೆ | |
| 5 | 2019-20 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಬಾಗೇಪಲ್ಲಿ ತಾಲ್ಲೂಕು ಗುಟ್ಟಮಿಂದಪಲ್ಲಿ ಎಸ್.ಟಿ. ಕಾಲೋನಿಯಲ್ಲಿ ಸಿ.ಸಿ.ರಸ್ತೆ ನಿರ್ಮಾಣ | - | 6.00 | 6.00 | 0.00 | ನಿಗಮದ ವತಿಯಿಂದ ಅಂದಾಜು ಪಟ್ಟಿ ತಯಾರಿಕಾ ಹಂತದಲ್ಲಿದೆ | |
| 6 | 2019-20 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಬಾಗೇಪಲ್ಲಿ ತಾಲ್ಲೂಕು ಕಸಬಾ ಹೋಬಳಿ ಕಂಬಾಲಪಲ್ಲಿ ಎಸ್.ಟಿ. ಕಾಲೋನಿಯಲ್ಲಿ ಸಿ.ಸಿ.ರಸ್ತೆ ನಿರ್ಮಾಣ | - | 6.00 | 6.00 | 0.00 | ನಿಗಮದ ವತಿಯಿಂದ ಅಂದಾಜು ಪಟ್ಟಿ ತಯಾರಿಕಾ ಹಂತದಲ್ಲಿದೆ | |
| 7 | 2019-20 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಬಾಗೇಪಲ್ಲಿ ತಾಲ್ಲೂಕು ರಾಶ್ಚೆರವು ಗ್ರಾಮದ ಎಸ್.ಟಿ.ಕಾಲೋನಿಯಲ್ಲಿ ಸಿ.ಸಿ.ರಸ್ತೆ ನಿರ್ಮಾಣ | - | 14.00 | 14.00 | 0.00 | ನಿಗಮದ ವತಿಯಿಂದ ಅಂದಾಜು ಪಟ್ಟಿ ತಯಾರಿಕಾ ಹಂತದಲ್ಲಿದೆ | |
| 8 | 2019-20 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಬಾಗೇಪಲ್ಲಿ ತಾಲ್ಲೂಕು ಕಸಬಾ ಹೋಬಳಿ ತಿಮ್ಮಂಪಲ್ಲಿ ಪಂಚಾಯಿತಿ ಗುಂಡ್ಲಪಲ್ಲಿ ಎಸ್.ಟಿ. ಕಾಲೋನಿಯಲ್ಲಿ ಸಿ.ಸಿ.ರಸ್ತೆ ನಿರ್ಮಾಣ | - | 6.00 | 6.00 | 0.00 | ನಿಗಮದ ವತಿಯಿಂದ ಅಂದಾಜು ಪಟ್ಟಿ ತಯಾರಿಕಾ ಹಂತದಲ್ಲಿದೆ | |
| 9 | 2019-20 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಬಾಗೇಪಲ್ಲಿ ತಾಲ್ಲೂಕು ಕನ್ನಂಪಲ್ಲಿ ಗ್ರಾಮದ ಎಸ್.ಟಿ.ಕಾಲೋನಿಯಲ್ಲಿ ಸಿ.ಸಿ.ರಸ್ತೆ ನಿರ್ಮಾಣ | - | 6.00 | 6.00 | 0.00 | ನಿಗಮದ ವತಿಯಿಂದ ಅಂದಾಜು ಪಟ್ಟಿ ತಯಾರಿಕಾ ಹಂತದಲ್ಲಿದೆ | |
| 10 | 2019-20 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಬಾಗೇಪಲ್ಲಿ ತಾಲ್ಲೂಕು ಪಾಳ್ಯ ಕೆರೆ ಗ್ರಾಮ ಪಂಚಾಯಿತಿ ಪೆದ್ದರಾಜಪಲ್ಲಿ ಗ್ರಾಮದ ಎಸ್.ಟಿ. ಜಾತಿಗೆ ಸೇರಿದ ಜಮೀನುಗಳ ಹತ್ತಿರ ಇರುವ ಹಳ್ಳಕ್ಕೆ ಚೆಕ್ ಡ್ಯಾಂ ನಿರ್ಮಾಣ | ಕೆ.ಆರ್.ಐ.ಡಿ.ಎಲ್ | 100.00 | 100.00 | 80.00 | ಕಾಮಗಾರಿ ಪ್ರಗತಿಯಲ್ಲಿರುತ್ತದೆ. | ಕೆ.ಆರ್.ಐ.ಡಿ.ಎಲ್ ಸಂಸ್ಥೆಯಿಂದ ಹಣ ಬಳಕೆ ಪ್ರಮಾಣ ಪತ್ರ ಸಲ್ಲಿಸಬೇಕಾಗಿರುತ್ತದೆ |
| 2019-20 TSP GRAND TOTAL | | | | | | 175.00 | 175.00 | 80.00 | | |

**ಕರ್ನಾಟಕ ವಿಧಾನಸಭೆ**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 14 |
| ಸದಸ್ಯರ ಹೆಸರು | : | ಶ್ರೀ ಸುರೇಶ್ ಕುಮಾರ್ ಎಸ್ (ರಾಜಾಜಿನಗರ) |
| ಉತ್ತರಿಸಬೇಕಾದ ದಿನಾಂಕ | : | 15.02.2022 |
| ಉತ್ತರಿಸಬೇಕಾದ ಸಚಿವರು | : | ಮುಖ್ಯಮಂತ್ರಿಯವರು |

****

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ನಾಡಪ್ರಭು ಕೆಂಪೇಗೌಡ ಲೇಔಟ್‌ನಲ್ಲಿ ಮೂಲಭೂತ ಸೌಲಭ್ಯಗಳನ್ನು ಅಭಿವೃದ್ಧಿಪಡಿಸುವ ಪ್ರಸ್ತಾವನೆಯ ಪ್ರಸ್ತುತ ಹಂತವೇನು; | ನಾಡಪ್ರಭು ಕೆಂಪೇಗೌಡ ಬಡಾವಣೆಗೆ ಮೂಲ ಸೌಕರ್ಯಗಳಾದ ಕುಡಿಯುವ ನೀರು ಸರಬರಾಜು, ಒಳಚರಂಡಿ ವ್ಯವಸ್ಥೆ, ಶುದ್ಧೀಕರಿಸಿದ ನೀರು ಸರಬರಾಜು, ಯುಟಿಲಿಟಿ ಡಕ್ಟ್ ನಿರ್ಮಾಣ ಹಾಗೂ ವಿದ್ಯುತ್ ಕಾಮಗಾರಿಗಳಿಗೆ ಟೆಂಡರ್ ಕರೆದು M/s. L & T Construction Pvt. Ltd., ಹಾಗೂ SPMLIL - Amrutha Construction Pvt. Ltd., ರವರಿಗೆ ಕಾರ್ಯಾದೇಶಗಳನ್ನು ನೀಡಲಾಗಿರುತ್ತದೆ.<br><br>ಕಾಮಗಾರಿಗಳ ಅನುಷ್ಠಾನದ ಸಂದರ್ಭದಲ್ಲಿ ಸ್ಥಳದ ಅವಶ್ಯಕತೆಗಳಿಗನುಸಾರವಾಗಿ ಹಾಗೂ ಹೆಚ್ಚುವರಿ ಪ್ರದೇಶಗಳ ಸೇರ್ಪಡೆಯಿಂದಾಗಿ, ಹೆಚ್ಚುವರಿ ಪರಿಮಾಣ ಹಾಗೂ ಹೆಚ್ಚುವರಿ ಅಂಶಗಳು ಉದ್ಭವಿಸಿರುವ ಪ್ರಯುಕ್ತ, ಕಾಮಗಾರಿಗಳಿಗೆ Variation Proposal ಗಳನ್ನು ತಯಾರಿಸಲಾಗಿದ್ದು, ವಿಷಯವನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಸಭೆಗೆ ಮಂಡಿಸಲಾಗಿರುತ್ತದೆ.<br><br>ದಿನಾಂಕ:13-10-2021 ರಂದು ಜರುಗಿದ ಪ್ರಾಧಿಕಾರದ ಸಭೆಯಲ್ಲಿ, ಕಾಮಗಾರಿಗಳ Variation Proposal ಗಳನ್ನು Third Party ಸಂಸ್ಥೆಗಳಿಂದ ಪರಿಶೀಲಿಸಿ, ವರದಿ ಪಡೆದ ನಂತರ ತೀರ್ಮಾನಿಸಲಾಗುವುದಾಗಿ ನಿರ್ಣಯಿಸಲಾಗಿರುತ್ತದೆ.<br><br>ಅದರಂತೆ ಕಾಮಗಾರಿಗಳ Variation ಪ್ರಸ್ತಾವನೆಗಳನ್ನು ಪರಿಶೀಲಿಸಿ, ವರದಿಯನ್ನು ನೀಡಲು ದಿನಾಂಕ: 04-02-2022 ರ ಪ್ರಾಧಿಕಾರದ ಪತ್ರದಲ್ಲಿ M/s.Bureau Veritas ರವರನ್ನು ಕೋರಲಾಗಿರುತ್ತದೆ. |
| ಆ | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು 10,000 ನಿವೇಶನಗಳನ್ನು ಹಂಚಿಕೆ ಮಾಡಿ 05 ವರ್ಷ ಪೂರ್ಣಗೊಂಡಿದ್ದು, ಈವರೆಗೆ ಎಷ್ಟು ಮಾಲೀಕರು ಈ ಲೇಔಟ್‌ನಲ್ಲಿ ಮನೆ ನಿರ್ಮಿಸಿದ್ದಾರೆ; | ಮೂಲಭೂತ ಸೌಲಭ್ಯ ಕಲ್ಪಿಸುವ ಕಾಮಗಾರಿಗಳು ಪ್ರಗತಿಯಲ್ಲಿರುವುದರಿಂದ ಸಾರ್ವಜನಿಕರಿಗೆ ಹಂಚಿಕೆಯಾಗಿರುವ 9971 ನಿವೇಶನಗಳಲ್ಲಿ ಯಾವುದೇ ಮಾಲೀಕರು ಮನೆ ನಿರ್ಮಾಣ ಮಾಡಿರುವುದಿಲ್ಲ. |

| | | |
|---|---|---|
| ಇ | ಈ ಲೇಔಟ್ ಅನ್ನು ಅಭಿವೃದ್ಧಿಪಡಿಸುವಲ್ಲಿ ಬೆಂಗಳೂರು ಪ್ರಾಧಿಕಾರದ ಮಂದಗತಿಯ ಪ್ರವೃತ್ತಿಯಿಂದಾಗಿ ನಿವೇಶನಗಳ ಮಾಲೀಕರು ತಮ್ಮ ಬ್ಯಾಂಕ್ ಸಾಲದ ಮೇಲಿನ ಬಡ್ಡಿ ಹಾಗೂ ಪ್ರಸ್ತುತ ವಾಸವಿರುವ ಮನೆಗಳ ಬಾಡಿಗೆ ಎರಡನ್ನೂ ಪಾವತಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಈ | ಈ ಯೋಜನೆಗೆ ಈವರೆಗೆ ವೆಚ್ಚವಾಗಿರುವ ಹಣವೆಷ್ಟು; ಮುಂದೆ ವೆಚ್ಚವಾಗಲಿರುವ ಅಂದಾಜು ಮೊತ್ತವೆಷ್ಟು; ಮತ್ತು ಈ ಯೋಜನೆಯನ್ನು ಯಾವಾಗ ಪೂರ್ಣಗೊಳಿಸಲಾಗುವುದು; | ನಾಡಪ್ರಭು ಕೆಂಪೇಗೌಡ ಬಡಾವಣೆಯಲ್ಲಿ ಸಿವಿಲ್ ಕಾಮಗಾರಿಗಳಿಗೆ ಇದುವರೆವಿಗೂ ರೂ.714.12 ಕೋಟಿಗಳು ವೆಚ್ಚವಾಗಿರುತ್ತದೆ. ಉಳಿಕೆ ರೂ.767.35 ಕೋಟಿಗಳ ಅವಶ್ಯಕತೆ ಇರುತ್ತದೆ.<br><br>ಬಡಾವಣೆಗೆ ಮೂಲ ಸೌಕರ್ಯಗಳಾದ ಕುಡಿಯುವ ನೀರು ಸರಬರಾಜು, ಒಳಚರಂಡಿ ವ್ಯವಸ್ಥೆ, ಶುದ್ದೀಕರಿಸಿದ ನೀರು ಸರಬರಾಜು, ಯುಟಿಲಿಟಿ ಡಕ್ಟ್ ನಿರ್ಮಾಣ ಹಾಗೂ ವಿದ್ಯುತ್ ಕಾಮಗಾರಿಗಳಿಗೆ ಈವರೆಗೆ ರೂ.737.10 ಕೋಟಿ ವೆಚ್ಚವಾಗಿದ್ದು, ಕಾಮಗಾರಿಗಳನ್ನು ಪೂರ್ಣಗೊಳಿಸಲು ರೂ.1542.91 ಕೋಟಿ ಅವಶ್ಯವಿರುತ್ತದೆ. ಸದರಿ ಕಾಮಗಾರಿಗಳ ಹೆಚ್ಚುವರಿ ಪರಿಮಾಣ ಮತ್ತು ಹೆಚ್ಚುವರಿ ಅಂಶಗಳ ಪ್ರಸ್ತಾವನೆಗಳಿಗೆ ಪ್ರಾಧಿಕಾರದ ಸಭೆಯ ಅನುಮೋದನೆ ದೊರೆತ ನಂತರ, ಕಾಮಗಾರಿಯನ್ನು ಪೂರ್ಣಗೊಳಿಸಲಾಗುವುದು. ಯೋಜನೆಯನ್ನು ಡಿಸೆಂಬರ್–2022 ರ ಅಂತ್ಯಕ್ಕೆ ಪೂರ್ಣಗೊಳಿಸಲು ಯೋಜಿಸಲಾಗಿದೆ. |
| ಉ | Major Arterial ರಸ್ತೆಯ ಪ್ರಸ್ತುತ ಹಂತವೇನು ಹಾಗೂ ಇದನ್ನು ಯಾವಾಗ ಪೂರ್ಣಗೊಳಿಸಲಾಗುವುದು? | ಮಾಗಡಿ ರಸ್ತೆಯಿಂದ ಮೈಸೂರು ರಸ್ತೆವರೆಗೆ ನಾಡಪ್ರಭು ಕೆಂಪೇಗೌಡ ಬಡಾವಣೆಯ ಮುಖಾಂತರ ಹಾದು ಹೋಗುವ ಮುಖ್ಯ ಸಂಪರ್ಕ ರಸ್ತೆಯು 10.35 ಕಿ.ಮೀ ಉದ್ದದ ರಸ್ತೆಯಾಗಿದ್ದು, ಇದರಲ್ಲಿ 6.00 ಕಿ.ಮೀ ವರೆಗೆ ವಿವಿಧ ಹಂತದಲ್ಲಿ ಸೇತುವೆ ಅಡ್ಡ ಮೋರಿ, ಡಾಂಬರೀಕರಣ ಕಾಮಗಾರಿಗಳು ಪ್ರಗತಿಯಲ್ಲಿರುತ್ತದೆ. ಉಳಿಕೆ 4.35 ಕಿ.ಮೀ ಉದ್ದದ ರಸ್ತೆ ನಿರ್ಮಾಣ ಮಾಡಲು ಭೂಸ್ವಾಧೀನ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ.<br><br>ಸದರಿ ಯೋಜನೆಯನ್ನು ಡಿಸೆಂಬರ್–2022 ರ ಅಂತ್ಯಕ್ಕೆ ಪೂರ್ಣಗೊಳಿಸಲು ಯೋಜಿಸಲಾಗಿದೆ. |

ಸಂಖ್ಯೆ: ನಅಇ 42 ಬೆಂಭೂಸ್ವಾ 2022

**(ಬಸವರಾಜ ಬೊಮ್ಮಾಯಿ)**
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 140
2. ಸದಸ್ಯರ ಹೆಸರು : ಶ್ರೀ ಸುಬ್ಬಾರೆಡ್ಡಿ ಎಸ್.ಎನ್ (ಬಾಗೇಪಲ್ಲಿ)
3. ಉತ್ತರಿಸಬೇಕಾದ ದಿನಾಂಕ : 15.02.2022
4. ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಬಾಗೇಪಲ್ಲಿ ವಿಧಾನಸಭಾ ಕ್ಷೇತ್ರಕ್ಕೆ ಜಲಸಂಪನ್ಮೂಲ ಇಲಾಖೆಯ ವತಿಯಿಂದ ಘಂಟಲಮಲ್ಲಮ್ಮ ಕಣಿವೆಯ ಬಳಿ ಬ್ಯಾರೇಜ್ ನಿರ್ಮಾಣ ಮಾಡಲು ಯಾವ ದಿನಾಂಕ ದಂದು ಆಯವ್ಯಯದಲ್ಲಿ ಘೋಷಣೆ ಮಾಡಲಾಗಿದೆ: | ಬಾಗೇಪಲ್ಲಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಘಂಟಲಮಲ್ಲಮ್ಮ ಕಣಿವೆಯ ಬಳಿ ಬ್ಯಾರೇಜ್ ನಿರ್ಮಾಣ ಮಾಡಲು 08.02.2019ರಂದು ಮಂಡಿಸಿದ 2019-20ನೇ ಸಾಲಿನ ಆಯವ್ಯಯದಲ್ಲಿ ರೂ.20.00 ಕೋಟಿಗಳನ್ನು ಘೋಷಿಸಲಾಗಿರುತ್ತದೆ. |
| ಆ) | ಈ ಬ್ಯಾರೇಜ್ ನಿರ್ಮಾಣ ಮಾಡಲು ಡಿ.ಪಿ.ಆರ್. ತಯಾರು ಮಾಡಲು ಯಾವ ದಿನಾಂಕದಂದು, ಯಾವ ಸಂಸ್ಥೆಗೆ ಗುತ್ತಿಗೆ ನೀಡಲಾಗಿದೆ; | ಸದರಿ ಬ್ಯಾರೇಜ್‌ನ್ನು ನಿರ್ಮಾಣ ಮಾಡುವ ಕಾಮಗಾರಿಯ ಡಿ.ಪಿ.ಆರ್. ತಯಾರಿಸಲು ಸಮಾಲೋಚಕ ಸಂಸ್ಥೆಯಾದ E.I.Technologies, Bangalore ರವರಿಗೆ ದಿನಾಂಕ: 18.02.2020 ರಂದು ಗುತ್ತಿಗೆ ವಹಿಸಲಾಗಿದ್ದು, ಸದರಿ ಸಂಸ್ಥೆಯು ಕಾಮಗಾರಿಯ ಡಿ.ಪಿ.ಆರ್/ಅಂದಾಜು ಪಟ್ಟಿಯನ್ನು ದಿನಾಂಕ:12.10.2020 ರಂದು ಸಲ್ಲಿಸಿರುತ್ತಾರೆ. |
| ಇ) | ಈ ಖಾಸಗಿ ಏಜೆನ್ಸಿಯವರು ಯಾವ ದಿನಾಂಕದಂದು ನಿಗಮಕ್ಕೆ ಡಿ.ಪಿ.ಆರ್ ಅನ್ನು ಸಲ್ಲಿಸಿರುತ್ತಾರೆ; | |
| ಈ) | ಈ ಡಿ.ಪಿಆರ್ ಅನ್ನು ನಿಗಮದ ಮಂಡಳಿ ಸಭೆಯಲ್ಲಿ ಮಂಡಿಸಲಾಗಿದೆಯೇ; ಇದ್ದಲ್ಲಿ, ಅನುಮೋದನೆ ನೀಡಲಾಗಿದೆಯೇ ಅಥವಾ ಮಂಡಳಿ ಸಭೆಯಲ್ಲಿ ಮಂಡಿಸಲಿಲ್ಲವೇ: ಇಲ್ಲವಾದ್ದಲ್ಲಿ ಕಾರಣವೇನು; | ಸದರಿ ಡಿ.ಪಿ.ಆರ್/ಅಂದಾಜು ಪಟ್ಟಿಯನ್ನು ದಿನಾಂಕ: 06.04.2021 ರಂದು ಜರುಗಿದ ನಿಗಮದ ಅಂದಾಜು ಪರಿಶೀಲನಾ ಸಮಿತಿಯ 37ನೇ ಸಭೆಯಲ್ಲಿ ಮಂಡಿಸಲಾಗಿದ್ದು, ಸಮಿತಿಯು ಕೆಲವು ಅಂಶಗಳಿಗೆ ಪಾಲನಾ ವರದಿಯನ್ನು ಮಾರ್ಪಾಡಿತ ಅಂದಾಜು ಪಟ್ಟಿಯೊಂದಿಗೆ ಸಲ್ಲಿಸಲು ಸೂಚಿಸಿರುತ್ತದೆ. ಮಾರ್ಪಾಡಿತ ಅಂದಾಜು ಪಟ್ಟಿ ಸಲ್ಲಿಕೆಯಾದ ಮೇಲೆ ಅಂದಾಜು ಪರಿಶೀಲನಾ ಸಭೆಯಲ್ಲಿ ಮಂಡಿಸಿ ತೀರುವಳಿ ಪಡೆದು ತದನಂತರ ನಿಗಮದ ನಿರ್ದೇಶಕರ ಮಂಡಳಿ ಸಭೆಯಲ್ಲಿ ಮಂಡಿಸುವುದು. |
| ಉ) | ಆಯವ್ಯದಲ್ಲಿ ಘೋಷಣೆ ಮಾಡಿದ ಕಾರ್ಯಕ್ರಮವನ್ನು ಅನುಷ್ಠಾನ ಮಾಡಲು ವಿಳಂಬ ಮಾಡುತ್ತಿರುವುದು ಅಧಿಕಾರಿಗಳ ನಿರ್ಲಕ್ಷವಲ್ಲವೇ; | |
| ಊ) | ಈ ಬ್ಯಾರೇಜ್ ನಿರ್ಮಾಣ ಮಾಡಲು ಯಾವಾಗ ಟೆಂಡರ್ ಕರೆದು ಕಾಮಗಾರಿ ಪ್ರಾರಂಭಿಸಲಾಗುವುದು? (ವಿವರ ನೀಡುವುದು) | ಅಂದಾಜು ಪಟ್ಟಿಯು ಅನುಮೋದನೆಗೊಂಡ ನಂತರ ನಿಯಮಾನುಸಾರ ಟೆಂಡರ್ ಪ್ರಕ್ರಿಯೆ ಕೈಗೊಂಡು ಕಾಮಗಾರಿ ಕೈಗೆತ್ತಿಕೊಳ್ಳಲು ಕ್ರಮ ವಹಿಸಲಾಗುವುದು. |

**ಸಂಖ್ಯೆ: ಜಸಂಇ 08 ಡಬ್ಲ್ಯೂಎಲ್‌ಎ 2022**

**(ಗೋವಿಂದ ಎಂ ಕಾರಜೋಳ)**
**ಜಲಸಂಪನ್ಮೂಲ ಸಚಿವರು**

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 141
2. ಸದಸ್ಯರ ಹೆಸರು : ಶ್ರೀ ಸುಬ್ಬಾರೆಡ್ಡಿ ಎಸ್.ಎನ್.
3. ಉತ್ತರಿಸಬೇಕಾಗಿದ ದಿನಾಂಕ : 15.02.2022
4. ಉತ್ತರಿಸುವ ಸಚಿವರು : ಕಾನೂನು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು.

| | | |
|---|---|---|
| ಅ) | ಹೆಬ್ಬಾಳ-ನಾಗವಾರ ವ್ಯಾಲಿಯ ಕೊಳಚೆ ನೀರನ್ನು ಸಂಸ್ಕರಿಸಿ, ಚಿಕ್ಕಬಳ್ಳಾಪುರ ಜಿಲ್ಲೆಯ ಕೆರೆಗಳಿಗೆ ಹರಿಸುವ ಯೋಜನೆಗೆ ಎಷ್ಟು ಅನುದಾನದಲ್ಲಿ ಕೈಗೆತ್ತಿಕೊಳ್ಳಲು ಅನುಮೋದನೆ ನೀಡಲಾಗಿದೆ; | ಬೆಂಗಳೂರು ನಗರದ ಹೆಬ್ಬಾಳ ನಾಗವಾರ ವ್ಯಾಲಿಯಲ್ಲಿನ ತ್ಯಾಜ್ಯ ನೀರು ಸಂಸ್ಕರಣಾ ಘಟಕದಿಂದ ಎರಡನೇ ಹಂತದಲ್ಲಿ ಸಂಸ್ಕರಿಸಿದ ನೀರನ್ನು ಬೆಂಗಳೂರು ನಗರ ಮತ್ತು ಗ್ರಾಮಾಂತರ ಹಾಗೂ ಚಿಕ್ಕಬಳ್ಳಾಪುರ ಜಿಲ್ಲೆಗಳ ವ್ಯಾಪ್ತಿಯಲ್ಲಿನ 65 ಕೆರೆಗಳಿಗೆ ನೀರು ತುಂಬಿಸುವ ಏತ ನೀರಾವರಿ ಯೋಜನೆಗೆ ರೂ.883.54 ಕೋಟಿಗಳಿಗೆ ಅನುಮೋದನೆ ನೀಡಲಾಗಿದೆ. |
| ಆ) | ಯಾವ ಯಾವ ಸಂಸ್ಥೆಗೆ, ಯಾವ ದಿನಾಂಕದಂದು ಗುತ್ತಿಗೆ ನೀಡಲಾಗಿದೆ. | ಹೆಬ್ಬಾಳ-ನಾಗವಾರ ವ್ಯಾಲಿಯ ಕಾಮಗಾರಿಯನ್ನು ದಿನಾಂಕ 31.3.2019 ರಂದು ಶ್ರೀ.ಸಿ.ಹೆಚ್.ಪೆದ್ದಸುಬ್ಬಯ್ಯ, ಮೇ॥ ಮೇಘಾ ಇಂಜಿನಿಯರಿಂಗ್ ಮತ್ತು ಇನ್ಫ್ರಾಸ್ಟ್ರಕ್ಚರ್ಸ್ ಲಿಮಿಟೆಡ್.ಎಸ್-2 ಟೆಕ್ನೋ ಕ್ರಾಟ್, ಇಂಡಸ್ಟ್ರಿಯಲ್ ಎಸ್ಟೇಟ್, ಬಾಲಾನಗರ, ಹೈದರಾಬಾದ್‌ರವರಿಗೆ ಟೆಂಡರ್ ಮೊತ್ತ ರೂ.947.88 ಕೋಟಿ ಗಳಿಗೆ ಗುತ್ತಿಗೆ ನೀಡಲಾಗಿದೆ. |
| ಇ) | ಈ ಕಾಮಗಾರಿಯನ್ನು ಯಾವ ದಿನಾಂಕದ ಒಳಗೆ ಪೂರ್ಣಗೊಳಿಸಲು ಕಾಲಮಿತಿ ನಿಗದಿ ಮಾಡಲಾಗಿದೆಯೇ; | ಹೆಚ್.ಎನ್.ವ್ಯಾಲಿ ಯೋಜನೆಯನ್ನು ಅನುಷ್ಠಾನಗೊಳಿಸಲು ದಿನಾಂಕ: 31.03.2017 ರಂದು ಗುತ್ತಿಗೆದಾರರಿಗೆ ಕಾರ್ಯದೇಶವನ್ನು ನೀಡಲಾಗಿದ್ದು, ಕಾಮಗಾರಿಯನ್ನು ಪೂರ್ಣಗೊಳಿಸಲು ಮಳೆಗಾಲವು ಸೇರಿದಂತೆ 18 ತಿಂಗಳು ಕಾಲಾವಧಿಯನ್ನು ನೀಡಲಾಗಿರುತ್ತದೆ. ಅದರಂತೆ ದಿನಾಂಕ 30.09.2018ರೊಳಗೆ ಕಾಮಗಾರಿಯನ್ನು ಪೂರ್ಣಗೊಳಿಸಬೇಕಾಗಿರುತ್ತದೆ. |
| ಈ) | ಈ ಕಾಲಮಿತಿಯ ಒಳಗಾಗಿ ಕಾಮಗಾರಿಯನ್ನು ಪೂರ್ಣಗೊಳಿಸಲಾಗಿದೆಯೇ; | ಸದರಿ ಯೋಜನೆಗೆ ಹಾಲಿ 137.07 ಕಿ.ಮೀ ಪೈಪ್‌ಲೈನ್ ಅಳವಡಿಸಲಾಗಿದೆ ಹಾಗೂ 5 ಲಿಫ್ಟ್‌ಗಳ ಪಂಪ್‌ಹೌಸ್ ಕಾಮಗಾರಿ ಪೂರ್ಣಗೊಳಿಸಲಾಗಿದೆ. ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ರವರು ಒದಗಿಸುತ್ತಿರುವ 130.00 ಎಂ.ಎಲ್.ಡಿ ನೀರನ್ನು ಕೆರೆಗಳಿಗೆ ಹರಿಸಲಾಗುತ್ತಿದೆ. 2021ರಲ್ಲಿ ಸೆಪ್ಟೆಂಬರ್, ಅಕ್ಟೋಬರ್ ಮತ್ತು ನವೆಂಬರ್ ಮಾಹೆಯಲ್ಲಿ ಸುರಿದ ಹೆಚ್ಚಿನ ಮಳೆಯಿಂದ ಯೋಜನೆಯ 65 ಕೆರೆಗಳ ಪೈಕಿ ಮಳೆನೀರು ಸೇರಿದಂತೆ 64 ಕೆರೆಗಳಿಗೆ ನೀರನ್ನು ಹರಿಸಲಾಗಿರುತ್ತದೆ.<br><br>ಈ ಯೋಜನೆಯಡಿಯಲ್ಲಿ 65 ಕೆರೆಗಳ ಅಭಿವೃದ್ಧಿ ಕಾಮಗಾರಿಗಳನ್ನು ಅಂದರೆ ಕೆರೆಗಳ ಹೂಳು ಹಾಗೂ ಜಂಗಲ್ ತೆಗೆಯುವುದು, ಏರಿ ಹಾಗೂ ಕೋಡಿ ಅಭಿವೃದ್ಧಿ, ನಾಲೆಗಳ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೆತ್ತಿಕೊಂಡಿದ್ದು, ಕಾಮಗಾರಿಯು |

| | | |
|---|---|---|
| | | ಪ್ರಗತಿಯಲ್ಲಿರುತ್ತದೆ.<br>ಕೆರೆಗಳ ಅಂಗಳದಲ್ಲಿರುವ ಮರಗಳನ್ನು ತೆರವುಗೊಳಿಸುವ ಸಂಬಂಧ ಅರಣ್ಯ ಇಲಾಖೆಗೆ ಸತತವಾಗಿ 3 ವರ್ಷಗಳಿಂದ ಪತ್ರ ವ್ಯವಹಾರ ನಡೆಸಿದ್ದು, ಇದುವರೆಗೂ ಮರಗಳನ್ನು ತೆರವುಗೊಳಿಸಿರುವುದಿಲ್ಲ.<br>ಈ ಯೋಜನೆಯಡಿಯಲ್ಲಿ ಬರುವ ಕೆರೆಗಳು ಹಾಗೂ ಕೋಡಿ ಕಾಲುವೆಗಳ ಸರ್ವೆ ಕಾರ್ಯ ಕೈಗೊಂಡು ಗಡಿ ಗುರುತಿಸಿ ನಕ್ಷೆ ನೀಡಲು ಕೋರಿ ಸಂಬಂಧಿಸಿದ ತಹಶೀಲ್ದಾರರು ಮತ್ತು ಭೂದಾಖಲೆಗಳ ನಿರ್ದೇಶಕರು ರವರಿಗೆ ಸತತವಾಗಿ ಪತ್ರ ಬರೆಯಲಾಗಿದ್ದು, ಸರ್ವೆ ಕಾರ್ಯ ಪೂರ್ಣ ಪ್ರಮಾಣದಲ್ಲಿ ಕೈಗೊಂಡಿರುವುದಿಲ್ಲ. ಆದ್ದರಿಂದ ಕೆರೆಗಳ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ವಿಳಂಬವಾಗಿರುತ್ತದೆ.<br>ರೈಸಿಂಗ್ ಮೇನ್ ಪೈಪ್‌ಲೈನ್ ಅಳವಡಿಸಲು ಇತರ ಇಲಾಖೆಗಳಿಂದ (Railway Department, NHAI, PWD ಮತ್ತು PRED) ಅನುಮತಿಯು ನಿಗದಿತ ಅವಧಿಯೊಳಗೆ ದೊರೆಯದೇ ಇರುವುದರಿಂದ ಕಾಮಗಾರಿ ನಿಗಧಿತ ಅವಧಿಯೊಳಗೆ ನಿರ್ವಹಿಸಲು ಸಹ ವಿಳಂಬವಾಗಿರುತ್ತದೆ. |
| ಉ) | ಈ ಕಾಲಮಿತಿ ವಿಸ್ತರಣೆಗೆ ಸರ್ಕಾರದಿಂದ ಅನುಮತಿ ಪಡೆಯಲಾಗಿದೆಯೇ; | ಸದರಿ ಯೋಜನೆಯ ಕಾಲಾವಧಿ ವಿಸ್ತರಣೆ ಪ್ರಸ್ತಾವನೆಯು ಪರಿಶೀಲನೆಯಲ್ಲಿರುತ್ತದೆ. |

**ಕಡತ ಸಂಖ್ಯೆ: ಎಂಐಡಿ 19 ಎಲ್‌ಎಕ್ಯೂ 2022**

**(ಜೆ.ಸಿ ಮಾಧುಸ್ವಾಮಿ)**
ಕಾನೂನು ಸಂಸದೀಯ ವ್ಯವಹಾರಗಳು ಮತ್ತು
ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು.

## ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 142 |
| 2 | ಸದಸ್ಯರ ಹೆಸರು | : | ಶ್ರೀ ಸತೀಶ್ ಎಲ್. ಜಾರಕಿಹೊಳಿ (ಯಮಕನಮರಡಿ) |
| 3 | ಉತ್ತರಿಸುವ ದಿನಾಂಕ | : | 15.02.2022 |
| 4 | ಉತ್ತರಿಸುವ ಸಚಿವರು | : | ಗೃಹ ಸಚಿವರು |

| ಪ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯ ಪೊಲೀಸ್ ಇಲಾಖೆಯಲ್ಲಿ ಎಷ್ಟು ಆಂತರಿಕ ವಿಭಾಗಗಳಿವೆ; ಅವುಗಳ ವಿವರ ನೀಡುವುದು; | ಅನುಬಂಧ-'ಅ' ರಲ್ಲಿ ಇರಿಸಲಾಗಿದೆ. |
| ಆ) | ವಿಭಾಗವಾರು ಮಂಜೂರಾದ ಹುದ್ದೆಗಳು ಎಷ್ಟು; | ಅನುಬಂಧ-'ಆ' ರಲ್ಲಿ ಇರಿಸಲಾಗಿದೆ. |
| ಇ) | ಪ್ರಸ್ತುತ ಖಾಲಿ ಇರುವ ಹುದ್ದೆಗಳು ಎಷ್ಟು; | |
| ಈ) | ಪ್ರಸ್ತುತ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮವೇನು? | ಪ್ರಸ್ತುತ ಪೊಲೀಸ್ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಕೆಳಕಂಡಂತೆ ಕ್ರಮ ವಹಿಸಲಾಗುತ್ತಿದೆ:<br><br>**ಪೊಲೀಸ್ ಸಬ್-ಇನ್ಸ್‌ಪೆಕ್ಟರ್:**<br>2021-22ನೇ ಸಾಲಿನಲ್ಲಿ 1171 ಪೊಲೀಸ್ ಸಬ್-ಇನ್ಸ್‌ಪೆಕ್ಟರ್ ಹುದ್ದೆಗಳಿಗೆ ಸರ್ಕಾರವು ಮಂಜೂರಾತಿ ನೀಡಿದ್ದು, ಸದರಿ ಹುದ್ದೆಗಳಲ್ಲಿ 686 ಹುದ್ದೆಗಳಿಗೆ ಆಯ್ಕೆ ಪಟ್ಟಿ ಪ್ರಕಟಿಸಲಾಗಿದ್ದು, ವೈದ್ಯಕೀಯ ಪರೀಕ್ಷೆ ಮತ್ತು ದಾಖಲಾತಿಗಳ ಪರೀಕ್ಷೆ ನಡೆಸುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ.<br><br>➢ ಉಳಿದಂತೆ 402 ಹುದ್ದೆಗಳಿಗೆ ಶೀಘ್ರದಲ್ಲಿ ಲಿಖಿತ ಪರೀಕ್ಷೆ ನಡೆಸುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. ಹಾಗೂ 20 ಪಿ.ಎಸ್.ಐ. (ಕ್ರೀಡೆ) ಹುದ್ದೆಗಳ ಅರ್ಹ ಅಭ್ಯರ್ಥಿಗಳ ಆಯ್ಕೆ ಪಟ್ಟಿಯನ್ನು ಪ್ರಕಟಿಸುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. 63 ಕೆ.ಎಸ್.ಐ.ಎಸ್.ಎಫ್ ಹುದ್ದೆಗಳಿಗೆ ಅಧಿಸೂಚನೆಯನ್ನು ಹೊರಡಿಸಲಾಗಿರುತ್ತದೆ.<br><br>**ಪೊಲೀಸ್ ಕಾನ್ಸ್‌ಟೇಬಲ್:**<br>2021-22ನೇ ಸಾಲಿನಲ್ಲಿ 4000 ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಗಳಿಗೆ ಸರ್ಕಾರವು ಮಂಜೂರಾತಿ |

| | | |
|---|---|---|
| | | ನೀಡಿದ್ದು, ಸದರಿ ಹುದ್ದೆಗಳಲ್ಲಿ 3920 ಹುದ್ದೆಗಳಿಗೆ 1:1ರ ಪ್ರಮಾಣದ ಆಯ್ಕೆ ಪಟ್ಟಿಯನ್ನು ತಯಾರಿಸಿ ಘಟಕಾಧಿಕಾರಿಗಳಿಗೆ ಕಳುಹಿಸಿಕೊಡಲಾಗಿರುತ್ತದೆ ಹಾಗೂ ಉಳಿದ 80 ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳ ಅರ್ಹತಾ ಪಟ್ಟಿಯನ್ನು ತಯಾರಿಸಿದ್ದು, ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ.<br>➢ ಇನ್ನುಳಿದಂತೆ ಮುಂಬಡ್ತಿ ಹುದ್ದೆಗಳನ್ನು ಆಯಾ ವೃಂದದವರಿಗೆ ಮುಂಬಡ್ತಿ ನೀಡುವ ಮೂಲಕ ಭರ್ತಿ ಮಾಡುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. |

ಸಂಖ್ಯೆ: ಒಇ 42 ಪಿಇಜಿ 2022

(ಆರಗ ಜ್ಞಾನೇಂದ್ರ)
ಗೃಹ ಸಚಿವರು

## ಅನುಬಂಧ–ಅ

**ಪೊಲೀಸ್ ಇಲಾಖೆಯ ಆಂತರಿಕ ವಿಭಾಗಗಳ ವಿವರ:**

| ಕ್ರಸಂ | ಘಟಕ |
|---|---|
| 1. | ಸಿ.ಐ.ಡಿ ಘಟಕ |
| 2. | ರಾಜ್ಯ ಗುಪ್ತವಾರ್ತೆ |
| 3. | ಆಂತರಿಕ ಭದ್ರತಾ ವಿಭಾಗ |
| 4. | ಕಡಲು ಕಾವಲು ಪಡೆ |
| 5. | ನಕ್ಸಲ್ ನಿಗ್ರಹ ದಳ |
| 6. | ನೇಮಕಾತಿ |
| 7. | ತರಬೇತಿ |
| 8. | ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ |
| 9. | ರಾಜ್ಯ ಅಪರಾಧ ದಾಖಲಾತಿ ವಿಭಾಗ |
| 10. | ಕರ್ನಾಟಕ ಲೋಕಾಯುಕ್ತ |
| 11. | ಭ್ರಷ್ಟಾಚಾರ ನಿಗ್ರಹ ದಳ |
| 12. | ಕೆ.ಎಸ್.ಆರ್.ಪಿ |
| 13. | ಕೆ.ಎಸ್.ಐ.ಎಸ್.ಎಫ್ |
| 14. | ಬೆರಳು ಮುದ್ರೆ ಸಂಗ್ರಹಾಲಯ |
| 15. | ಪೊಲೀಸ್ ನಿಸ್ತಂತು ಘಟಕ |
| 16. | ನ್ಯಾಯ ವಿಜ್ಞಾನ ಪ್ರಯೋಗಾಲಯ |
| 17. | ಕರ್ನಾಟಕ ರಾಜ್ಯ ರೈಲ್ವೇ ಪೊಲೀಸ್ |
| 18. | ಕೆ.ಎ.ಆರ್.ಪಿ ಮೌಂಟೆಡ್ ಕಂಪನಿ |

## ಅನುಬಂಧ–ಆ

### ವಿಭಾಗವಾರು ಮಂಜೂರಾದ ಮತ್ತು ಖಾಲಿಯಿರುವ ಹುದ್ದೆಗಳ ವಿವರ:

| ಕ್ರ.ಸಂ | ಘಟಕ | ಮಂಜೂರಾದ ಹುದ್ದೆಗಳು | ಖಾಲಿಯಿರುವ ಹುದ್ದೆಗಳು |
|---|---|---|---|
| 1. | ಸಿ.ಐ.ಡಿ ಘಟಕ | 875 | 303 |
| 2. | ರಾಜ್ಯ ಗುಪ್ತವಾರ್ತೆ | 1429 | 420 |
| 3. | ಆಂತರಿಕ ಭದ್ರತಾ ವಿಭಾಗ | 645 | 195 |
| 4. | ಕಡಲು ಕಾವಲು ಪಡೆ | 542 | 269 |
| 5. | ನಕ್ಸಲ್ ನಿಗ್ರಹ ದಳ | 668 | 210 |
| 6. | ನೇಮಕಾತಿ | 21 | 05 |
| 7. | ತರಬೇತಿ | 555 | 109 |
| 8. | ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ | 343 | 87 |
| 9. | ರಾಜ್ಯ ಅಪರಾಧ ದಾಖಲಾತಿ ವಿಭಾಗ | 84 | 14 |
| 10. | ಕರ್ನಾಟಕ ಲೋಕಾಯುಕ್ತ | 734 | 242 |
| 11. | ಭ್ರಷ್ಟಾಚಾರ ನಿಗ್ರಹ ದಳ | 541 | 127 |
| 12. | ಕೆ.ಎಸ್.ಆರ್.ಪಿ | 13608 | 2439 |
| 13. | ಕೆ.ಎಸ್.ಐ.ಎಸ್.ಎಫ್ | 3178 | 879 |
| 14. | ಬೆರಳು ಮುದ್ರೆ ಸಂಗ್ರಹಾಲಯ | 159 | 27 |
| 15. | ಪೊಲೀಸ್ ನಿಸ್ತಂತು ಘಟಕ | 1562 | 382 |
| 16. | ನ್ಯಾಯ ವಿಜ್ಞಾನ ಪ್ರಯೋಗಾಲಯ | 785 | 471 |
| 17. | ಕರ್ನಾಟಕ ರಾಜ್ಯ ರೈಲ್ವೇ ಪೊಲೀಸ್ | 942 | 134 |
| 18. | ಕೆ.ಎ.ಆರ್.ಪಿ ಮೌಂಟೆಡ್ ಕಂಪನಿ | 141 | 29 |

Click here for Annexurers

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 143

ವಿಧಾನ ಸದಸ್ಯರ ಹೆಸರು : ಶ್ರೀ ಸತೀಶ್ ಎಲ್. ಜಾರಕಿಹೊಳಿ (ಯಮಕನಮರಡಿ)

ಉತ್ತರಿಸಬೇಕಾದ ದಿನಾಂಕ : 15.02.2022.

ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ. ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ನೀರಾವರಿ ಇಲಾಖೆಯ ಪ್ರಸಕ್ತ ವರ್ಷದ ಒಟ್ಟು ಆಯ–ವ್ಯಯದ ಹಣವನ್ನು ಈವರೆಗೆ ಯಾವ ಯಾವ ಕಾಮಗಾರಿಗಳಿಗೆ ಖರ್ಚು ಮಾಡಿದೆ; | ಜಲ ಸಂಪನ್ಮೂಲ ಇಲಾಖೆ (ಭಾರಿ ಮತ್ತು ಮಧ್ಯಮ ನೀರಾವರಿ)ಯ ಅಡಿಯಲ್ಲಿನ ನಿಗಮಗಳ ವ್ಯಾಪ್ತಿಯಲ್ಲಿನ ಯೋಜನೆ/ಕಾಮಗಾರಿಗಳ ನಿಗಮವಾರು ವಿವರಗಳನ್ನು ಅನುಬಂಧ–1, 2, 3 & 4ರಲ್ಲಿ ನೀಡಲಾಗಿದೆ. |
| ಆ) | ಪ್ರಸಕ್ತ ಸಾಲಿನಲ್ಲಿ ಎಸ್.ಸಿ.ಎಸ್.ಪಿ/ಟಿ.ಎಸ.ಪಿ ಯೋಜನೆಯಡಿ ಕಾಯ್ದಿರಿಸಿದ ಅನುದಾನದ ಹಣ ಎಷ್ಟು? ಖರ್ಚಾದ ಅನುದಾನದ ಹಣ ಎಷ್ಟು; | 2021–22ನೇ ಸಾಲಿನಲ್ಲಿ ಜಲ ಸಂಪನ್ಮೂಲ ಇಲಾಖೆ (ಭಾರಿ ಮತ್ತು ಮಧ್ಯಮ ನೀರಾವರಿ)ಗೆ ಎಸ್.ಸಿ.ಪಿ. ಯೋಜನೆಯಡಿ ರೂ.1017.93 ಕೋಟಿ ಅನುದಾನ ಹಂಚಿಕೆಯಾಗಿದ್ದು, ಜನವರಿ–2022ರ ಅಂತ್ಯಕ್ಕೆ ರೂ.539.06 ಕೋಟಿ ವೆಚ್ಚ ಭರಿಸಲಾಗಿದೆ ಹಾಗೂ ಟಿ.ಎಸ್.ಪಿ ಯೋಜನೆಯಡಿ ರೂ.741.11 ಕೋಟಿ ಅನುದಾನ ಹಂಚಿಕೆಯಾಗಿದ್ದು, ಜನವರಿ–2022ರ ಅಂತ್ಯಕ್ಕೆ ರೂ.370.50 ಕೊಟಿ ವೆಚ್ಚ ಭರಿಸಲಾಗಿದೆ. |
| ಇ) | ನೀರಾವರಿ ಇಲಾಖೆಯು ತನ್ನ ಕಾರ್ಯವ್ಯಾಪ್ತಿಯನ್ನು ಹೊರತುಪಡಿಸಿ (ನಗರ ಪ್ರದೇಶ) ಬೇರೆ ಉದ್ದೇಶಗಳಿಗಾಗಿ ಹಣ ಬಳಕೆ ಮಾಡಿದೆಯೇ? (ವಿವರ ನೀಡುವುದು) | ನಿಗಮಗಳ ಕಾರ್ಯವ್ಯಾಪ್ತಿಗೆ ಒಳಪಡುವ ಯೋಜನೆಗಳ ಅಚ್ಚುಕಟ್ಟು ಪ್ರದೇಶದಲ್ಲಿನ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ನಿಗಮಗಳಿಗೆ ಹಂಚಿಕೆಯಾದ ಅನುದಾನವನ್ನು ಬಳಕೆ ಮಾಡಲಾಗುತ್ತಿದೆ. |

ಜಸಂಇ 08 ಎಂಎಲ್ಎ 2022

(ಗೋವಿಂದ ಎಂ. ಕಾರಜೋಳ)
ಜಲಸಂಪನ್ಮೂಲ ಸಚಿವರು

661282

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 144
2. ಸದಸ್ಯರ ಹೆಸರು : ಶ್ರೀ ಸತೀಶ್ ಎಲ್.ಜಾರಕಿಹೊಳಿ (ಯಮಕನಮರಡಿ)
3. ಉತ್ತರಿಸಬೇಕಾದ ದಿನಾಂಕ : 15.02.2022
4. ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

| ಪ್ರಶ್ನೆ | ಉತ್ತರ |
|---|---|
| ಅ) ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯಲ್ಲಿ ಹೂಡಿಕೆ ಮಾಡಿರುವ ಬಂಡವಾಳ ಎಷ್ಟು; | ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯಲ್ಲಿ ದಿನಾಂಕ 31.12.2021ರ ಅಂತ್ಯಕ್ಕೆ ರೂ.895.39 ಕೋಟಿ ರೂ.ಗಳ ಷೇರು ಬಂಡವಾಳ ಹೂಡಿಕೆಯಾಗಿರುತ್ತದೆ. |
| ಆ) ಈ ಬಂಡವಾಳವನ್ನು ಯಾವ ಯಾವ ಮೂಲಗಳಿಂದ ಸಂಗ್ರಹಿಸಲಾಗುತ್ತಿದೆ: | ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯಲ್ಲಿ ದಿನಾಂಕ 31.12.2021ರ ಅಂತ್ಯಕ್ಕೆ ಹೂಡಿಕೆಯಾಗಿರುವ ಸಾಮಾನ್ಯ ಷೇರು ಬಂಡವಾಳದ ವಿವರ ಈ ಕೆಳಕಂಡಂತಿದೆ: (ಮೊತ್ತ ಕೋಟಿ ರೂ.ಗಳಲ್ಲಿ) |

| ಕ್ರ.ಸಂ. | ವಿವರಗಳು | ಮೊತ್ತ |
|---|---|---|
| 01. | ಕರ್ನಾಟಕ ರಾಜ್ಯ ಸರ್ಕಾರ | 856.75 |
| 02. | ಭಾರತೀಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ | 38.38 |
| 03. | ಭಾರತೀಯ ಜೀವ ವಿಮಾ ನಿಗಮ | 0.16 |
| 04. | ಸಾರ್ವಜನಿಕ ಸ್ವಾಮ್ಯದ ಬ್ಯಾಂಕುಗಳು | 0.08 |
| 05. | ಇತರೆ ವ್ಯಕ್ತಿಗಳು | 0.02 |
| | **ಒಟ್ಟು ಮೊತ್ತ** | **895.39** |

| | |
|---|---|
| ಇ) ಸಂಗ್ರಹಣೆ ಮಾಡುವ ಹಣಕ್ಕೆ ಎಷ್ಟು ಬಡ್ಡಿ ನೀಡಲಾಗುತ್ತಿದೆ? | ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯಲ್ಲಿ ಮೇಲೆ ತಿಳಿಸಿರುವ ಹೂಡಿಕೆಯು ಸಾಮಾನ್ಯ ಷೇರು ಬಂಡವಾಳ ವಾಗಿರುವುದರಿಂದ ಯಾವುದೇ ಬಡ್ಡಿಯನ್ನು ನೀಡಲಾಗುತ್ತಿಲ್ಲ. |

ಸಂಖ್ಯೆ: ಆಇ 14 ಬಿಎಫ್ ಸಿ 2022

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

## ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 145
2. ಸದಸ್ಯರ ಹೆಸರು : ಶ್ರೀ ಸತೀಶ್ ಎಲ್.ಜಾರಕಿಹೊಳಿ (ಯಮಕನಮರಡಿ)
3. ಉತ್ತರಿಸಬೇಕಾದ ದಿನಾಂಕ : 15.02.2022
4. ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

| ಪ್ರಶ್ನೆ | ಉತ್ತರ |
|---|---|
| ಅ) ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ (KSFC) ಯನ್ನು ಯಾವಾಗ ಪ್ರಾರಂಭಿಸಲಾಯಿತು. | ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ (KSFC) ಯನ್ನು 1959 ರಲ್ಲಿ ರಾಜ್ಯ ಹಣಕಾಸು ಸಂಸ್ಥೆ ಕಾಯ್ದೆ 1951 ರ ಪ್ರಕಾರ ಪ್ರಾರಂಭಿಸಲಾಯಿತು. |
| ಆ) ಈ ಸಂಸ್ಥೆಯ ರಚನೆ (Structure) ಯಾವ ರೀತಿ ಇದೆ; | ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ರಚನೆ (Structure) ಯನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ. |
| ಇ) ಈ ಸಂಸ್ಥೆಯಲ್ಲಿ ಮಂಜೂರಾದ ಒಟ್ಟು ಹುದ್ದೆಗಳು ಎಷ್ಟು; (ಪ್ರವರ್ಗವಾರು ವಿವರ ನೀಡುವುದು) | ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯಲ್ಲಿ ಮಂಜೂರಾದ ಹುದ್ದೆಗಳು ಒಟ್ಟು 1138 (ದಿನಾಂಕ 01.02.2022 ರಂತೆ). ಈ ಹುದ್ದೆಗಳ ವಿವರಗಳನ್ನು **ಅನುಬಂಧ**-2 ರಲ್ಲಿ ನೀಡಲಾಗಿದೆ. |
| ಈ) ಪ್ರಸ್ತುತ ಖಾಲಿ ಇರುವ ಹುದ್ದೆಗಳ ಸಂಖ್ಯೆ ಎಷ್ಟು? (ವೃಂದವಾರು ವಿವರ ನೀಡುವುದು) | ಸಂಸ್ಥೆಯಲ್ಲಿ ಪ್ರಸ್ತುತ 542 ಹುದ್ದೆಗಳು ಖಾಲಿ ಇರುತ್ತವೆ. ವೃಂದವಾರು ಪಟ್ಟಿಯನ್ನು ಅನುಬಂಧ - 2 ರಲ್ಲಿ ನೀಡಲಾಗಿದೆ. |

ಸಂಖ್ಯೆ: ಆಇ 15 ಬಿಎಫ್ ಸಿ 2022

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

ಅನುಬಂಧ - 1

# KARNATAKA STATE FINANCIAL CORPORATION

## *ORGANISATION CHART*



## KARNATAKA STATE FINANCIAL CORPORATION

**Manpower Authorisation Position Including Posts Earmarked for Hydeabad region as on 11-Feb-2022**

| Designation | Sanction | | | Vacant | | |
|---|---|---|---|---|---|---|
| | General | Hyd-Kar | Total | General | Hyd-Kar | Total |
| MANAGING DIR. | 1 | 0 | 1 | 0 | 0 | 0 |
| EXECUTIVE DIRECTOR | 2 | 0 | 2 | 2 | 0 | 2 |
| GENERAL MANAGER | 5 | 0 | 5 | 2 | 0 | 2 |
| DY. GEN. MANAGER | 16 | 0 | 16 | 10 | 0 | 10 |
| DY.GENERAL MANAGER(LEGAL) | 1 | 0 | 1 | 1 | 0 | 1 |
| ASST.GEN.MANAGER | 25 | 0 | 25 | 4 | 0 | 4 |
| MANAGER(F&A) | 32 | 0 | 32 | 18 | 0 | 18 |
| MANAGER(TECH) | 33 | 0 | 33 | 13 | 0 | 13 |
| MANAGER(LEGAL) | 12 | 0 | 12 | 8 | 0 | 8 |
| MANAGER(E&P) | 8 | 0 | 8 | 3 | 0 | 3 |
| DY.MANAGER(F&A) | 112 | 10 | 122 | 84 | 5 | 89 |
| DY.MANAGER(TECH) | 93 | 11 | 104 | 60 | 11 | 71 |
| DY.MANAGER(LEGAL) | 29 | 7 | 36 | 23 | 6 | 29 |
| DY.MANAGER(E&P) | 20 | 4 | 24 | 10 | 3 | 13 |
| DY.MANAGER(PS) | 2 | 0 | 2 | 0 | 0 | 0 |
| DY.MGR(LIBRN) | 1 | 0 | 1 | 1 | 0 | 1 |
| DY.MGR(T-SUP) | 0 | 0 | 0 | -1 | 0 | -1 |
| MANAGER(SYSTEM) | 1 | 0 | 1 | 1 | 0 | 1 |
| **Sub - Total** | 393 | 32 | 425 | 239 | 25 | 264 |
| ASST.MANAGER(PA) | 49 | 7 | 56 | 12 | 2 | 14 |
| ASST.MANAGER | 108 | 14 | 122 | 41 | 4 | 45 |
| ASST.MANAGER(LIBRARY) | 1 | 0 | 1 | 1 | 0 | 1 |
| ASSISTANT | 192 | 23 | 215 | 55 | 14 | 69 |
| STENO | 76 | 9 | 85 | 28 | 2 | 30 |
| RECEPTIONIST | 5 | 0 | 5 | 4 | 0 | 4 |
| ASSISTANT(SUPERNUMERARY) | 0 | 0 | 0 | -2 | 0 | -2 |
| TYPIST | 41 | 7 | 48 | 31 | 4 | 35 |
| CLERK | 26 | 2 | 28 | 3 | 0 | 3 |
| CLERK (SUPERNUMERARY) | 0 | 0 | 0 | -15 | -6 | -21 |
| **Sub - Total** | 498 | 62 | 560 | 158 | 20 | 178 |
| SR.DRIVER | 15 | 0 | 15 | 2 | 0 | 2 |
| SR.DAFEDAR | 8 | 2 | 10 | 5 | 2 | 7 |
| DAFEDAR | 19 | 1 | 20 | 2 | 0 | 2 |
| DRIVER | 49 | 9 | 58 | 38 | 5 | 43 |
| PEON | 41 | 9 | 50 | 37 | 9 | 46 |
| **Sub - Total** | 132 | 21 | 153 | 84 | 16 | 100 |
| **Total** | **1023** | **115** | **1138** | **481** | **61** | **542** |

# ಕರ್ನಾಟಕ ವಿಧಾನ ಸಭೆ

| | | |
|---|---|---|
| 1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 146 |
| 2) ಮಾನ್ಯ ಸದಸ್ಯರ ಹೆಸರು | : | ಡಾ|| ಅವಿನಾಶ್ ಉಮೇಶ್ ಜಾಧವ್ (ಚಿಂಚೋಳಿ) |
| 3) ಉತ್ತರಿಸುವ ದಿನಾಂಕ | : | 15.02.2022 |
| 4) ಉತ್ತರಿಸುವ ಸಚಿವರು | : | ಗೃಹ ಸಚಿವರು |

*****

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಕಲಬುರಗಿ ಜಿಲ್ಲೆಯ ಚಿಂಚೋಳಿ ತಾಲ್ಲೂಕಿನ ಮಿರಿಯಾಣ ಪೊಲೀಸ್ ಠಾಣೆಯ ಸಿಬ್ಬಂದಿಗಳಿಗೆ ವಸತಿ ಗೃಹ ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ. | ಹಾಗಿದ್ದಲ್ಲಿ, ಸರ್ಕಾರ ವಸತಿ ಗೃಹ ನಿರ್ಮಾಣಕ್ಕೆ ಯಾವ ಕ್ರಮ ಕೈಗೊಂಡಿದೆ? | ಕಲಬುರಗಿ ಜಿಲ್ಲೆಯ ಚಿಂಚೋಳಿ ತಾಲ್ಲೂಕಿನ ಮಿರಿಯಾಣ ಪೊಲೀಸ್ ಠಾಣೆಯ ಪೊಲೀಸ್ ಅಧಿಕಾರಿ ರವರಿಗೆ 01 ಮತ್ತು ಸಿಬ್ಬಂದಿಗಳಿಗೆ 32 ಒಟ್ಟು 33 ಹೊಸ ಪೊಲೀಸ್ ವಸತಿ ಗೃಹಗಳನ್ನು ನಿರ್ಮಿಸಲು ಅಂದಾಜು ವೆಚ್ಚ ರೂ.9,41,30,000/- ಗಳಿಗೆ ಅನುದಾನ ಬಿಡುಗಡೆ ಮಾಡುವಂತೆ ಪೊಲೀಸ್ ಮಹಾನಿರೀಕ್ಷಕರು, ಈಶಾನ್ಯ ವಲಯ ಕಲಬುರಗಿ ರವರಿಂದ ಪ್ರಸ್ತಾವನೆ ಸ್ವೀಕೃತಗೊಂಡಿದ್ದು, ಇಲಾಖೆಯ ಮಟ್ಟದಲ್ಲಿ ಪರಿಶೀಲಿಸಲಾಗುತ್ತಿದೆ. ಈ ಬಗ್ಗೆ ಅನುದಾನದ ಲಭ್ಯತೆಯ ಮೇಲೆ ಪರಿಶೀಲಿಸಿ ಕ್ರಮಕೈಗೊಳ್ಳಲಾಗುವುದು. |

**ಸಂಖ್ಯೆ: ಹೆಚ್‌ಡಿ 09 ಪಿಬಿಎಲ್ 2022**

**(ಆರಗ ಜ್ಞಾನೇಂದ್ರ)**
ಗೃಹ ಸಚಿವರು



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 147 |
| ಮಾನ್ಯ ಸದಸ್ಯರ ಹೆಸರು | ಶ್ರೀ ಅವಿನಾಶ್ ಉಮೇಶ್ ಜಾಧವ್ (ಚಿಂಚೋಳಿ) |
| ಉತ್ತರಿಸಬೇಕಾದ ದಿನಾಂಕ | 15/02/2022 |
| ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಅಸಂಘಟಿತ ಕಾರ್ಮಿಕರಿಗೆ ಇ-ಶ್ರಮ್ ಕಾರ್ಡು ಒದಗಿಸಲು ಸರ್ಕಾರ ಯಾವ ಯಾವ ಕ್ರಮಗಳನ್ನು ಕೈಗೊಂಡಿದೆ; ಹಾಗಿದ್ದಲ್ಲಿ, ಗ್ರಾಮೀಣ ಮಟ್ಟದಲ್ಲಿ ವಾಸಿಸುತ್ತಿರುವ ಅಸಂಘಟಿತ ಕಾರ್ಮಿಕರು ಈ ಕಾರ್ಡ್‌ನ್ನು ಪಡೆಯಲು ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದಕ್ಕೆ ಸರ್ಕಾರ ಕೈಗೊಂಡ ಕ್ರಮಗಳೇನು. | ಕೇಂದ್ರ ಸರ್ಕಾರವು ಅಸಂಘಟಿತ ಕಾರ್ಮಿಕರ ಸಮಗ್ರ ರಾಷ್ಟ್ರೀಯ ದತ್ತಾಂಶ (NDUW-National Database for Unorganised Worker) ಕ್ರೋಢೀಕರಿಸಲು ಉದ್ದೇಶಿಸಿದ್ದು, ಎಲ್ಲಾ ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶ, ಸಾಮಾನ್ಯ ಸೇವಾ ಕೇಂದ್ರಗಳ (CSC) ಸಹಯೋಗದೊಂದಿಗೆ ದಿನಾಂಕ:26-08-2021 ರಿಂದ ಸುಮಾರು 379 ವರ್ಗಗಳ ಅಸಂಘಟಿತ ವರ್ಗಗಳ ಕಾರ್ಮಿಕರನ್ನು ಇ-ಶ್ರಮ್ ಪೋರ್ಟಲ್ ಮೂಲಕ ನೋಂದಾಯಿಸಲಾಗುತ್ತಿದೆ. ಈ ವಿಷಯವು ರಾಜ್ಯ ಸರ್ಕಾರದ ಗಮನಕ್ಕೆ ಬಂದಿರುತ್ತದೆ. ರಾಜ್ಯದಲ್ಲಿ ಸದರಿ ನೋಂದಣಿ ಕಾರ್ಯಕ್ಕೆ ದಿನಾಂಕ:27-08-2021ರಂದು ಸನ್ಮಾನ್ಯ ಮುಖ್ಯ ಮಂತ್ರಿಗಳು ಚಾಲನೆ ನೀಡಿರುತ್ತಾರೆ. ಇದು ಕೇಂದ್ರ ಸರ್ಕಾರದ ಕಾರ್ಯಕ್ರಮವಾಗಿದ್ದು, ರಾಜ್ಯದಲ್ಲಿ ಇದರ ಜಾರಿಗಾಗಿ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ.<br>➢ ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ರಾಜ್ಯ ಮಟ್ಟದ ಮೇಲುಸ್ತುವಾರಿ ಸಮಿತಿ ಹಾಗೂ ಆಯಾ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಅನುಷ್ಠಾನ ಸಮಿತಿಯನ್ನು ರಚಿಸಲಾಗಿದೆ.<br>➢ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಎಲ್ಲಾ ಜಿಲ್ಲಾ ಮಟ್ಟದ ಅಧಿಕಾರಿಗಳೊಂದಿಗೆ "ಜಿಲ್ಲಾ ಮಟ್ಟದ ಅನುಷ್ಠಾನ ಸಮಿತಿ" |

| | | | |
|---|---|---|---|
| | | | ಸಭೆಯನ್ನು ನಡೆಸಿ ಕಾರ್ಯಕ್ರಮ ಜಾರಿಗೊಳಿಸುವ ಕುರಿತು ಚರ್ಚಿಸಿ ನೋಂದಣಿಯನ್ನು ನಡೆಸಲಾಗುತ್ತಿದೆ.<br>➢ ರಾಜ್ಯ ಸರ್ಕಾರದಿಂದ ಕನ್ನಡ, ಇಂಗ್ಲೀಷ್ ಉರ್ದು ದಿನಪತ್ರಿಕೆಗಳಲ್ಲಿ ಜಾಹೀರಾತನ್ನು ನೀಡಲಾಗಿರುತ್ತದೆ.<br>➢ ಸಾಮಾನ್ಯ ಸೇವಾ ಕೇಂದ್ರ (CSC) ಇವರು ಕಾರ್ಯಕ್ರಮದ ನೋಡಲ್ ಏಜೆನ್ಸಿಯಾಗಿದ್ದು, ರಾಜ್ಯದಾದ್ಯಂತ ಗ್ರಾಮಾಂತರ ಹಾಗೂ ನಗರ ಮಟ್ಟದಲ್ಲಿ ನೋಂದಣಿ ಕ್ಯಾಂಪ್‌ಗಳನ್ನು ನಡೆಸಲಾಗುತ್ತಿದೆ.<br>➢ ಇ-ಶ್ರಮ್ ಪೋರ್ಟಲ್‌ನಲ್ಲಿ ಅಸಂಘಟಿತ ಕಾರ್ಮಿಕರನ್ನು ನೋಂದಾಯಿಸಲು ಕಾರ್ಮಿಕ ಇಲಾಖೆಯ ಎಲ್ಲಾ ಜಿಲ್ಲಾ ಕಾರ್ಮಿಕ ಅಧಿಕಾರಿಗಳಿಗೆ ಲಾಗಿನ್ ವಿವರಗಳನ್ನು ನೀಡಲಾಗಿದ್ದು, ರಾಜ್ಯದಾದ್ಯಂತ ನೋಂದಣಿ ಕ್ಯಾಂಪ್‌ಗಳನ್ನು ನಡೆಸಲಾಗುತ್ತಿದೆ.<br>➢ ಅಸಂಘಟಿತ ಕಾರ್ಮಿಕರನ್ನೊಳಗೊಂಡ ಪ್ರಮುಖ ಇಲಾಖೆಗಳಾದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಸಾರಿಗೆ ಇಲಾಖೆ, ಕೃಷಿ ಇಲಾಖೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಹಾಗೂ ಇತರೆ ಇಲಾಖೆಗಳೊಂದಿಗೆ ಸಭೆಯನ್ನು ನಡೆಸಿ ಇ-ಶ್ರಮ್ ನೋಂದಣಿ ಕುರಿತು ಮಾಹಿತಿ ನೀಡಲಾಗಿದೆ.<br>➢ ಕೇಂದ್ರ ಸರ್ಕಾರವು ಇ-ಶ್ರಮ್ ಪೋರ್ಟಲ್‌ನಡಿ ನೋಂದಣಿಗೆ 379 ಅಸಂಘಟಿತ ವರ್ಗಗಳ ಕಾರ್ಮಿಕರನ್ನು ಗುರುತಿಸಿದ್ದು, ಸದರಿ ಕಾರ್ಮಿಕರನ್ನು ನೋಂದಾಯಿಸಲು ಕಾರ್ಮಿಕರಿಗೆ ಸೂಕ್ತ ಅರಿವು ಮೂಡಿಸಲು ಕ್ರಮ ಕೈಗೊಳ್ಳುವಂತೆ ಇಲಾಖೆಯ ಅಧಿಕಾರಿಗಳಿಗೆ ಸೂಚಿಸಲಾಗಿದೆ. |

| | | |
|---|---|---|
| | | ➢ ಕಾಲಕಾಲಕ್ಕೆ ಕಾರ್ಮಿಕ ಸಚಿವರ ಅಧ್ಯಕ್ಷತೆಯಲ್ಲಿ ಪ್ರಗತಿ ಪರಿಶೀಲನಾ ಸಭೆಗಳನ್ನು ನಡೆಸಲಾಗುತ್ತಿದೆ.<br>➢ ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್ ರಾಜ್ ಇಲಾಖೆಯು ಗ್ರಾಮ ಮಟ್ಟದಲ್ಲಿ ನೋಂದಣಿ ಕ್ಯಾಂಪ್‌ಗಳನ್ನು ನಡೆಸುವ ಮೂಲಕ ಎಲ್ಲಾ ಅಸಂಘಟಿತ ಕಾರ್ಮಿಕರನ್ನು ನೋಂದಾಯಿಸಲು ಕ್ರಮವಹಿಸುವಂತೆ, ಸದರಿ ಇಲಾಖೆಯ ಎಲ್ಲಾ ಅಧಿಕಾರಿಗಳಿಗೆ ಮಾಹಿತಿಯನ್ನು ನೀಡಲಾಗಿದೆ.<br>➢ ಇದಲ್ಲದೇ, ಅಂಚೆ ಇಲಾಖೆ ಹಾಗೂ ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮೀಣಾಭಿವೃದ್ಧಿ ಸಂಸ್ಥೆಯ ಸಹಯೋಗದೊಂದಿಗೆ ಸಾಮಾನ್ಯ ಸೇವಾ ಕೇಂದ್ರ (CSC) ಸಂಸ್ಥೆಯ ಜೊತೆಗೆ ಒಪ್ಪಂದ ಮಾಡಿಕೊಂಡು ನೋಂದಣಿ ಕ್ಯಾಂಪ್‌ಗಳನ್ನು ನಡೆಸಲು ಕ್ರಮವಹಿಸಲಾಗುತ್ತಿದೆ. |
| **ಆ)** | ಕಲಬುರಗಿ ಜಿಲ್ಲಾ ವ್ಯಾಪ್ತಿಯಲ್ಲಿ ಅಸಂಘಟಿತ ಕಾರ್ಮಿಕರಿಗೆ ಇ-ಶ್ರಮ್ ಕಾರ್ಡ್‌ಗಳನ್ನು ವಿತರಿಸಲಾಗಿದೆಯೇ; ಹಾಗಿದ್ದಲ್ಲಿ, ಇಲ್ಲಿಯವರೆಗೆ ಎಷ್ಟು ಜನ ಅಸಂಘಟಿತ ಕಾರ್ಮಿಕರಿಗೆ ಇ-ಶ್ರಮ್ ಕಾರ್ಡ್‌ಗಳನ್ನು ವಿತರಿಸಲಾಗಿದೆ (ತಾಲ್ಲೂಕುವಾರು ವಿವರ ಒದಗಿಸುವುದು) | ಕಲಬುರಗಿ ಜಿಲ್ಲಾವ್ಯಾಪ್ತಿಯಲ್ಲಿ ಅಸಂಘಟಿತ ಕಾರ್ಮಿಕರನ್ನು ನೋಂದಾಯಿಸಲಾಗುತ್ತಿದ್ದು, ದಿನಾಂಕ:07-02-2022ರ ಅಂತ್ಯಕ್ಕೆ ಕಲಬುರಗಿ ಜಿಲ್ಲೆಯಲ್ಲಿ ಒಟ್ಟು **2,37,764** ಕಾರ್ಮಿಕರು ನೋಂದಣಿಯಾಗಿರುತ್ತಾರೆ.<br>ಇ-ಶ್ರಮ್ ಪೋರ್ಟಲ್ ಅನ್ನು ಕೇಂದ್ರ ಸರ್ಕಾರದ ಕಾರ್ಮಿಕ ಮತ್ತು ಉದ್ಯೋಗ ಮಂತ್ರಾಲಯವು ನಿರ್ವಹಣೆ ಮಾಡುತ್ತಿರುವುದರಿಂದ ತಾಲ್ಲೂಕುವಾರು ಮಾಹಿತಿ ಲಭ್ಯವಿರುವುದಿಲ್ಲ. |
| **ಇ)** | ಇ-ಶ್ರಮ್ ಕಾರ್ಡ್‌ನಿಂದ ಕಾರ್ಮಿಕರಿಗೆ ದೊರೆಯುವ ಸೌಲಭ್ಯಗಳು ಯಾವುವು; ಈ ಸೌಲಭ್ಯಗಳನ್ನು ನೀಡುವಲ್ಲಿ ಸರ್ಕಾರ ಅನುಸರಿಸುತ್ತಿರುವ ಮಾನದಂಡಗಳೇನು; | ಕೇಂದ್ರ ಸರ್ಕಾರದ ಕಾರ್ಮಿಕ ಮತ್ತು ಉದ್ಯೋಗ ಮಂತ್ರಾಲಯವು ಅಸಂಘಟಿತ ಕಾರ್ಮಿಕರ ದತ್ತಾಂಶವನ್ನು ಸಂಗ್ರಹಿಸಲು ಇ-ಶ್ರಮ್ ಪೋರ್ಟಲ್ ಅಭಿವೃದ್ಧಿಪಡಿಸಿ ನೋಂದಣಿ ನಡೆಸಲಾಗುತ್ತಿದ್ದು, ಈ ಸಂಬಂಧ ಹೊರಡಿಸಿರುವ ಮಾರ್ಗಸೂಚಿಯಲ್ಲಿ ನೋಂದಣಿಯ ಪ್ರಯೋಜನಗಳ ವಿವರ ಈ ಕೆಳಕಂಡಂತಿದೆ. |

| | | |
|---|---|---|
| | | ➢ ಸಾಮಾಜಿಕ ಭದ್ರತೆ ಹಾಗೂ ಕಲ್ಯಾಣ ಯೋಜನೆಗಳನ್ನು ಪಡೆಯಬಹುದು.<br>ದತ್ತಾಂಶವು ಸರ್ಕಾರಕ್ಕೆ ಅಸಂಘಟಿತ ಕಾರ್ಮಿಕರಿಗೆ ವಿಶೇಷ ನೀತಿಗಳು ಹಾಗೂ ಯೋಜನೆಗಳನ್ನು ರೂಪಿಸಲು ಸಹಾಯಕ.<br>➢ ಒಂದು ವರ್ಷದ ಅವಧಿಗೆ ಪ್ರಧಾನ ಮಂತ್ರಿ ಸುರಕ್ಷಾ ಬಿಮಾ ಯೋಜನೆ (PMSBY)ಯ ಪ್ರಯೋಜನ ಪಡೆಯಬಹುದು (ಅಪಘಾತದಿಂದ ಮರಣ ಹೊಂದಿದಲ್ಲಿ ಅಥವಾ ಶಾಶ್ವತ ದುರ್ಬಲತೆ ಹೊಂದಿದಲ್ಲಿ ರೂ.2 ಲಕ್ಷ ಹಾಗೂ ಭಾಗಶಃ ಅಂಗವೈಕಲ್ಯಕ್ಕೆ ರೂ.1 ಲಕ್ಷ ಪರಿಹಾರ).<br>➢ ರಾಷ್ಟ್ರೀಯ ವಿಪತ್ತು ಅಥವಾ ಕೋವಿಡ್-19ರ ಸಾಂಕ್ರಾಮಿಕ ಪಿಡುಗಿನಂತಹ ಪರಿಸ್ಥಿತಿಯಲ್ಲಿ, ಅರ್ಹ ಕಾರ್ಮಿಕರಿಗೆ ನೆರವು ನೀಡಲು ಅನುಕೂಲವಾಗುತ್ತದೆ.<br>ಇ-ಶ್ರಮ್ ಯೋಜನೆಯಡಿ ನೋಂದಣಿಗೆ ಅವಶ್ಯವಿರುವ ಮಾನದಂಡಗಳು ಈ ಕೆಳಗಿನಂತಿದೆ:-<br>➢ ಅಸಂಘಟಿತ ವರ್ಗದ ಕಾರ್ಮಿಕನಾಗಿರಬೇಕು.<br>➢ 18 ರಿಂದ 59 ವರ್ಷ ವಯೋಮಾನ.<br>➢ ಆದಾಯ ತೆರಿಗೆ ಪಾವತಿದಾರರಾಗಿರಬಾರದು.<br>➢ ಭವಿಷ್ಯನಿಧಿ ಹಾಗೂ ಇ.ಎಸ್.ಐ ಫಲಾನುಭವಿಯಾಗಿರಬಾರದು. |
| ಈ) | ಇ-ಶ್ರಮ್ ಕಾರ್ಡ್‌ನಿಂದ ದೊರೆಯುವ ಪ್ರಯೋಜನೆಗಳ ಕುರಿತು ಸಾರ್ವಜನಿಕರಲ್ಲಿ ಅರಿವು ಮೂಡಿಸುವಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು ? (ಸಂಪೂರ್ಣ ಮಾಹಿತಿ ಒದಗಿಸುವುದು) | ಇ-ಶ್ರಮ್ ಕಾರ್ಡ್‌ನಿಂದ ದೊರೆಯುವ ಪ್ರಯೋಜನಗಳ ಬಗ್ಗೆ ಸಾರ್ವಜನಿಕರಲ್ಲಿ ಅರಿವು ಮೂಡಿಸಲು, ಕನ್ನಡ ಇಂಗ್ಲಿಷ್ ಮತ್ತು ಉರ್ದು ದಿನಪತ್ರಿಕೆಗಳಲ್ಲಿ ಜಾಹೀರಾತನ್ನು ನೀಡಲಾಗಿದೆ, ರಾಜ್ಯಾದ್ಯಂತ ಸಾಮಾನ್ಯ ಸೇವಾ ಕೇಂದ್ರ (CSC) ಸಹಯೋಗದೊಂದಿಗೆ ನೋಂದಣಿ ಕ್ಯಾಂಪ್‌ಗಳನ್ನು ನಡೆಸಲಾಗುತ್ತಿದೆ ಹಾಗೂ ಪ್ರಚಾರ ಮತ್ತು ಸಂವಹನ ಚಟುವಟಿಕೆಗಳನ್ನು ನಡೆಸಲಾಗುತ್ತಿದೆ. |

| | | |
|---|---|---|
| | | ಇದಲ್ಲದೇ, ಸಾರ್ವಜನಿಕರು ಈ ಕೆಳಕಂಡ ವಿವಿಧ ಮಾರ್ಗಗಳ ಮೂಲಕ ಯೋಜನೆಯ ಕುರಿತು ಮಾಹಿತಿಯನ್ನು ಪಡೆಯಬಹುದಾಗಿರುತ್ತದೆ.<br>• ಇ-ಶ್ರಮ್ ಸಹಾಯ ವಾಣಿ 14434 (ಸೋಮವಾರದಿಂದ ಶನಿವಾರದವರೆಗೆ ಬೆಳಿಗ್ಗೆ 08:00 ರಿಂದ ರಾತ್ರಿ 08:00ರವರೆಗೆ)<br>• ದೂರುಗಳನ್ನು ಸಲ್ಲಿಸಲು URL: www.gms.eshram.gov.in ಪೋರ್ಟಲ್ ನೋಂದಣಿ ಮತ್ತು ಯೋಜನೆ ಮಾಹಿತಿಗಾಗಿ www.eshram.gov.in<br>• ತಮ್ಮ ಹತ್ತಿರದ ಸಾಮಾನ್ಯ ಸೇವಾ ಕೇಂದ್ರಗಳ ಮಾಹಿತಿಯನ್ನು https://findmycsc.nic.in/csc/ ಪೋರ್ಟಲ್ ಮೂಲಕ ಪಡೆಯಬಹುದಾಗಿದೆ.<br>• ಕಾರ್ಮಿಕ ಸಹಾಯವಾಣಿ 155214 (24x7) |

**ಕಾಇ 53 ಎಲ್‌ಇಟಿ 2022**

*(ಅರಬೈಲ್ ಶಿವರಾಂ ಹೆಬ್ಬಾರ್)*
*ಕಾರ್ಮಿಕ ಸಚಿವರು*

ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 148
2. ಸದಸ್ಯರ ಹೆಸರು : ಡಾ|| ಅವಿನಾಶ್ ಉಮೇಶ್ ಜಾಧವ್
3. ಉತ್ತರಿಸಬೇಕಾದ ದಿನಾಂಕ : 15.02.2022
4. ಉತ್ತರಿಸುವ ಸಚಿವರು : ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಮತ್ತು ಸಣ್ಣ ನೀರಾವರಿ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಕಳೆದ ಮೂರು ವರ್ಷಗಳಿಂದ ಇಲ್ಲಿಯವರೆಗೆ ಚಿಂಚೋಳಿ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಅತಿವೃಷ್ಠಿಯಿಂದಾಗಿ ಎಷ್ಟು ಸಣ್ಣ ನೀರಾವರಿ ಕೆರೆಗಳು ಹಾನಿಯಾಗಿವೆ; ಹಾಗಿದ್ದಲ್ಲಿ, ಇಲ್ಲಿಯವರೆಗೆ ಈ ಕೆರೆಗಳ ಅಭಿವೃದ್ಧಿಗೆ ಸರ್ಕಾರ ಕೈಗೊಂಡ ಕ್ರಮಗಳೇನು; | ಚಿಂಚೋಳಿ ಮತಕ್ಷೇತ್ರದ ವ್ಯಾಪ್ತಿಯಲ್ಲಿ 22 ಕೆರೆಗಳು ಸಣ್ಣ ನೀರಾವರಿ ಇಲಾಖೆ ವ್ಯಾಪ್ತಿಯಲ್ಲಿದ್ದು, ಕಳೆದ ಮೂರು ವರ್ಷಗಳಿಂದ ಇಲ್ಲಿಯವರೆಗೆ ಅತಿವೃಷ್ಠಿಯಿಂದಾಗಿ 20 ಕೆರೆಗಳಿಗೆ ಹಾನಿಯಾಗಿರುತ್ತದೆ. ಅವುಗಳಲ್ಲಿ ರೂ.750.00 ಲಕ್ಷ ಅಂದಾಜು ಮೊತ್ತದಲ್ಲಿ 2 ಕೆರೆಗಳ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದ್ದು, ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ.<br><br>ಪ್ರಸ್ತುತ ಸಾಲಿನಲ್ಲಿ 6 ಕೆರೆಗಳ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಉದ್ದೇಶಿಸಲಾಗಿದ್ದು, ಪ್ರಸ್ತಾವನೆ ಪರಿಶೀಲನೆಯಲ್ಲಿದೆ.<br><br>ಅನುದಾನದ ಲಭ್ಯತೆಯ ಆಧಾರದ ಮೇಲೆ ಇನ್ನಿತರ ಕೆರೆಗಳ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಪರಿಶೀಲಿಸಲಾಗುವುದು.<br><br>(ಹಾನಿಯಾಗಿರುವ 20 ಕೆರೆಗಳ ವಿವರಗಳನ್ನು ಅನುಬಂಧ-1ರಲ್ಲಿ ನೀಡಲಾಗಿದೆ) |
| ಆ. | ರೈತರ ಜಮೀನುಗಳಿಗೆ ನೀರು ಪೂರೈಕೆಗಾಗಿ ಇರುವ ಕಾಲುವೆಗಳು ಸಂಪೂರ್ಣ ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಸರ್ಕಾರ ಇಲ್ಲಿಯವರೆಗೆ ಕೈಗೊಂಡ ಕ್ರಮಗಳೇನು? (ಸಣ್ಣ ನೀರಾವರಿ ಕೆರೆಗಳವಾರು ಸಂಪೂರ್ಣ ಮಾಹಿತಿ ಒದಗಿಸುವುದು) | ಚಿಂಚೋಳಿ ಮತಕ್ಷೇತ್ರದಲ್ಲಿ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿ 22 ಕೆರೆಗಳಿರುತ್ತವೆ. ಅವುಗಳಲ್ಲಿ 19 ಕೆರೆಗಳ ಕಾಲುವೆಗಳು ಸುಸ್ಥಿತಿಯಲ್ಲಿದ್ದು, 03 ಕೆರೆಗಳ ಕಾಲುವೆಗಳು ದುಸ್ಥಿತಿಯಲ್ಲಿರುತ್ತವೆ.<br><br>2020-21 ಮತ್ತು 2021-22ನೇ ಸಾಲಿನಲ್ಲಿ ಅತಿವೃಷ್ಠಿಯಿಂದಾಗಿ ಕಾಲುವೆಗಳು ನೀರಿನ ರಭಸದಿಂದಾಗಿ ಕೊಚ್ಚಿಕೊಂಡು ಹೋಗಿರುತ್ತದೆ. ಕಾಲುವೆಗಳಿಗೆ ಅಡ್ಡಲಾಗಿ ನಿರ್ಮಿಸಿರುವ ಸಿ.ಡಿ. ಹಾಗೂ ಕಾಲುವೆಗಳ ಲೈನಿಂಗ್ ಗಳಿಗೆ ಹಾನಿ ಉಂಟಾಗಿರುತ್ತದೆ. ಅಲ್ಲದೇ, ಕಾಲುವೆಗಳಲ್ಲಿ ಹೂಳು ತುಂಬಿಕೊಂಡಿದ್ದು ನೀರು ಹರಿಯಲು ತೊಂದರೆಯಾಗಿರುತ್ತದೆ.<br><br>ಕೆರೆಗಳನ್ನು ಅಭಿವೃದ್ಧಿಗೊಳಿಸಲು ಕೈಗೊಂಡಿರುವ ಕಾಮಗಾರಿಗಳಲ್ಲಿ 2 ಕೆರೆಗಳ ಕಾಲುವೆಗಳ ದುರಸ್ತಿಗಾಗಿ ಕ್ರಮ ಕೈಗೊಳ್ಳಲಾಗಿದೆ.<br><br>ಕೆರೆಗಳ ಕಾಲುವೆಗಳ ನಿರ್ವಹಣೆಯನ್ನು ಪ್ರತಿ ವರ್ಷ 2702 ಯೋಜನೇತರ ಲೆಕ್ಕಶೀರ್ಷಿಕೆ ಅಡಿಯಲ್ಲಿ ಒದಗಿಸಲಾಗುವ ಅನುದಾನದ ಲಭ್ಯತೆ ಆಧಾರದ ಮೇಲೆ ಸುಸ್ಥಿತಿಯಲ್ಲಿಡಲು ಕ್ರಮ ವಹಿಸಲಾಗುತ್ತದೆ.<br>(ವಿವರಗಳನ್ನು ಅನುಬಂಧ-2 ರಲ್ಲಿ ನೀಡಲಾಗಿದೆ) |

ಕಡತ ಸಂಖ್ಯೆ:MID 18 LAQ 2022

(ಜೆ.ಸಿ.ಮಾಧುಸ್ವಾಮಿ)
ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಮತ್ತು ಸಣ್ಣ ನೀರಾವರಿ ಸಚಿವರು.

**ಡಾ: ಅವಿನಾಶ್ ಉಮೇಶ್ ಜಾಧವ್, ಮಾನ್ಯ ವಿಧಾನಸಭೆ ಸದಸ್ಯರು ಇವರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:148 ಕ್ಕೆ ಅನುಬಂಧ-1**

**ಕಳೆದ ಮೂರು ವರ್ಷಗಳಿಂದ (2018-19ರಿಂದ 2021-22) ಇಲ್ಲಿಯವರೆಗೆ ಚಿಂಚೋಳಿ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಅತಿವೃಷ್ಟಿಯಿಂದಾಗಿ ಹಾನಿಯಾದ ಸಣ್ಣ ನೀರಾವರಿ ಯೋಜನೆಗಳ ವಿವರ**

ರೂ.ಲಕ್ಷಗಳಲ್ಲಿ

| ಕ್ರ.ಸಂ. | ವರ್ಷ | ತಾಲ್ಲೂಕು | ಕೆರೆಯ ಹೆಸರು | ಹಾನಿಯ ಸ್ವರೂಪ | ದುರಸ್ತಿ ಕಾಮಗಾರಿಗೆ ಅನುಮೋದನೆ ನೀಡಲಾಗಿದೆಯೆ (ಹೌದು/ಇಲ್ಲ) | ಅಂದಾಜು ಮೊತ್ತ | ವೆಚ್ಚ | ಕಾಮಗಾರಿಯ ಹಂತ | | ಷರಾ |
|---|---|---|---|---|---|---|---|---|---|---|
| | | | | | | | | ಪೂರ್ಣಗೊಂಡಿದೆ | ಪ್ರಗತಿಯಲ್ಲಿದೆ | |
| 1 | 2 | 3 | 4 | 5 | 6 | 7 | 8 | 9 | 10 | 11 |
| | ಕೆರೆಗಳು | | | | | | | | | |
| 1 | 2020-21 | ಚಿಂಚೋಳಿ | ನಾಗಯಿದ್ಲಾಯಿ ಕೆರೆ | ಪೂರ್ಣ ಪ್ರಮಾಣದಲ್ಲಿ ಹಾನಿಯಾಗಿರುತ್ತದೆ. (ಏರಿಯು ಒಡೆದು ನೀರು ಖಾಲಿಯಾಗಿರುತ್ತದೆ) | ಹೌದು | 400.00 | - | - | ಪ್ರಗತಿಯಲ್ಲಿದೆ | |
| 2 | 2020-21 | ಕಾಳಗಿ | ಅರಣಕಲ್ ಕೆರೆ | ಪೂರ್ಣ ಪ್ರಮಾಣದಲ್ಲಿ ಹಾನಿಯಾಗಿರುತ್ತದೆ. (ಏರಿಯು ಒಡೆದು ನೀರು ಖಾಲಿಯಾಗಿರುತ್ತದೆ.) | ಹೌದು | 350.00 | - | - | ಪ್ರಗತಿಯಲ್ಲಿದೆ | |

| ಕ್ರ.ಸಂ. | ವರ್ಷ | ತಾಲ್ಲೂಕು | ಕೆರೆಯ ಹೆಸರು | ಹಾನಿಯ ಸ್ವರೂಪ | ದುರಸ್ತಿ ಕಾಮಗಾರಿಗೆ ಅನುಮೋದನೆ ನೀಡಲಾಗಿದೆಯೆ (ಹೌದು/ಇಲ್ಲ) | ಅಂದಾಜು ಮೊತ್ತ | ವೆಚ್ಚ | ಕಾಮಗಾರಿಯ ಹಂತ | | ಷರಾ |
|---|---|---|---|---|---|---|---|---|---|---|
| | | | | | | | | ಪೂರ್ಣಗೊಂಡಿದೆ | ಪ್ರಗತಿಯಲ್ಲಿದೆ | |
| 1 | 2 | 3 | 4 | 5 | 6 | 7 | 8 | 9 | 10 | 11 |
| 3 | 2020-21 | ಚಿಂಚೋಳಿ | ಹುಡದಳ್ಳಿ ಕೆರೆ | ಪೂರ್ಣ ಪ್ರಮಾಣದಲ್ಲಿ ಹಾನಿಯಾಗಿರುತ್ತದೆ. (ಏರಿಯು ಒಡೆದು ನೀರು ಖಾಲಿಯಾಗಿರುತ್ತದೆ) | ಇಲ್ಲ | 400.00 | - | - | - | ಸರ್ಕಾರದ ಪತ್ರ ಸಂಖ್ಯೆ:MID/139/MISU/2022, ದಿನಾಂಕ:02.02.2022 ರನ್ವಯ ಚಿಂಚೋಳಿ ಮತಕ್ಷೇತ್ರದಲ್ಲಿ ರೂ.10.00 ಕೋಟಿ ಅನುದಾನದಲ್ಲಿ ಕಾಮಗಾರಿಗಳನ್ನು ಕೈಗೊಳ್ಳಲು ಕಾಮಗಾರಿಗಳ ಪಟ್ಟಿಯನ್ನು ಸಲ್ಲಿಸುವಂತೆ ಸೂಚಿಸಿದ್ದು, ಅದರಂತೆ ಕೇಂದ್ರ ಕಚೇರಿ ಪತ್ರ ಸಂಖ್ಯೆ:781, ದಿನಾಂಕ:05.02.2022ರನ್ವಯ ಸರ್ಕಾರಕ್ಕೆ ಸಲ್ಲಿಸಲಾದ ಕಾಮಗಾರಿಗಳ ಪಟ್ಟಿಯಲ್ಲಿ ಸದರಿ ಕಾಮಗಾರಿಗಳನ್ನು ಸೇರಿಸಲಾಗಿದೆ. |
| 4 | 2020-21 | ಚಿಂಚೋಳಿ | ದೋತಿಕೊಳ್ಳ ಕೆರೆ | ಭಾಗಶಃ ಹಾನಿಯಾಗಿರುತ್ತದೆ. (ಏರಿಯ ಕೆಳಭಾಗವು ಕುಸಿದಿರುತ್ತದೆ) | ಇಲ್ಲ | 200.00 | - | - | - | |
| 5 | 2020-21 | ಚಿಂಚೋಳಿ | ಕೊಡ್ಲಿ ಅಲ್ಲಾಪೂರ ಕೆರೆ | ಭಾಗಶಃ ಹಾನಿಯಾಗಿರುತ್ತದೆ. (ಕೆರೆಯ ಕೋಡಿಯ ಎರಡು ಬದಿಯ ಅಬಟ್‌ಮೆಂಟ್, ಕೆಳಭಾಗದ ಅಪ್ರಾನ್ ಹಾನಿಯಾಗಿರುತ್ತದೆ.) | ಇಲ್ಲ | 180.00 | - | - | - | |
| 6 | 2020-21 | ಚಿಂಚೋಳಿ | ಹಸರಗುಂಡಗಿ ಕೆರೆ | ಭಾಗಶಃ ಹಾನಿಯಾಗಿರುತ್ತದೆ. (ಕೆರೆಯ ಕೋಡಿ ಹಾಗೂ ಕಾಲುವೆಗಳಿಗೆ ಹಾನಿಯಾಗಿರುತ್ತದೆ.) | ಇಲ್ಲ | 85.00 | - | - | - | |

| ಕ್ರ.ಸಂ. | ವರ್ಷ | ತಾಲ್ಲೂಕು | ಕೆರೆಯ ಹೆಸರು | ಹಾನಿಯ ಸ್ವರೂಪ | ದುರಸ್ತಿ ಕಾಮಗಾರಿಗೆ ಅನುಮೋದನೆ ನೀಡಲಾಗಿದೆಯೆ (ಹೌದು/ಇಲ್ಲ) | ಅಂದಾಜು ಮೊತ್ತ | ವೆಚ್ಚ | ಕಾಮಗಾರಿಯ ಹಂತ | | ಷರಾ |
|---|---|---|---|---|---|---|---|---|---|---|
| | | | | | | | | ಪೂರ್ಣಗೊಂಡಿದೆ | ಪ್ರಗತಿಯಲ್ಲಿದೆ | |
| 1 | 2 | 3 | 4 | 5 | 6 | 7 | 8 | 9 | 10 | 11 |
| 7 | 2020-21 | ಚಿಂಚೋಳಿ | ಧರಮಸಾಗರ ಕೆರೆ | ಭಾಗಶಃ ಹಾನಿಯಾಗಿರುತ್ತದೆ. (ಕೆರೆಯ ಕೋಡಿ ಹಾಗೂ ಕಾಲುವೆಗಳಿಗೆ ಹಾನಿಯಾಗಿರುತ್ತದೆ.) | ಇಲ್ಲ | 75.00 | – | – | – | |
| 8 | 2020-21 | ಕಾಳಗಿ | ಮಾವಿನಸೂರ ಕೆರೆ | ಭಾಗಶಃ ಹಾನಿಯಾಗಿರುತ್ತದೆ. (ಏರಿಯ ಕೆಳಭಾಗದಲ್ಲಿ ರೇನ್ ಕಟ್‌ಗಳಿಂದ ಹಾಗೂ ಕೋಡಿಯ ವಿಂಗ್ ವಾಲ್‌ಗಳು ಹಾನಿಯಾಗಿರುತ್ತವೆ) | ಇಲ್ಲ | 60.00 | – | – | – | |
| 9 | 2020-21 | ಚಿಂಚೋಳಿ | ಐನಾಪೂರ (ಹಳೆ) ಕೆರೆ | ಭಾಗಶಃ ಹಾನಿಯಾಗಿರುತ್ತದೆ. (ಕೆರೆಯ ಕೋಡಿಯು ಹಾನಿಯಾಗಿರುತ್ತದೆ.) | ಇಲ್ಲ | 40.00 | – | – | – | |
| 10 | 2020-21 | ಚಿಂಚೋಳಿ | ಅಂತಾವರಂ ಕೆರೆ | ಭಾಗಶಃ ಹಾನಿಯಾಗಿರುತ್ತದೆ. (ಕೆರೆಯ ಕೋಡಿಯು ಹಾನಿಯಾಗಿರುತ್ತದೆ.) | ಇಲ್ಲ | 40.00 | – | – | – | |
| 11 | 2020-21 | ಚಿಂಚೋಳಿ | ಬೀರನಳ್ಳಿ ಕೆರೆ | ಭಾಗಶಃ ಹಾನಿಯಾಗಿರುತ್ತದೆ. (ಕೆರೆಯ ಕೋಡಿಯು ಹಾನಿಯಾಗಿರುತ್ತದೆ.) | ಇಲ್ಲ | 40.00 | – | – | – | |
| 12 | 2020-21 | ಚಿಂಚೋಳಿ | ಚಿಕ್ಕಲಿಂಗದಳ್ಳಿ ಕೆರೆ | ಭಾಗಶಃ ಹಾನಿಯಾಗಿರುತ್ತದೆ. (ಕೆರೆಯ ಕೋಡಿ ಹಾಗೂ ಕಾಲುವೆಗಳಿಗೆ ಹಾನಿಯಾಗಿರುತ್ತದೆ.) | ಇಲ್ಲ | 40.00 | – | – | – | |

| ಕ್ರ.ಸಂ. | ವರ್ಷ | ತಾಲ್ಲೂಕು | ಕೆರೆಯ ಹೆಸರು | ಹಾನಿಯ ಸ್ವರೂಪ | ದುರಸ್ತಿ ಕಾಮಗಾರಿಗೆ ಅನುಮೋದನೆ ನೀಡಲಾಗಿದೆಯೆ (ಹೌದು/ಇಲ್ಲ) | ಅಂದಾಜು ಮೊತ್ತ | ವೆಚ್ಚ | ಕಾಮಗಾರಿಯ ಹಂತ | | ಷರಾ |
|---|---|---|---|---|---|---|---|---|---|---|
| | | | | | | | | ಪೂರ್ಣಗೊಂಡಿದೆ | ಪ್ರಗತಿಯಲ್ಲಿದೆ | |
| 1 | 2 | 3 | 4 | 5 | 6 | 7 | 8 | 9 | 10 | 11 |
| 13 | 2020-21 | ಚಿಂಚೋಳಿ | ಹುಲ್ಸಗೂಡ ಕೆರೆ | ಭಾಗಶಃ ಹಾನಿಯಾಗಿರುತ್ತದೆ. (ಕೆರೆಯ ಕೋಡಿ ಹಾಗೂ ಕಾಲುವೆಗಳಿಗೆ ಹಾನಿಯಾಗಿರುತ್ತದೆ.) | ಇಲ್ಲ | 49.00 | - | - | - | |
| 14 | 2020-21 | ಚಿಂಚೋಳಿ | ಮುಕರಂಬಾ ಕೆರೆ | ಭಾಗಶಃ ಹಾನಿಯಾಗಿರುತ್ತದೆ. (ಕೆರೆಯ ಕೋಡಿ ಹಾಗೂ ಕಾಲುವೆಗಳಿಗೆ ಹಾನಿಯಾಗಿರುತ್ತದೆ.) | ಇಲ್ಲ | 49.00 | - | - | - | |
| 15 | 2020-21 | ಚಿಂಚೋಳಿ | ಕೊಳ್ಳೂರು ಕೆರೆ | ಭಾಗಶಃ ಹಾನಿಯಾಗಿರುತ್ತದೆ. (ಕೆರೆಯ ಕೋಡಿ ಹಾಗೂ ಕಾಲುವೆಗಳಿಗೆ ಹಾನಿಯಾಗಿರುತ್ತದೆ.) | ಇಲ್ಲ | 49.00 | - | - | - | |
| 16 | 2020-21 | ಚಿಂಚೋಳಿ | ತುಮಕುಂಟಾ ಕೆರೆ | ಭಾಗಶಃ ಹಾನಿಯಾಗಿರುತ್ತದೆ. (ಕೆರೆಯ ಕೋಡಿ ಹಾಗೂ ಕಾಲುವೆಗಳಿಗೆ ಹಾನಿಯಾಗಿರುತ್ತದೆ.) | ಇಲ್ಲ | 49.00 | - | - | - | |
| 17 | 2020-21 | ಚಿಂಚೋಳಿ | ಖಾನಾಪುರ ಕೆರೆ | ಭಾಗಶಃ ಹಾನಿಯಾಗಿರುತ್ತದೆ. (ಕೆರೆಯ ಕೋಡಿ ಹಾಗೂ ಕಾಲುವೆಗಳಿಗೆ ಹಾನಿಯಾಗಿರುತ್ತದೆ.) | ಇಲ್ಲ | 49.00 | - | - | - | |
| 18 | 2020-21 | ಚಿಂಚೋಳಿ | ಪಂಗರಗಾ ಕೆರೆ | ಭಾಗಶಃ ಹಾನಿಯಾಗಿರುತ್ತದೆ. (ಕೆರೆಯ ಕೋಡಿ ಹಾಗೂ ಕಾಲುವೆಗಳಿಗೆ ಹಾನಿಯಾಗಿರುತ್ತದೆ.) | ಇಲ್ಲ | 49.00 | - | - | - | |

| ಕ್ರ.ಸಂ. | ವರ್ಷ | ತಾಲ್ಲೂಕು | ಕೆರೆಯ ಹೆಸರು | ಹಾನಿಯ ಸ್ವರೂಪ | ದುರಸ್ತಿ ಕಾಮಗಾರಿಗೆ ಅನುಮೋದನೆ ನೀಡಲಾಗಿದೆಯೆ (ಹೌದು/ಇಲ್ಲ) | ಅಂದಾಜು ಮೊತ್ತ | ವೆಚ್ಚ | ಕಾಮಗಾರಿಯ ಹಂತ | | ಷರಾ |
|---|---|---|---|---|---|---|---|---|---|---|
| | | | | | | | | ಪೂರ್ಣಗೊಂಡಿದೆ | ಪ್ರಗತಿಯಲ್ಲಿದೆ | |
| 1. | 2 | 3 | 4 | 5 | 6 | 7 | 8 | 9 | 10 | 11 |
| 19 | 2020-21 | ಕಾಳಗಿ | ಬೆಡ್‌ಸೂರ ಕೆರೆ | ಭಾಗಶಃ ಹಾನಿಯಾಗಿರುತ್ತದೆ. (ಏರಿಯ ಕೆಳಭಾಗದಲ್ಲಿ ರೇನ್ ಕಟ್ ಗಳಿಂದ ಹಾನಿಯಾಗಿರುತ್ತವೆ) | ಇಲ್ಲ | 60.00 | - | - | - | |
| 20 | 2020-21 | ಕಾಳಗಿ | ಬೆಡ್‌ಸೂರ ಜಿನಗು ಕೆರೆ | ಭಾಗಶಃ ಹಾನಿಯಾಗಿರುತ್ತದೆ. (ಕೋಡಿ ಮತ್ತು ಕೋಡಿಯ ಕೆಳಭಾಗದಲ್ಲಿ ಹಾನಿಯಾಗಿರುತ್ತವೆ) | ಇಲ್ಲ | 20.00 | - | - | - | |
| | | | | | **ಕೆರೆಗಳ ಒಟ್ಟು** | **2284.00** | **0.00** | | | |

ಡಾ: ಅವಿನಾಶ್ ಉಮೇಶ್ ಜಾಧವ್, ಮಾನ್ಯ ವಿಧಾನಸಭೆ ಸದಸ್ಯರು ಇವರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:148 ಕ್ಕೆ ಅನುಬಂಧ-2

ಚಿಂಚೋಳಿ ಮತಕ್ಷೇತ್ರದ ವ್ಯಾಪ್ತಿಯಲ್ಲಿನ ಕೆರೆ ಕಾಲುವೆಗಳ ವಿವರ

ರೂ.ಲಕ್ಷಗಳಲ್ಲಿ

| ಕ್ರ.ಸಂ. | ತಾಲ್ಲೂಕು | ಕೆರೆಯ ಹೆಸರು | ಕಾಲುವೆಯ ಉದ್ದ (ಕಿ.ಮೀ.ಗಳಲ್ಲಿ) | ಕಾಲುವೆಯ ಸ್ಥಿತಿ (ಸುಸ್ಥಿತಿ/ದುಸ್ಥಿತಿ) | ಅಚ್ಚುಕಟ್ಟು (ಹೆಕ್ಟೇರ್ ಗಳಲ್ಲಿ) | ಕಾಲುವೆ ದುರಸ್ಥಿ ಕಾಮಗಾರಿ ಕೈಗೊಂಡಿದ್ದಲ್ಲಿ ವಿವರ | | | | ಕಾಮಗಾರಿಯ ಹಂತ | | ಷರಾ |
|---|---|---|---|---|---|---|---|---|---|---|---|---|
| | | | | | | ವರ್ಷ | ಲೆಕ್ಕಶೀರ್ಷಿಕೆ | ಅಂದಾಜು ಮೊತ್ತ | ವೆಚ್ಚ | ಪೂರ್ಣಗೊಂಡಿದೆ | ಪ್ರಗತಿಯಲ್ಲಿದೆ | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| 1 | ಚಿಂಚೋಳಿ | ಬೀರನಳ್ಳಿ ಕೆರೆ | 15.63 | ಸುಸ್ಥಿತಿ | 1950.00 | - | - | - | - | - | - | |
| 2 | ಚಿಂಚೋಳಿ | ಪಂಗರಗಾ ಕೆರೆ | 4.07 | ಸುಸ್ಥಿತಿ | 220.00 | - | - | - | - | - | - | |
| 3 | ಚಿಂಚೋಳಿ | ಚಿಕ್ಕಲಿಂಗದಳ್ಳಿ ಕೆರೆ | 6.80 | ಸುಸ್ಥಿತಿ | 1006.00 | - | - | - | - | - | - | |
| 4 | ಚಿಂಚೋಳಿ | ತುಮಕುಂಟಾ ಕೆರೆ | 5.97 | ಸುಸ್ಥಿತಿ | 283.00 | - | - | - | - | - | - | |
| 5 | ಚಿಂಚೋಳಿ | ಹುಡದಳ್ಳಿ ಕೆರೆ | 6.00 | ಸುಸ್ಥಿತಿ | 369.00 | - | - | - | - | - | - | |
| 6 | ಚಿಂಚೋಳಿ | ನಾಗಯಿದ್ಲಾಯಿ ಕೆರೆ | 4.91 | ಸುಸ್ಥಿತಿ | 311.00 | 2020-21 | 4702-00-101-1-07-139 ಕೆರೆಗಳ ಆಧುನೀಕರಣ | 30.21 | - | - | ಪ್ರಗತಿಯಲ್ಲಿದೆ | ಪ್ರವಾಹದಿಂದ ಹಾನಿಗೊಳಗಾದ ಈ ಕೆರೆಯ ಪುನರುಜ್ಜೀವನ ಕಾಮಗಾರಿಯ ರೂ.400 ಲಕ್ಷ ಅಂದಾಜಿನಲ್ಲಿ ಕಾಲುವೆಯ 200 ಮೀ. ಉದ್ದಕ್ಕೆ ಸಿ.ಸಿ. ಲೈನಿಂಗ್ ಹಾಗೂ ಕಾಲುವೆಯ ಪೂರ್ಣ ಉದ್ದಕ್ಕೆ ಹೂಳು ತೆಗೆಯುವುದು ಮತ್ತು ಇನಿತರ ದುರಸ್ತಿಗಾಗಿ ರೂ.30.21 ಲಕ್ಷ ಮೊತ್ತದ ಕಾಮಗಾರಿಯನ್ನು ಕೈಗೊಳ್ಳಲಾಗಿದೆ. |
| 7 | ಚಿಂಚೋಳಿ | ದೋತಿಕೋಳ ಕೆರೆ | 5.26 | ಸುಸ್ಥಿತಿ | 348.00 | - | - | - | - | - | - | |
| 8 | ಚಿಂಚೋಳಿ | ಹುಲ್ಸಗೂಡ ಕೆರೆ | 4.99 | ಸುಸ್ಥಿತಿ | 393.00 | - | - | - | - | - | - | |
| 9 | ಚಿಂಚೋಳಿ | ಹಸರಗುಂಡಗಿ ಕೆರೆ | 4.86 | ಸುಸ್ಥಿತಿ | 334.00 | - | - | - | - | - | - | |
| 10 | ಚಿಂಚೋಳಿ | ಕೊಡ್ಲಿ ಅಲ್ಲಾಪೂರ ಕೆರೆ | 15.00 | ಸುಸ್ಥಿತಿ | 1050.00 | - | - | - | - | - | - | |
| 11 | ಚಿಂಚೋಳಿ | ಕೊಳ್ಳೂರು ಕೆರೆ | 1.22 | ಸುಸ್ಥಿತಿ | 113.00 | - | - | - | - | - | - | |
| 12 | ಚಿಂಚೋಳಿ | ಚಂದನಕೇರಾ ಕೆರೆ | 3.10 | ಸುಸ್ಥಿತಿ | 87.00 | - | - | - | - | - | - | |
| 13 | ಚಿಂಚೋಳಿ | ಐನಾಪೂರ (ಹಳೆ) ಕೆರೆ | 3.00 | ಸುಸ್ಥಿತಿ | 113.00 | - | - | - | - | - | - | |
| 14 | ಚಿಂಚೋಳಿ | ಮುಕರಂಬಾ ಕೆರೆ | 7.60 | ಸುಸ್ಥಿತಿ | 193.00 | - | - | - | - | - | - | |
| 15 | ಚಿಂಚೋಳಿ | ಖಾನಾಪೂರ ಕೆರೆ | 3.51 | ಸುಸ್ಥಿತಿ | 68.00 | - | - | - | - | - | - | |
| 16 | ಚಿಂಚೋಳಿ | ಧರ್ಮಸಾಗರ ಕೆರೆ | 2.22 | ಸುಸ್ಥಿತಿ | 100.00 | - | - | - | - | - | - | |
| 17 | ಚಿಂಚೋಳಿ | ಅಂತಾವರಂ ಕೆರೆ | 2.50 | ಸುಸ್ಥಿತಿ | 90.00 | - | - | - | - | - | - | |
| 18 | ಚಿಂಚೋಳಿ | ಐನಾಪೂರ (ಹೊಸ) ಕೆರೆ | 1.11 | ಸುಸ್ಥಿತಿ | 42.00 | - | - | - | - | - | - | |
| 19 | ಚಿಂಚೋಳಿ | ಲಿಂಗಾನಗರ ಕೆರೆ | 3.50 | ಸುಸ್ಥಿತಿ | 68.00 | - | - | - | - | - | - | |

| ಕ್ರ.ಸಂ. | ತಾಲ್ಲೂಕು | ಕೆರೆಯ ಹೆಸರು | ಕಾಲುವೆಯ ಉದ್ದ (ಕಿ.ಮೀ.ಗಳಲ್ಲಿ) | ಕಾಲುವೆಯ ಸ್ಥಿತಿ (ಸುಸ್ಥಿತಿ/ದುಸ್ಥಿತಿ) | ಅಚ್ಚುಕಟ್ಟು (ಹೆಕ್ಟೇರ್ ಗಳಲ್ಲಿ) | ಕಾಲುವೆ ದುರಸ್ಥಿ ಕಾಮಗಾರಿ ಕೈಗೊಂಡಿದ್ದಲ್ಲಿ ವಿವರ | | | | ಕಾಮಗಾರಿಯ ಹಂತ | | ಷರಾ |
|---|---|---|---|---|---|---|---|---|---|---|---|---|
| | | | | | | ವರ್ಷ | ಲೆಕ್ಕಶೀರ್ಷಿಕೆ | ಅಂದಾಜು ಮೊತ್ತ | ವೆಚ್ಚ | ಪೂರ್ಣಗೊಂಡಿದೆ | ಪ್ರಗತಿಯಲ್ಲಿದೆ | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| 20 | ಕಾಳಗಿ | ಅರಣಕಲ್ ಕೆರೆ | 4.10 | ದುಸ್ಥಿತಿ | 465.00 | 2020-21 | 4702-00-101-1-07-139 ಕೆರೆಗಳ ಆಧುನೀಕರಣ | 12.61 | - | - | ಪ್ರಗತಿಯಲ್ಲಿದೆ | ಪ್ರವಾಹದಿಂದ ಹಾನಿಗೊಳಗಾದ ಈ ಕೆರೆಯ ಪುನರುಜ್ಜೀವನ ಕಾಮಗಾರಿಯ ರೂ.350 ಲಕ್ಷ ಅಂದಾಜಿನಲ್ಲಿ ಕಾಲುವೆಯ 200 ಮೀ. ಉದ್ದಕ್ಕೆ ಸಿ.ಸಿ. ಲೈನಿಂಗ್ ಹಾಗೂ ಕಾಲುವೆಯ ಪೂರ್ಣ ಉದ್ದಕ್ಕೆ ಹೂಳು ತೆಗೆಯುವುದು ಮತ್ತು ಇನಿತರ ದುರಸ್ತಿಗಾಗಿ ರೂ.12.61 ಲಕ್ಷ ಮೊತ್ತದ ಕಾಮಗಾರಿಯನ್ನು ಕೈಗೊಳ್ಳಲಾಗಿದೆ. |
| 21 | ಕಾಳಗಿ | ಮಾವಿನಸೂರ ಕೆರೆ | 5.27 | ದುಸ್ಥಿತಿ | 245.00 | - | - | - | - | - | - | |
| 22 | ಕಾಳಗಿ | ಬೆಡ್‌ಸೂರ ಕೆರೆ | 2.00 | ದುಸ್ಥಿತಿ | 147.50 | - | - | - | - | - | - | |
| | | ಒಟ್ಟು | 112.62 | | 7995.50 | | | 42.82 | | | | |

375

**ಡಾ|| ಅವಿನಾಶ್ ಉಮೇಶ್ ಜಾಧವ್ , ಮಾನ್ಯ ವಿಧಾನ ಸಭಾ ಸದಸ್ಯರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:148 ಕ್ಕೆ ಪೂರಕ ಟಿಪ್ಪಣಿ.**

ಚಿಂಚೋಳಿ ಮತಕ್ಷೇತ್ರದ ವ್ಯಾಪ್ತಿಯಲ್ಲಿ 22 ಕೆರೆಗಳು ಸಣ್ಣ ನೀರಾವರಿ ಇಲಾಖೆ ವ್ಯಾಪ್ತಿಯಲ್ಲಿದ್ದು, ಕಳೆದ ಮೂರು ವರ್ಷಗಳಿಂದ ಇಲ್ಲಿಯವರೆಗೆ ಅತಿವೃಷ್ಠಿಯಿಂದಾಗಿ 20 ಕೆರೆಗಳಿಗೆ ಹಾನಿಯಾಗಿರುತ್ತದೆ. ಅವುಗಳಲ್ಲಿ ರೂ.750.00 ಲಕ್ಷ ಅಂದಾಜು ಮೊತ್ತದಲ್ಲಿ 2 ಕೆರೆಗಳ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದ್ದು, ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ.

ಪ್ರಸ್ತುತ ಸಾಲಿನಲ್ಲಿ 6 ಕೆರೆಗಳ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಉದ್ದೇಶಿಸಲಾಗಿದ್ದು, ಪ್ರಸ್ತಾವನೆ ಪರಿಶೀಲನೆಯಲ್ಲಿದೆ.

| | | |
|---|---|---|
| 1. | ಕಲಬುರಗಿ ಜಿಲ್ಲೆ, ಚಿಂಚೋಳಿ ತಾಲ್ಲೂಕಿನ ಹುಡದಳ್ಳಿ ಸಣ್ಣ ನೀರಾವರಿ ಕೆರೆ ದುರಸ್ತಿ ಮತ್ತು ಪುನರುಜ್ಜೀವನ ಕಾಮಗಾರಿ | ರೂ.400.00 ಲಕ್ಷ |
| 2. | ಕಲಬುರಗಿ ಜಿಲ್ಲೆ, ಚಿಂಚೋಳಿ ತಾಲ್ಲೂಕಿನ ದೋತಿಕೊಳ್ಳ ಸಣ್ಣ ನೀರಾವರಿ ಕೆರೆ ದುರಸ್ತಿ ಮತ್ತು ಪುನರುಜ್ಜೀವನ ಕಾಮಗಾರಿ | ರೂ. 200.00 ಲಕ್ಷ |
| 3. | ಕಲಬುರಗಿ ಜಿಲ್ಲೆ, ಚಿಂಚೋಳಿ ತಾಲ್ಲೂಕಿನ ಧರ್ಮಸಾಗರ ಸಣ್ಣ ನೀರಾವರಿ ಕೆರೆ ದುರಸ್ತಿ ಮತ್ತು ಪುನರುಜ್ಜೀವನ ಕಾಮಗಾರಿ | ರೂ.75.00 ಲಕ್ಷ |
| 4. | ಕಲಬುರಗಿ ಜಿಲ್ಲೆ, ಚಿಂಚೋಳಿ ತಾಲ್ಲೂಕಿನ ಹಸರಗುಂಡಗಿ ಸಣ್ಣ ನೀರಾವರಿ ಕೆರೆ ದುರಸ್ತಿ ಮತ್ತು ಪುನರುಜ್ಜೀವನ ಕಾಮಗಾರಿ | ರೂ.85.00ಲಕ್ಷ |
| 5. | ಕಲಬುರಗಿ ಜಿಲ್ಲೆ, ಕಾಳಗಿ ತಾಲ್ಲೂಕಿನ ಕೋಡ್ಲಿ ಅಲ್ಲಾಪೂರ ಸಣ್ಣ ನೀರಾವರಿ ಕೆರೆ ದುರಸ್ತಿ ಮತ್ತು ಪುನರುಜ್ಜೀವನ ಕಾಮಗಾರಿ | ರೂ.180.00 ಲಕ್ಷ |
| 6. | ಕಲಬುರಗಿ ಜಿಲ್ಲೆ, ಕಾಳಗಿ ತಾಲ್ಲೂಕಿನ ಮಾವಿನಸೂರ ಸಣ್ಣ ನೀರಾವರಿ ಕೆರೆ ದುರಸ್ತಿ ಮತ್ತು ಪುನರುಜ್ಜೀವನ ಕಾಮಗಾರಿ | ರೂ.60.00 ಲಕ್ಷ |

ಅನುದಾನದ ಲಭ್ಯತೆಯ ಆಧಾರದ ಮೇಲೆ ಇನ್ನಿತರ ಕೆರೆಗಳ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಪರಿಶೀಲಿಸಲಾಗುವುದು.

ಚಿಂಚೋಳಿ ಮತಕ್ಷೇತ್ರದಲ್ಲಿ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿ 22 ಕೆರೆಗಳಿರುತ್ತವೆ. ಅವುಗಳಲ್ಲಿ 19 ಕೆರೆಗಳ ಕಾಲುವೆಗಳು ಸುಸ್ಥಿತಿಯಲ್ಲಿದ್ದು, 03 ಕೆರೆಗಳ ಕಾಲುವೆಗಳು ದುಸ್ಥಿತಿಯಲ್ಲಿರುತ್ತವೆ.

2020-21 ಮತ್ತು 2021-22ನೇ ಸಾಲಿನಲ್ಲಿ ಅತಿವೃಷ್ಠಿಯಿಂದಾಗಿ ಕಾಲುವೆಗಳು ನೀರಿನ ರಭಸದಿಂದಾಗಿ ಕೊಚ್ಚಿಕೊಂಡು ಹೋಗಿರುತ್ತದೆ. ಕಾಲುವೆಗಳಿಗೆ ಅಡ್ಡಲಾಗಿ ನಿರ್ಮಿಸಿರುವ ಸಿ.ಡಿ. ಹಾಗೂ ಕಾಲುವೆಗಳ ಲೈನಿಂಗ್ ಗಳಿಗೆ ಹಾನಿ ಉಂಟಾಗಿರುತ್ತದೆ. ಅಲ್ಲದೇ, ಕಾಲುವೆಗಳಲ್ಲಿ ಹೂಳು ತುಂಬಿಕೊಂಡಿದ್ದು ನೀರು ಹರಿಯಲು ತೊಂದರೆಯಾಗಿರುತ್ತದೆ.

ಕೆರೆಗಳನ್ನು ಅಭಿವೃದ್ಧಿಗೊಳಿಸಲು ಕೈಗೊಂಡಿರುವ ಕಾಮಗಾರಿಗಳಲ್ಲಿ 2 ಕೆರೆಗಳ ಕಾಲುವೆಗಳ ದುರಸ್ಥಿಗಾಗಿ ಕ್ರಮ ಕೈಗೊಳ್ಳಲಾಗಿದೆ.

ಚಿಂಚೋಳಿ ಮತಕ್ಷೇತ್ರದಲ್ಲಿ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿನ 22 ಕೆರೆಗಳಲ್ಲಿ 19 ಕೆರೆಗಳ ಕಾಲುವೆಗಳು ಸುಸ್ಥಿತಿಯಲ್ಲಿದ್ದು, 03 ಕೆರೆಗಳ ಕಾಲುವೆಗಳು ದುಸ್ಥಿತಿಯಲ್ಲಿರುತ್ತವೆ. ದುಸ್ಥಿತಿಯಲ್ಲಿರುವ ಕೆರೆಗಳ ವಿವರ ಈ ಕೆಳಗಿನಂತಿದೆ.

(1) ಅರಣಕಲ್ ಕೆರೆಯ ಕಾಲುವೆಗಳ ಒಟ್ಟು ಉದ್ದ 5.27 ಕಿ.ಮೀ. ಆಗಿದ್ದು, ಕಾಲುವೆ ಅಡಿಯಲ್ಲಿ 245 ಹೆಕ್ಟೇರ್ ಪ್ರದೇಶ ಇರುತ್ತದೆ. 2020-21ನೇ ಸಾಲಿನ ಅತೀವೃಷ್ಟಿಯಿಂದಾಗಿ ಕೆರೆಯ ಏರಿ ಒಡೆದು ಎಡದಂಡೆ ಕಾಲುವೆ 200 ಮೀಟರ ಕೊಚ್ಚಿಕೊಂಡು ಹೋಗಿರುತ್ತದೆ. ಹಾಗೂ 2020-21ಮತ್ತು 2021-22ನೇ ಸಾಲಿನ ಅತೀ ವೃಷ್ಟಿಯಿಂದಾಗಿ ಕಾಲುವೆಯ ಸಿ.ಡಿ.ಗಳು ಹಾಳಾಗಿದ್ದು ಕಾಲುವೆಯ ಉದ್ದಕ್ಕೂ ಹೂಳು ತುಂಬಿಕೊಂಡಿರುತ್ತದೆ. 2020-21ನೇ ಸಾಲಿನಲ್ಲಿ ಅತೀವೃಷ್ಟಿ ಹಾಗೂ ನೆರೆ ಹಾವಳಿಯಿಂದ ಹಾನಿಗೊಳಗಾದ ಕೆರೆ ಪುನರುಜ್ಜೀವನಗೊಳಿಸುವ ಕಾಮಗಾರಿಗಳಿಗೆ ಒದಗಿಸಲಾದ ಅನುದಾನದಲ್ಲಿ ಸದರಿ ಕೆರೆಯ ಪುನರುಜ್ಜೀವನಕ್ಕಾಗಿ ರೂ.350.00 ಲಕ್ಷ ಅಂದಾಜು ಮೊತ್ತಕ್ಕೆ ಅನುದಾನ ಒದಗಿಸಲಾಗಿರುತ್ತದೆ. ಸದರಿ ಕಾಮಗಾರಿಯಲ್ಲಿ ಕಾಲುವೆಯ 200 ಮೀ. ಉದ್ದಕ್ಕೆ ಸಿ.ಸಿ. ಲೈನಿಂಗ್ ಹಾಗೂ ಕಾಲುವೆಯ ಪೂರ್ಣ ಉದ್ದಕ್ಕೆ ಹೂಳು ತೆಗೆಯುವುದು ಮತ್ತು ಇನ್ನಿತರ ದುರಸ್ತಿಗಾಗಿ ರೂ.12.61 ಲಕ್ಷ ಮೊತ್ತದ ಕಾಮಗಾರಿಯನ್ನು ಕೈಗೊಳ್ಳಲಾಗಿದೆ. ಉಳಿದ 5.07 ಕಿ.ಮೀ. ಉದ್ದಕ್ಕೆ ಸಿ.ಸಿ. ಲೈನಿಂಗ್ ಕಾಮಗಾರಿಯನ್ನು ಅನುದಾನದ ಲಭ್ಯತೆಯ ಆಧಾರದ ಮೇಲೆ ಕೈಗೊಳ್ಳಲು ಪರಿಶೀಲಿಸಲಾಗುವುದು.

(2) ಮಾವಿನಸೂರ ಕೆರೆಯ ಕಾಲುವೆಗಳ ಒಟ್ಟು ಉದ್ದ 4.10 ಕಿ.ಮೀ. ಆಗಿದ್ದು, ಕೆರೆಯ ಅಚ್ಚುಕಟ್ಟು 465 ಹೆಕ್ಟೇರ್ ಪ್ರದೇಶ ಇರುತ್ತದೆ. 2020-21 ಮತ್ತು 2021-22ನೇ ಸಾಲಿನ ಅತೀ ವೃಷ್ಟಿಯಿಂದಾಗಿ ಕಾಲುವೆಯ ಸಿ.ಡಿ.ಗಳು ಹಾಳಾಗಿದ್ದು ಕಾಲುವೆಯ ಉದ್ದಕ್ಕೂ ಹೂಳು ತುಂಬಿಕೊಂಡಿರುತ್ತದೆ. ಸದರಿ ಕಾಲುವೆ ದುರಸ್ತಿ ಕಾಮಗಾರಿಯನ್ನು ರೂ.60.00 ಲಕ್ಷ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ತಯಾರಿಸಲಾಗಿದ್ದು, ಅನುದಾನದ ಲಭ್ಯತೆಯ ಆಧಾರದ ಮೇಲೆ ಕೈಗೊಳ್ಳಲು ಪರಿಶೀಲಿಸಲಾಗುವುದು.

(3) ಬೆಡ್‌ಸೂರ ಕೆರೆಯ ಕಾಲುವೆಗಳ ಒಟ್ಟು ಉದ್ದ 2.00 ಕಿ.ಮೀ. ಆಗಿದ್ದು, ಕೆರೆಯ ಅಚ್ಚುಕಟ್ಟು 147.50 ಹೆಕ್ಟೇರ್ ಪ್ರದೇಶ ಇರುತ್ತದೆ. 2020-21 ಮತ್ತು 2021-22ನೇ ಸಾಲಿನ ಅತೀ ವೃಷ್ಟಿಯಿಂದಾಗಿ ಕಾಲುವೆಯ ಸಿ.ಡಿ.ಗಳು ಹಾಳಾಗಿದ್ದು ಕಾಲುವೆಯ ಉದ್ದಕ್ಕೂ ಹೂಳು ತುಂಬಿಕೊಂಡಿರುತ್ತದೆ. ಬೆಡ್‌ಸೂರ ಕೆರೆಯ ಕಾಲುವೆ ದುರಸ್ತಿ ಕಾಮಗಾರಿಗೆ ರೂ.60.00 ಲಕ್ಷ ತಗಲಬಹುದೆಂದು ಅಂದಾಜಿಸಲಾಗಿದ್ದು, ಅನುದಾನದ ಲಭ್ಯತೆಯ ಆಧಾರದ ಮೇಲೆ ಸದರಿ ಕಾಮಗಾರಿಯನ್ನು ಕೈಗೊಳ್ಳಲು ಪ್ರಸ್ತಾವನೆಯನ್ನು ಪರಿಶೀಲಿಸಲಾಗುವುದು.

ಕೆರೆಗಳ ಕಾಲುವೆಗಳ ನಿರ್ವಹಣೆಯನ್ನು ಪ್ರತಿ ವರ್ಷ 2702 ಯೋಜನೇತರ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಒದಗಿಸಲಾಗುವ ಅನುದಾನದ ಲಭ್ಯತೆ ಆಧಾರದ ಮೇಲೆ ಸುಸ್ಥಿತಿಯಲ್ಲಿಡಲು ಕ್ರಮ ವಹಿಸಲಾಗುತ್ತದೆ.

***

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 149
2. ಸದಸ್ಯರ ಹೆಸರು : ಶ್ರೀ ಬಾಲಕೃಷ್ಣ ಸಿ.ಎನ್
3. ಉತ್ತರಿಸಬೇಕಾದ ದಿನಾಂಕ : 15.02.2022

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಹಾಸನ ನಗರದಲ್ಲಿ Integrated Master Planರ ಪ್ರಕಾರ ಹಾಸನ ನಗರದ ಚನ್ನಪಟ್ಟಣ ಕೆರೆಯ ಅಂಗಳದಲ್ಲಿ ಕೈಗೊಳ್ಳಲು ಉದ್ದೇಶಿಸಲಾಗಿರುವ ವಿಹಾರಧಾಮದ ಅಭಿವೃದ್ಧಿ ಮತ್ತು ಉದ್ಯಾನವನ ನಿರ್ಮಾಣ ಮುಂತಾದ ಕಾಮಗಾರಿಗಳ ವಿವರವಾದ ಯೋಜನಾ ವರದಿಗೆ ಆಡಳತಾತ್ಮಕ ಅನುಮೋದನೆ ನೀಡಿದ್ದು, ಈ ಕಾಮಗಾರಿಗಳನ್ನು ಒಳಗೊಂಡ ಹಾಗೂ ಮಳೆಗಾಲದಲ್ಲಿ ಮಳೆನೀರು ಮತ್ತು ಕೊಳಚೆ ನೀರು ಹೊರಹಾಕುವ ಯೋಜನೆಯನ್ನು ರೂ.144.00 ಕೋಟಿಗಳಲ್ಲಿ ಕೈಗೆತ್ತಿಕೊಂಡಿರುವುದು ನಿಜವೇ; | ಹಾಸನ ನಗರದ ಚನ್ನಪಟ್ಟಣ ಕೆರೆಯ ಅಂಗಳದಲ್ಲಿ ವಿಹಾರಧಾಮದ ಅಭಿವೃದ್ಧಿ ಮತ್ತು ಉದ್ಯಾನವನ ನಿರ್ಮಾಣ ಕಾಮಗಾರಿಯ ರೂ.144.00 ಕೋಟಿ ಮೊತ್ತದ ಡಿ.ಪಿ.ಆರ್ ಪ್ರಸ್ತಾವನೆಗೆ ಸರ್ಕಾರದ ದಿನಾಂಕ:28.02.2019 ರ ಆದೇಶದಲ್ಲಿ ರೂ.36.00 ಕೋಟಿಗಳ ಅಂದಾಜು ಮೊತ್ತಕ್ಕೆ ಸೀಮಿತಗೊಳಿಸಿ ಕೈಗೆತ್ತಿಕೊಳ್ಳುವ ಷರತ್ತಿಗೊಳಪಟ್ಟು ತಾತ್ವಿಕ ಅನುಮೋದನೆ ನೀಡಲಾಗಿರುತ್ತದೆ.<br><br>ಮುಂದುವರೆದು, ಸರ್ಕಾರದ ದಿನಾಂಕ: 24.07.2019ರ ತಿದ್ದುಪಡಿ ಆದೇಶದಲ್ಲಿ, ರೂ.144.00 ಕೋಟಿ ಮೊತ್ತದ ಯೋಜನಾ ಅಂದಾಜಿಗೆ ಆಡಳತಾತ್ಮಕ ಅನುಮೋದನೆ ನೀಡಿ 2019-20 ನೇ ಸಾಲಿನಲ್ಲಿ ಕಾಮಗಾರಿಯ ವೆಚ್ಚವನ್ನು ರೂ.36.00 ಕೋಟಿಗಳಿಗೆ ಸೀಮಿತಗೊಳಿಸಿ ಹಾಗೂ ಉಳಿಕೆ ಮೊತ್ತವಾದ ರೂ.108.00 ಕೋಟಿಗಳ ಕಾಮಗಾರಿಯನ್ನು 2020-21 ನೇ ಸಾಲಿನಲ್ಲಿ ಕಾವೇರಿ ನೀರಾವರಿ ನಿಗಮಕ್ಕೆ ಹಂಚಿಕೆಯಾಗುವ ಅನುದಾನದಲ್ಲಿ ಕೈಗೆತ್ತಿಕೊಳ್ಳಲು ಅನುಮೋದನೆ ನೀಡಲಾರುತ್ತದೆ.<br><br>ತದನಂತರ, ಹಾಸನ ವಿಧಾನಸಭಾ ಕ್ಷೇತ್ರದ ಶಾಸಕರು ಸನ್ಮಾನ್ಯ ಮುಖ್ಯಮಂತ್ರಿಯವರಿಗೆ ಸಲ್ಲಿಸಿರುವ ದಿನಾಂಕ:12.09.2019 ರ ಪತ್ರದಲ್ಲಿ, ಚನ್ನಪಟ್ಟಣ ಕೆರೆ ಅಭಿವೃದ್ಧಿ ಮತ್ತು ಉದ್ಯಾನವನ ನಿರ್ಮಾಣ ಕಾಮಗಾರಿಗೆ ಸರ್ಕಾರದಿಂದ ಅನುಮೋದನೆಯಾಗಿರುವ ರೂ.144.00 ಕೋಟಿ ಮೊತ್ತದಲ್ಲಿ ಹಾಸನ ನಗರಕ್ಕೆ ಸರಿಹೊಂದುವಂತೆ ಚನ್ನಪಟ್ಟಣ ಕೆರೆ ಮತ್ತು ವಿಹಾರಧಾಮದ ಅಭಿವೃದ್ಧಿಯನ್ನು ಕೈಗೊಂಡು ಉಳಿಕೆ ಮೊತ್ತದಲ್ಲಿ ಹಾಸನ ನಗರದ ಸಮಗ್ರ ಅಭಿವೃದ್ಧಿಯ ದೃಷ್ಟಿಯಿಂದ ಇತರೆ ಉದ್ಯಾನವನಗಳು ಮತ್ತು ಸುತ್ತಮುತ್ತಲ ಪ್ರದೇಶಗಳ ಮೂಲಭೂತ ಸೌಕರ್ಯಗಳನ್ನು ಕಲ್ಪಿಸುವುದು ಅವಶ್ಯಕವಾಗಿದ್ದು, ಮಾರ್ಪಡಿಸಿದ ಪ್ರಸ್ತಾವನೆಯನ್ನು ರೂ.144.00 ಕೋಟಿ ಮೊತ್ತದ ಮಿತಿಯಲ್ಲಿ ತಯಾರಿಸಲಾಗಿದ್ದು, ಚನ್ನಪಟ್ಟಣ ಕೆರೆ ಸೇರಿದಂತೆ ಹಾಸನ ನಗರದ 6 ಪ್ರಮುಖ ಕೆರೆಗಳನ್ನು ಹಾಗೂ 9 ಉದ್ಯಾನವನಗಳನ್ನು ಹಾಗೂ ಮೂಲಸೌಲಭ್ಯ ಕಲ್ಪಿಸುವ ಕಾಮಗಾರಿಗಳನ್ನು ರೂ.144.00 ಕೋಟಿ ಮೊತ್ತದ ಮಿತಿಯಲ್ಲಿ ಅಭಿವೃದ್ಧಿಪಡಿಸಲು ಉದ್ದೇಶಿಸಲಾಗಿರುತ್ತದೆ. |

| | | |
|---|---|---|
| | | ಹಾಸನ ನಗರದ ಸಮಗ್ರ ಅಭಿವೃದ್ಧಿಯ ದೃಷ್ಟಿಯಿಂದ ಇತರೆ ಉದ್ಯಾನವನಗಳು ಮತ್ತು ಸುತ್ತಮುತ್ತಲ ಪ್ರದೇಶಗಳ ಮೂಲಭೂತ ಸೌಕರ್ಯಗಳನ್ನು ಕಲ್ಪಿಸುವ ರೂ.144.00 ಕೋಟಿಗಳ ಮೊತ್ತದ ಮಾರ್ಪಡಿಸಿದ ಯೋಜನಾ ವರದಿಗೆ ದಿನಾಂಕ:05.10.2020 ರಂದು ನಡೆದ ನಿಗಮ ಮಂಡಳಿಯ 72ನೇ ಸಭೆಯ ಅನುಮೋದನೆ ನಂತರ, ಸರ್ಕಾರದ ಆದೇಶ ದಿನಾಂಕ:02.06.2021 ರಲ್ಲಿ ಆಡಳಿತಾತ್ಮಕ ಅನುಮೋದನೆ ದೊರೆತಿರುತ್ತದೆ. |
| ಆ) | ಹಾಗಿದ್ದಲ್ಲಿ, ಈ ಯೋಜನೆಯನ್ನು ಮೂಲ ಯೋಜನೆಯಂತೆ ಯಥಾವತ್ತಾಗಿ ಕೈಗೊಳ್ಳಲು ಸರ್ಕಾರಕ್ಕಿರುವ ಅಡೆತಡೆಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಸದರಿ ಕಾಮಗಾರಿಯ ಟೆಂಡರ್‌ಗೆ ದಿನಾಂಕ:22.07.2021 ರಂದು ನಡೆದ ನಿಗಮ ಮಂಡಳಿಯ 73ನೇ ಸಭೆಯ ಅನುಮೋದನೆಯ ಮೇರೆಗೆ ರೂ.138,54,60,104/- ಟೆಂಡರ್ ಮೊತ್ತಕ್ಕೆ ದಿನಾಂಕ:30.07.2021 ರಂದು ಕರಾರು ಒಪ್ಪಂದ ಮಾಡಿಕೊಂಡು ಕಾರ್ಯಾದೇಶ ನೀಡಲಾಗಿದ್ದು, ಕಾಮಗಾರಿಯು ಪ್ರಗತಿಯಲ್ಲಿರುತ್ತದೆ. |
| ಇ) | ಮೇಲ್ಕಂಡ ಯೋಜನೆಯ ಪರಿಷ್ಕೃತ ಯೋಜನೆಯಾದ ಹಾಸನ ನಗರದ ಚನ್ನಪಟ್ಟಣ ಕೆರೆ ಸೇರಿದಂತೆ ಹಾಸನ ನಗರದ ಇತರೆ 05 ಕೆರೆಗಳು ಮತ್ತು 09 ಉದ್ಯಾನವನಗಳ ಅಭಿವೃದ್ಧಿ ಕಾಮಗಾರಿಗೆ ಸಂಬಂಧಪಟ್ಟಂತೆ ರೂ.144.00 ಕೋಟಿಗಳ ಮೊತ್ತದ ಯೋಜನೆಯ ಅಂದಾಜು, ಟೆಂಡರ್ ಕರಾರಿನ ವಿವರಗಳ ಮತ್ತು ನಿಗದಿಯಾಗಿರುವ ಟೆಂಡರ್‌ದಾರರ ಸಂಪೂರ್ಣ ಮಾಹಿತಿಯನ್ನು ನೀಡುವುದು; | ಹಾಸನ ನಗರದ ಚನ್ನಪಟ್ಟಣ ಕೆರೆಯ ಸೌಂದರೀಕರಣ ಸೇರಿದಂತೆ ಹಾಸನ ನಗರಕ್ಕೆ ಹೊಂದಿಕೊಂಡಿರುವ 06 ಕೆರೆಗಳ ಅಭಿವೃದ್ಧಿ ಮತ್ತು ಹಾಸನ ನಗರ ವ್ಯಾಪ್ತಿಯಲ್ಲಿ ಬರುವ 09 ಉದ್ಯಾನವನಗಳ ಅಭಿವೃದ್ಧಿ ಕಾಮಗಾರಿಗೆ ಸಂಬಂಧಪಟ್ಟಂತೆ ಅಂದಾಜು ಪಟ್ಟಿಯ ಘೋಷ್ವಾರೆ ಕೆಳಕಂಡಂತಿದೆ: |

| ಕ್ರ. ಸಂ | ಕೆರೆ ಮತ್ತು ಉದ್ಯಾನವನಗಳ ವಿವರಗಳು | ಅಂದಾಜು ಮೊತ್ತ (ರೂ.ಲಕ್ಷಗಳಲ್ಲಿ |
|---|---|---|
| ಅ) ಕೆರೆಗಳು: | | |
| 1 | ಚನ್ನಪಟ್ಟಣ ಕೆರೆ | 3915.33 |
| 2 | ಗವೇನಹಳ್ಳಿ ಕೆರೆ | 655.55 |
| 3 | ಬೂವನಹಳ್ಳಿ ಕೆರೆ | 554.12 |
| 4 | ಸತ್ಯಮಂಗಲ ಕೆರ | 1142.10 |
| 5 | ಹುಣಸಿನಕೆರೆ | 1123.37 |
| 6 | ಗುಡ್ಡೇನಹಳ್ಳಿ ಕೆರೆ | 336.70 |
| | **ಉಪ ಮೊತ್ತ (ಅ) :** | **7727.17** |
| ಆ) ಉದ್ಯಾನವನಗಳು: | | |
| 7 | ಮಹಾರಾಜ ಪಾರ್ಕ್ | 1436.22 |
| 8 | ವಿಜಯನಗರ ಪಾರ್ಕ್ | 461.95 |
| 9 | ಹೌಸಿಂಗ್ ಬೋರ್ಡ್ ಪಾರ್ಕ್ | 178.08 |
| 10 | ಗಂಧದ ಕೋಠಿ ಪಾರ್ಕ್ | 426.96 |
| 11 | ಹೊಯ್ಸಳ ನಗರ ಪಾರ್ಕ್ | 372.01 |
| 12 | ಫ್ರೀಡಂ ಪಾರ್ಕ್ | 783.21 |
| 13 | ಗಣೇಶ ಟೆಂಪಲ್ ಪಾರ್ಕ್ | 206.12 |
| 14 | ಹಿಂದೂ ರುದ್ರಭೂಮಿ | 163.09 |
| 15 | ಸಿಲ್ವರ್ ಜ್ಯೂಬಿಲಿ ಪಾರ್ಕ್ | 440.66 |
| | **ಉಪ ಮೊತ್ತ (ಆ):** | **4468.30** |
| | **ಒಟ್ಟು ಸಿವಿಲ್ ಕೆಲಸ (ಅ + ಆ) :** | **12195.47** |

| | | |
|---|---|---|
| | | <table><tr><td></td><td></td><td></td></tr><tr><td></td><td>ನಿರ್ವಹಣಾ ವೆಚ್ಚ (3 ವರ್ಷ)</td><td>496.00</td></tr><tr><td></td><td>ಒಟ್ಟು (ಇ)</td><td>12691.47</td></tr><tr><td></td><td>ಜಿ.ಎಸ್.ಟಿ 12%</td><td>1522.98</td></tr><tr><td></td><td>ಪಿ.ಎಂ.ಸಿ 1%</td><td>126.91</td></tr><tr><td></td><td>Consultancy service for preparation of DPR and Miscellaneous</td><td>58.64</td></tr><tr><td></td><td>ಒಟ್ಟು (ಅ+ಆ+ಇ)</td><td>14400.00</td></tr></table><br>ಮೇಲಿನ ಕಾಮಗಾರಿಯನ್ನು ಕರಾರು ಸಂಖ್ಯೆ:33/2021-22 ದಿನಾಂಕ:30.07.2021 ರಲ್ಲಿ L1 ಬಿಡ್ಡುದಾರರಾದ Sri Srinivasa Rao Balusu (M/s.BSR Infratech India Limited), No.851, D-Block, 15th Cross, Sahakaranagara, Bengalore-560092 ಇವರಿಗೆ ರೂ.138,54,60,104/- (ಅಪ್‌ಡೇಟೆಡ್ ಮೊತ್ತಕ್ಕೆ ಶೇ.9 ಹೆಚ್ಚುವರಿ) ಮೊತ್ತಕ್ಕೆ 24 ತಿಂಗಳುಗಳ ಕಾಲಾವಧಿಯೊಂದಿಗೆ ಕಾಮಗಾರಿಯನ್ನು ವಹಿಸಲಾಗಿರುತ್ತದೆ. |
| ಈ) | ಕಾವೇರಿ ನೀರಾವರಿ ನಿಗಮದ ಅನುದಾನದಲ್ಲಿ ನಗರದ ಪ್ರದೇಶಗಳಲ್ಲಿರುವ ಸಣ್ಣ ನೀರಾವರಿ ಇಲಾಖಾ ವ್ಯಾಪ್ತಿಯ ಕೆರೆಗಳನ್ನು ಮತ್ತು ನಗರಸಭೆ ವ್ಯಾಪ್ತಿಯ ಉದ್ಯಾನವನಗಳನ್ನು ಅಭಿವೃದ್ಧಿಪಡಿಸಲು ಅವಕಾಶವಿದೆಯೇ? (ಸಂಪೂರ್ಣ ಮಾಹಿತಿಯನ್ನು ನೀಡುವುದು) | ನಿಗಮದ ಅಡಿಯಲ್ಲಿ ಬರುವ ಯೋಜನೆಗಳ ಅಚ್ಚುಕಟ್ಟು ವ್ಯಾಪ್ತಿಯನ್ನು ಹೊರತುಪಡಿಸಿ ನಗರ ಪ್ರದೇಶಗಳಲ್ಲಿರುವ ಕೆರೆಗಳನ್ನು ಮತ್ತು ಉದ್ಯಾನವನಗಳನ್ನು ಅಭಿವೃದ್ಧಿಪಡಿಸುವುದು ನಿಗಮದ ಧ್ಯೇಯೋದ್ದೇಶಗಳಡಿಯಲ್ಲಿ ಬರುವುದಿಲ್ಲ.<br><br>ಆದರೆ, ಕೆಲವು ವಿಶೇಷ ಪ್ರಕರಣಗಳಲ್ಲಿ ನಿಗಮ ಮಂಡಳಿ ಸಭೆಯ ತೀರುವಳಿ ಪಡೆದು ತದನಂತರ ಪ್ರಸ್ತಾವನೆಗೆ ಸರ್ಕಾರದಿಂದ ಆಡಳಿತಾತ್ಮಕ ಅನುಮೋದನೆ ಪಡೆದು ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗುತ್ತದೆ. |

***ಸಂಖ್ಯೆ:ಜಸಂಇ 05 ಎಲ್ಎಲ್ಎ 2022***

(ಗೋವಿಂದ ಎಂ. ಕಾರಜೋಳ)
ಜಲಸಂಪನ್ಮೂಲ ಸಚಿವರು

## ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 15 |
| 2 | ಸದಸ್ಯರ ಹೆಸರು | : | ಡಾ॥. ಅಜಯ್ ಧರ್ಮಸಿಂಗ್ (ಜೇವರ್ಗಿ) |
| 3 | ಉತ್ತರಿಸುವ ದಿನಾಂಕ | : | 15-02-2022 |
| 4 | ಉತ್ತರಿಸುವವರು | : | ಮಾನ್ಯ ಮುಖ್ಯಮಂತ್ರಿಗಳು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬಿಬಿಎಂಪಿಯಿಂದ ಕಟ್ಟಡ ನಿರ್ಮಾಣಕ್ಕೆ ಸಂಬಂಧಿಸಿದಂತೆ ಶೇ. 5 ರಷ್ಟು ಮಿತಿಯವರೆಗೆ ಉಲ್ಲಂಘನೆಗಳಿಗೆ ದಂಡ ವಿಧಿಸಿ, ಮುಕ್ತಾಯ ಪ್ರಮಾಣಪತ್ರ (ಸಿ.ಸಿ) ನೀಡಲು ಬಿಬಿಎಂಪಿ ಕಟ್ಟಡ ಉಪವಿಧಿಗಳಲ್ಲಿ ಅವಕಾಶವಿದೆಯೇ; (ಪೂರ್ಣ ವಿವರ ನೀಡುವುದು) | ಬೆಂಗಳೂರು ಮಹಾನಗರ ಪಾಲಿಕೆ ಕಟ್ಟಡ ಉಪವಿಧಿ-2003 ನಿಯಮ 6.0 ರನ್ವಯ ಶೇ.5ರ ಮಿತಿಯವರೆಗೆ ಉಲ್ಲಂಘನೆಗಳಿಗೆ ದಂಡ ವಿಧಿಸಿ, ಸ್ವಾಧೀನಾನುಭವ ಪ್ರಮಾಣ ಪತ್ರ (Occupancy Certificate) ನೀಡಲು ಅವಕಾಶ ಕಲ್ಪಿಸಲಾಗಿರುತ್ತದೆ. ವಿವರಗಳನ್ನು ಅನುಬಂಧದಲ್ಲಿ ನೀಡಿದೆ. |
| ಆ) | ಹಾಗಿದ್ದಲ್ಲಿ, 2020ರ ಬಿಬಿಎಂಪಿ ಕಾಯ್ದೆಗೆ ಅನುಗುಣವಾಗಿ ಬಿಬಿಎಂಪಿ ಕಟ್ಟಡ ಉಪವಿಧಿಯನ್ನು ಪರಿಷ್ಕರಣೆ ಮಾಡುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; (ಪೂರ್ಣ ವಿವರ ನೀಡುವುದು) | ಬಿ.ಬಿ.ಎಂ.ಪಿ. ಕಾಯ್ದೆ-2020ಕ್ಕೆ ಅನುಗುಣವಾಗಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಕಟ್ಟಡ ಉಪವಿಧಿ-2021 (ಕರಡು) ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿರುತ್ತದೆ. |
| ಇ) | ಮಂಜೂರಾತಿ ಪಡೆದ ಕಟ್ಟಡ ಯೋಜನೆಯಿಂದ ಶೇ. 15 ರಷ್ಟು ಉಲ್ಲಂಘನೆಯಾಗಿದ್ದರೂ ಅಂತಹ ಕಟ್ಟಡಗಳಿಗೆ ದಂಡ ವಿಧಿಸಿ, ಮುಕ್ತಾಯ ಪ್ರಮಾಣಪತ್ರ ನೀಡಲು ಅವಕಾಶ ಕಲ್ಪಿಸಲಾಗುವುದೇ? (ಪೂರ್ಣ ವಿವರ ನೀಡುವುದು) | ಬೆಂಗಳೂರು ಮಹಾನಗರ ಪಾಲಿಕೆ ಕಟ್ಟಡ ಉಪವಿಧಿ - 2003 ನಿಯಮ 6.0 ರಲ್ಲಿ ಕಟ್ಟಡ ನಿರ್ಮಾಣ ಸಮಯದಲ್ಲಿನ ಉಲ್ಲಂಘನೆಯ ಮಿತಿಯನ್ನು ಶೇ. 5ರ ಬದಲಾಗಿ ಶೇ. 15 ರವರೆಗೆ ಹೆಚ್ಚಿಸಿ ತಿದ್ದುಪಡಿ ತರುವ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿರುತ್ತದೆ. |

ನಅಇ 78 ಎಂಎನ್‌ಯು 2022

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

ಅನುಬಂಧ



# BANGALORE MAHANAGARA PALIKE
# BUILDING BYE-LAWS 2003

(Approved by the Government in their Order No.UDD/223/MNU/2001, Dated 21-02-2004 – Published in pursuance of Section 428 Of the Karnataka Municipal Corporation Act 1976)

## PART I

## GENERAL

1.0 SHORT TITLE, EXTENT AND COMMENCEMENT.

1.1 These Bye-Laws shall be called " The Bangalore Mahanagara Palike Building Bye – Laws 2003"

1.2 These Bye-laws shall be applicable within the jurisdiction of the Bangalore Mahanagara Palike as notified by the Government under Chapter II of the Karnataka Municipal Corporations Act. 1976.

1.3 These Bye-laws shall come into operation from 5th of June 2004.

(c) If the construction or reconstruction of a building is not completed within five years from the date of issue of licence for such a construction, the owner shall intimate the Authority, the stage of work at the expiry of five years. The work shall not be continued after the expiry of five years without obtaining prior permission from the Authority. Such continuation shall be permitted, if the construction or reconstruction is carried out according to the licenced plan and if the Authority is satisfied that at least 75 percent of the permitted floor area of the building is completed before the expiry of five years. If not, the work shall be continued according to a fresh licence to be obtained from the Authority.

5.6.2 For all high rise buildings, the work shall also be subject to inspection by the officers of the Karnataka State Fire Service Department and the occupancy certificate shall be issued only after obtaining a clearance certificate from the Director of Fire Services.

5.7 **Occupancy or letting of the new buildings** - No person shall occupy or allow any other person to occupy any new building or part of a new building for any purpose whatsoever until occupancy certificate to such buildings or part thereof has been granted by an officer authorised to give such certificate if in his opinion in every respect the building is completed according to the sanctioned plans and fit for the use for which it is erected. The Authority may in exceptional cases (after recording reasons) allow partial occupancy for different floors of a building.

6.0 **Deviations during Construction**

i) Wherever any construction is in violation/deviation of the sanctioned plan, the Commissioner may, if he considers that the violations / deviations are within 5% of (1) the set back to be provided around the building, (2) plot coverage (3) floor area ratio and (4) height of the building and that the demolition under chapter XV of the Act is not feasible without affecting structural stability, he may regularise such violations/deviations after recording detailed reasons for the same.

ii) Violation/deviation as at 6.0 (i) above may be regularised only after sanctioning the modified plan recording thereon the violations/deviations and after the levy of fee prescribed by the Corporation from time to time.

iii) Regularisation of violations / deviations under this provision are not applicable to the buildings which are constructed without obtaining any sanctioned plan whatsoever and also the violations / deviations which are made inspite of the same being specifically deleted or rejected in the sanctioned plan.

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : 150 |
| ಸದಸ್ಯರ ಹೆಸರು | : ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) |
| ಉತ್ತರಿಸುವ ದಿನಾಂಕ | : 15.02.2022 |
| ಉತ್ತರಿಸುವ ಸಚಿವರು | : ಜಲಸಂಪನ್ಮೂಲ ಸಚಿವರು |

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಬೈಲಹೊಂಗಲ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಬೈಲಹೊಂಗಲ ಹಾಗೂ ಸವದತ್ತಿ ತಾಲ್ಲೂಕಿನ ಎಷ್ಟು ಗ್ರಾಮಗಳು ಮಲಪ್ರಭಾ ಯೋಜನೆಯ ಮುಳುಗಡೆ ಪ್ರದೇಶದ ವ್ಯಾಪ್ತಿಯಲ್ಲಿ ಬರುತ್ತವೆ; | ಬೈಲಹೊಂಗಲ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಬೈಲಹೊಂಗಲ ತಾಲ್ಲೂಕಿನ 15 ಗ್ರಾಮಗಳು ಹಾಗೂ ಸವದತ್ತಿ ತಾಲ್ಲೂಕಿನ 12 ಗ್ರಾಮಗಳು ಮಲಪ್ರಭಾ ಯೋಜನೆಯ ಮುಳುಗಡೆ ಪ್ರದೇಶದ ವ್ಯಾಪ್ತಿಯಲ್ಲಿ ಬರುತ್ತವೆ. |
| ಆ) | ಈ ಪುನರ್ವಸತಿ ಗ್ರಾಮಗಳ ವ್ಯಾಪ್ತಿಯಲ್ಲಿನ ಪ್ರದೇಶವು ಕಪ್ಪು ಮಣ್ಣಿನಿಂದ ಕೂಡಿದ್ದು, ಈ ಕಪ್ಪು ಮಿಶ್ರಿತ ಮಣ್ಣಿನಿಂದ ಕೂಡಿದ ರಸ್ತೆಗಳು ಸಂಪೂರ್ಣವಾಗಿ ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಇ) | ಸವದತ್ತಿ ತಾಲ್ಲೂಕಿನ 1) ಏಣಗಿ-ಹಳೇ ಏಣಗಿ 2) ಮಲ್ಲೂರು-ಜಾಕವೆಲ್ ರಸ್ತೆ 3) ಬಡ್ಲಿ-ಹಳೇ ಬಡ್ಲಿ 4) ಸುತಗಟ್ಟಿ-ಹಿಟ್ಟಣಗಿ-ಏಣಗಿ ಮುಂತಾದ ರಸ್ತೆಗಳು ಸಂಪೂರ್ಣವಾಗಿ ನಾಶವಾಗಿರುವುದು ನಿಜವಲ್ಲವೇ; | ಮಲಪ್ರಭಾ ಯೋಜನೆಯ ಅಚ್ಚುಕಟ್ಟು ಪ್ರದೇಶದಲ್ಲಿನ ಸವದತ್ತಿ ತಾಲ್ಲೂಕಿನ (1) ಏಣಗಿ-ಹಳೆ ಏಣಗಿ, (2) ಮಲ್ಲೂರು-ಜಾಕವೆಲ್ ರಸ್ತೆ, (3) ಬಡ್ಲಿ-ಹಳೇ ಬಡ್ಲಿ, (4) ಸುತಗಟ್ಟಿ-ಹಿಟ್ಟಣಗಿ-ಏಣಗಿ ರಸ್ತೆಗಳ ದುರಸ್ತಿಗಾಗಿ ಕರ್ನಾಟಕ ನೀರಾವರಿ ನಿಗಮದಲ್ಲಿ ಅಂದಾಜು ಪತ್ರಿಕೆಯನ್ನು ತಯಾರಿಸಲಾಗುತ್ತಿದೆ. |
| ಈ) | ಹಾಗಿದ್ದಲ್ಲಿ, ರೈತರ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ಜಲಸಂಪನ್ಮೂಲ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಈ ರಸ್ತೆಗಳನ್ನು ದುರಸ್ತಿ / ಮರುನಿರ್ಮಾಣ ಮಾಡಲು ಸರ್ಕಾರವು ಕೂಡಲೇ ಕ್ರಮ ವಹಿಸುವುದೇ? | |

ಸಂಖ್ಯೆ:ಜಸಂಇ 02 ಡಬ್ಲ್ಯುಬಿಎಂ 2022

(ಗೋವಿಂದ ಎಂ.ಕಾರಜೋಳ)
ಜಲ ಸಂಪನ್ಮೂಲ ಸಚಿವರು

## ಕರ್ನಾಟಕ ವಿಧಾನ ಸಭೆ

(1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 151

(2) ಮಾನ್ಯ ಸದಸ್ಯರ ಹೆಸರು : ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ)

(3) ಉತ್ತರಿಸಬೇಕಾದ ದಿನಾಂಕ : 15.02.2022

(4) ಉತ್ತರಿಸುವ ಸಚಿವರು : ಮಾನ್ಯ ಕಾನೂನು ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆ, ಬೈಲಹೊಂಗಲ ನಗರದಲ್ಲಿ ಈಗಿರುವ ನ್ಯಾಯಾಲಯದ ಕಟ್ಟಡವು ಚಿಕ್ಕದಾಗಿದ್ದು, ಇದರಿಂದ ಸಾರ್ವಜನಿಕರಿಗೆ ಹಾಗೂ ನ್ಯಾಯಾಲಯದ ಕಾರ್ಯಕಲಾಪ ನಡೆಸಲು ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ.<br><br>ಪ್ರಸ್ತುತ ಬೈಲಹೊಂಗಲದಲ್ಲಿ ಮಂಜೂರಾದ ನ್ಯಾಯಾಲಯಗಳ ಕಾರ್ಯನಿರ್ವಹಣೆಗೆ ಸಾಕಷ್ಟು ಸ್ಥಳಾವಕಾಶ ಇರುತ್ತದೆ. |
| ಆ) | ಈ ಕಟ್ಟಡವನ್ನು ವಿಸ್ತರಣೆ ಮಾಡುವ ಸಲುವಾಗಿ ಈಗಾಗಲೇ ಪ್ರಸ್ತಾವನೆಯನ್ನು ಸಲ್ಲಿಸಿರುವುದು ನಿಜವಲ್ಲವೇ; | ಯಾವುದೇ ಪ್ರಸ್ತಾವನೆ ಇರುವುದಿಲ್ಲ. |
| ಇ) | ಎಷ್ಟು ಮೊತ್ತಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆ; | ಉದ್ಭವಿಸುವುದಿಲ್ಲ. |
| ಈ) | ಹಾಗಿದ್ದಲ್ಲಿ, ಸದರಿ ಮೊತ್ತವನ್ನು ಬಿಡುಗಡೆ ಮಾಡಿ ಈ ಕೆಲಸವನ್ನು ಕೈಗೊಳ್ಳಲು ಕ್ರಮ ಕೈಗೊಳ್ಳಲಾಗುವುದೇ? | ಉದ್ಭವಿಸುವುದಿಲ್ಲ. |

ಸಂಖ್ಯೆ: ಲಾ-ಎಲ್‌ಸಿಇ/27/2022

(ಜೆ.ಸಿ.ಮಾಧುಸ್ವಾಮಿ)
ಕಾನೂನು, ಸಂಸದೀಯ ಮತ್ತು ಶಾಸನ ರಚನೆ
ಹಾಗೂ ಸಣ್ಣ ನೀರಾವರಿ ಸಚಿವರು

# ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1] | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 152 |
| 2] | ಮಾನ್ಯ ಸದಸ್ಯರ ಹೆಸರು | : | ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) |
| 3] | ಉತ್ತರಿಸುವ ದಿನಾಂಕ | : | 15/02/2022 |
| 4] | ಉತ್ತರಿಸುವ ಸಚಿವರು | : | ಗೃಹ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೈಲಹೊಂಗಲ ನಗರವು ಅತೀ ಹೆಚ್ಚಿನ ಜನಸಂಖ್ಯೆಯನ್ನು ಹೊಂದಿದ ನಗರವಾಗಿದ್ದು, ಇಲ್ಲಿ ಹೆಚ್ಚಿನ ವಾಹನಗಳು ಸಂಚರಿಸುವುದರಿಂದ ಸಂಚಾರ ದಟ್ಟಣೆ ಉಂಟಾಗಿ ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವುದರಿಂದ ಇಲ್ಲಿ ಸಂಚಾರಿ ಪೊಲೀಸ್ ಠಾಣೆ ಅವಶ್ಯಕವಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೈಲಹೊಂಗಲ ನಗರದಲ್ಲಿ ಸಂಚಾರ ದಟ್ಟಣೆ ನಿಯಂತ್ರಿಸಲು ಈಗಿರುವ ಬೈಲಹೊಂಗಲ ಪೊಲೀಸ್ ಠಾಣೆಯ ಅಧಿಕಾರಿ/ ಸಿಬ್ಬಂದಿಗಳನ್ನು ಅಂತಹ ಸ್ಥಳಗಳಿಗೆ ಕರ್ತವ್ಯಕ್ಕೆ ನಿಯೋಜಿಸಿ ಕ್ರಮ ಕೈಗೊಳ್ಳಲಾಗುತ್ತಿದೆ. ಆದ್ದರಿಂದ, ಬೆಳಗಾವಿ ಜಿಲ್ಲೆಯ ಬೈಲಹೊಂಗಲ ನಗರದಲ್ಲಿ ಪ್ರಸ್ತುತ ಸಂಚಾರಿ ಪೊಲೀಸ್ ಠಾಣೆ ತೆರೆಯುವ ಪ್ರಸ್ತಾವನೆಯನ್ನು ರಾಷ್ಟ್ರೀಯ ಪೊಲೀಸ್ ಆಯೋಗದ ಮಾನದಂಡಗಳನುಸಾರ ಪರಿಶೀಲಿಸಲಾಗುವುದು. |
| ಆ) | ಈಗಾಗಲೇ ಅನೇಕ ಬಾರಿ ಆ ಭಾಗದ ಜನಪ್ರತಿನಿಧಿಗಳು ಬೈಲಹೊಂಗಲ ನಗರಕ್ಕೆ ಸಂಚಾರಿ ಪೊಲೀಸ್ ಠಾಣೆ ಮಂಜೂರು ಮಾಡುವಂತೆ ಪ್ರಸ್ತಾವನೆ ಸಲ್ಲಿಸಿರುವುದು ನಿಜವಲ್ಲವೇ; | |
| ಇ) | ಹಾಗಾದರೆ ಪ್ರಸಕ್ತ ವರ್ಷ ಬೈಲಹೊಂಗಲ ನಗರದಲ್ಲಿ ಒಂದು ಸಂಚಾರಿ ಪೊಲೀಸ್ ಠಾಣೆ ಮಂಜೂರು ಮಾಡಲು ಸರ್ಕಾರವು ಕ್ರಮ ಕೈಗೊಳ್ಳುವುದೇ? | |

**ಸಂಖ್ಯೆ: ಹೆಚ್‌ಡಿ 16 ಪಿಓಪಿ 2022**

**(ಆರಗ ಜ್ಞಾನೇಂದ್ರ)**
ಗೃಹ ಸಚಿವರು.

**ಕರ್ನಾಟಕ ವಿಧಾನ ಸಭೆ**

| | | |
|---|---|---|
| 1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 153 |
| 2) ಮಾನ್ಯ ಸದಸ್ಯರ ಹೆಸರು | : | ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) |
| 3) ಉತ್ತರಿಸುವ ದಿನಾಂಕ | : | 15.02.2022 |
| 4) ಉತ್ತರಿಸುವ ಸಚಿವರು | : | ಗೃಹ ಸಚಿವರು |

*****

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಬೆಳಗಾವಿ ಜಿಲ್ಲೆ, ಬೈಲಹೊಂಗಲ ಪಟ್ಟಣದಲ್ಲಿ ಪೊಲೀಸ್ ಸಿಬ್ಬಂದಿಗಳಿಗೆ ವಸತಿ ಗೃಹದ ಅವಶ್ಯಕತೆಯಿರುವುದು ಸರ್ಕಾರದ ಗಮನದಲ್ಲಿದೆಯೇ? | ಬೆಳಗಾವಿ ಜಿಲ್ಲೆಯ ಬೈಲಹೊಂಗಲ ಪಟ್ಟಣದಲ್ಲಿ ಒಟ್ಟು 64 ಜನ ಪೊಲೀಸ್ ಅಧಿಕಾರಿ/ಸಿಬ್ಬಂದಿಗಳ ಮಂಜೂರಾತಿ ಬಲ ಇರುತ್ತದೆ. ಪ್ರಸ್ತುತ ಬೈಲಹೊಂಗಲದಲ್ಲಿ ಒಟ್ಟು 59 ವಸತಿ ಗೃಹಗಳು ಇದ್ದು, ಮಂಜೂರಾತಿ ಬಲದ ಶೇಕಡಾ 90% ಕಿಂತ ಹೆಚ್ಚಿಗೆ ವಸತಿ ಗೃಹಗಳು ಇರುವುದರಿಂದ ಬೈಲಹೊಂಗಲದಲ್ಲಿ ಪುನಃ ಹೊಸದಾಗಿ ವಸತಿ ಗೃಹಗಳ ನಿರ್ಮಾಣದ ಅವಶ್ಯಕತೆ ಇರುವುದಿಲ್ಲ. |
| ಆ. | ಇಲ್ಲಿನ ಪೊಲೀಸ್ ಇಲಾಖೆಗೆ ಸೇರಿದ ಜಮೀನನ್ನು ಸಾರ್ವಜನಿಕರು ಅತಿಕ್ರಮಣ ಮಾಡುತ್ತಿರುವುದರಿಂದ ಸುತ್ತಲು ಕಾಂಪೌಂಡು ಹಾಗೂ ಇನ್ನಿತರೆ ಮೂಲಭೂತ ಸೌಕರ್ಯದ ಅವಶ್ಯಕತೆಯಿರುವುದು ಸರ್ಕಾರದ ಗಮನದಲ್ಲಿದೆಯೇ; | ಇಲ್ಲಿನ ಪೊಲೀಸ್ ಇಲಾಖೆಗೆ ಸೇರಿದ ಜಮೀನನ್ನು ಸಾರ್ವಜನಿಕರು ಅತಿಕ್ರಮಣ ಮಾಡಿರುವುದಿಲ್ಲ. ಸದರಿ ಜಮೀನಿನ ಸುತ್ತ ಭಾಗಶಃ ಕಾಂಪೌಂಡ್ ಗೋಡೆಯನ್ನು ನಿರ್ಮಿಸಲಾಗಿದೆ ಹಾಗೂ ಮೂಲಭೂತ ಸೌಕರ್ಯಗಳಾದ ನೀರು, ಒಳಚರಂಡಿ, ವಿದ್ಯುತ್ ಸಂಪರ್ಕಗಳನ್ನು ಸಹ ಒದಗಿಸಲಾಗಿರುತ್ತದೆ. |
| ಇ. | ಹಾಗಾದರೆ, ಈ ಬಗ್ಗೆ, ಸರ್ಕಾರ ಕೂಡಲೇ ಕ್ರಮ ಕೈಗೊಳ್ಳುವುದೇ? (ವಿವರ ನೀಡುವುದು) | |

**ಸಂಖ್ಯೆ: ಹೆಚ್‌ಡಿ 08 ಪಿಬಿಎಲ್ 2022**

**(ಆರಗ ಜ್ಞಾನೇಂದ್ರ)**
ಗೃಹ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 154
ಸದಸ್ಯರ ಹೆಸರು : ಶ್ರೀ ದೇವಾನಂದ್ ಫುಲಸಿಂಗ್ ಚವಾಣ್ (ನಾಗಠಾಣ)
ಉತ್ತರಿಸುವ ದಿನಾಂಕ : 15.02.2022
ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ನಾಗಠಾಣ ಮತಕ್ಷೇತ್ರದಲ್ಲಿ ಪ್ರಗತಿಯಲ್ಲಿರುವ ಚಿಮ್ಮಲಗಿ ಏತ ನೀರಾವರಿ ಯೋಜನೆಯ ನಾಗಠಾಣ ಬ್ರ್ಯಾಂಚ್ ಕೆನಾಲ್ ಹಾಗೂ ಮುಳವಾಡ ಏತ ನೀರಾವರಿ ಯೋಜನೆಯ ತಿಡಗುಂದಿ ಬ್ರ್ಯಾಂಚ್ ಕೆನಾಲ್ ಕಾಲುವೆ ನಿರ್ಮಾಣ ಕಾಮಗಾರಿಗಳು ಕುಂಠಿತಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಅಧಿಕಾರಿಗಳ ನಿರ್ಲಕ್ಷ ಹಾಗೂ ಆಸಕ್ತಿಯ ಕೊರತೆಯಿಂದಾಗಿ ಭೂಸ್ವಾಧೀನ ಪ್ರಕ್ರಿಯೆ ವಿಳಂಬವಾಗಿ ಕೆರೆಗಳಿಗೆ ನೀರು ಹರಿಯದೇ ರೈತರು ಸಂಕಷ್ಟಕ್ಕೆ ಒಳಗಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | **ಚಿಮ್ಮಲಗಿ ಏತ ನೀರಾವರಿ ಯೋಜನೆ:**<br><br>ಕೃಷ್ಣಾ ಮೇಲ್ದಂಡೆ ಯೋಜನೆ ಹಂತ–3 ರಡಿಯ ಚಿಮ್ಮಲಗಿ ಏತ ನೀರಾವರಿ ಯೋಜನೆಯಡಿ 87,068 ಹೆಕ್ಟೇರ್ ಕ್ಷೇತ್ರಕ್ಕೆ ನೀರಾವರಿ ಕಲ್ಪಿಸುವುದಾಗಿರುತ್ತದೆ. ಯೋಜನೆಯ ಪೂರ್ವ ಮುಖ್ಯ ಕಾಲುವೆಯ ಡೋಣಿ ನದಿ ನಂತರ ಬರುವ ಕೋರವಾರ್ ಶಾಖಾ ಕಾಲುವೆ ಕಿ.ಮೀ. 0.00 ರಿಂದ 45.16 ಹಾಗೂ ನಾಗಠಾಣ ಶಾಖಾ ಕಾಲುವೆ ಕಿ.ಮೀ. 0.00 ರಿಂದ 105.98ರ ವರೆಗಿನ ಪ್ಯಾಕೇಜ್ ಕಾಮಗಾರಿಗಳು ವಿವಿಧ ಹಂತದ ಪ್ರಗತಿಯಲ್ಲಿವೆ.<br><br>ನಾಗಠಾಣ ಶಾಖಾ ಕಾಲುವೆ ಕಿ.ಮೀ. 0.00 ರಿಂದ 80.00ರವರೆಗಿನ ಬಹುತೇಕ ಪೂರ್ಣಗೊಂಡಿದ್ದು, ಕಿ.ಮೀ. 40.00 ರಿಂದ 50.00 ರ ವರೆಗಿನ ನಿರ್ಮಾಣ ಪ್ಯಾಕೇಜ್ ಕಾಮಗಾರಿಯಲ್ಲಿ ಭೂಮಾಲೀಕರು ಹೆಚ್ಚಿನ ಭೂ ಪರಿಹಾರ ನೀಡಲು ಒಟ್ಟು 3 ಪ್ರಕರಣಗಳಲ್ಲಿ ನ್ಯಾಯಾಲಯಕ್ಕೆ ಮೊರೆ ಹೋಗಿರುತ್ತಾರೆ. ಈ ಪೈಕಿ ಒಂದು ಪ್ರಕರಣದ ತೀರ್ಪು ಮಾನ್ಯ ನ್ಯಾಯಾಲಯದ ತೀರ್ಪಿನ ಪ್ರಕಾರ ಪರಿಹಾರ ಮೊತ್ತ ಫಲಾನುಭವಿ ರೈತರಿಗೆ ಪಾವತಿಸಿದ ನಂತರ ಕಾಮಗಾರಿ ಪ್ರಾರಂಭಿಸಲು ಸೂಚಿಸಲಾಗಿರುತ್ತದೆ. ಇನ್ನೂ 2 ಪ್ರಕರಣಗಳು ನ್ಯಾಯಾಲದಲ್ಲಿ ವಿವಿಧ ಹಂತದಲ್ಲಿವೆ. ಹೀಗಾಗಿ ಸದರಿ ರೀಚ್‌ನಲ್ಲಿ ಕಾಮಗಾರಿಯನ್ನು ಪೂರ್ಣಗೊಳಿಸಲು ವಿಳಂಬವಾಗಿರುತ್ತದೆ. ನ್ಯಾಯಾಲದಲ್ಲಿ ಪ್ರಕರಣಗಳನ್ನು ತುರ್ತಾಗಿ ಇತ್ಯರ್ಥಗೊಳಿಸಲು ಸೂಕ್ತ ಕ್ರಮ ಜರುಗಿಸಲಾಗುವುದು.<br><br>ಮುಂದುವರೆದು, ಕಿ.ಮೀ. 80.00 ರಿಂದ 90.00ರ ವರೆಗಿನ ಪ್ಯಾಕೇಜ್ ಕಾಮಗಾರಿಯಲ್ಲಿ ಬಹುತೇಕ ಪೂರ್ಣಗೊಂಡಿದ್ದು ಕೇವಲ 600 ಮೀ. ನಷ್ಟು ಮಾತ್ರ ಬಾಕಿ ಇದ್ದು, ಸದರಿ ಪ್ರಕರಣದಲ್ಲಿ ಕಾಲುವೆ ಆಲೈನ್‌ಮೆಂಟ್‌ನಲ್ಲಿ ತೋಟಗಾರಿಕಾ ಬೆಳೆಗಳ ಮೌಲ್ವೀಕರಣವನ್ನು ತೋಟಗಾರಿಕಾ ಇಲಾಖೆಯವರು ನೀಡಬೇಕಾಗಿದ್ದು, ಸದರಿ ಮೌಲ್ವೀಕರಣದ ವರದಿ ಬಂದ ನಂತರ ಮುಂದಿನ ಭೂಸ್ವಾಧೀನ ಪ್ರಕ್ರಿಯೆ ಪೂರ್ಣಗೊಳಿಸಲಾಗುವುದು.<br><br>ಕಿ.ಮೀ. 90.00 ರಿಂದ 105.98 ರ ವರೆಗಿನ ಪ್ಯಾಕೇಜ್ ಕಾಮಗಾರಿಯಲ್ಲಿ ಹೆಚ್ಚುವರಿ ಆರ್ಥಿಕ ಹೊಣೆಗಾರಿಕೆ ಪ್ರಸ್ತಾವನೆ ಅನುಮೋದನೆ ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆದು ಸದರಿ ಕಾಮಗಾರಿಯನ್ನು ಪೂರ್ಣಗೊಳಿಸಲಾಗುವುದು.<br><br>ನಾಗಠಾಣ ಶಾಖಾ ಕಾಲುವೆ ಕಿ.ಮೀ 0.00 ರಿಂದ 40.00 ವರೆಗಿನ ಕಾಮಗಾರಿಗಳಲ್ಲಿ ಬೊಮ್ಮನಜೋಗಿ, ಕಡ್ಲೇವಾಡ, ಮುಳಸಾವಳಗಿ ಮತ್ತು ಚಿಕ್ಕರೂಗಿ ಕೆರೆಗಳಿಗೆ ನೀರನ್ನು ತುಂಬಲಾಗುತ್ತಿದೆ. ಕಿಮಿ. 49.100 ರಲ್ಲಿ ವಿತರಣಾ ಕಾಲುವೆ–18 ರಿಂದ ಆಹೇರಿ ಜಂಬಗಿ ಕೆರೆಗೆ ನೀರು ತುಂಬಿಸಲು ಉದ್ದೇಶಿಸಿದ್ದು, ಕಿ.ಮೀ. 40.00 ರಿಂದ 50.00 ರ ವರೆಗಿನ ನಿರ್ಮಾಣ ಪ್ಯಾಕೇಜ್ ಕಾಮಗಾರಿಯಲ್ಲಿ ಭೂಸ್ವಾಧೀನ ಪೂರ್ಣಗೊಳಿಸಿ ಸದರಿ ಕೆರೆಗೆ ನೀರು ತುಂಬಿಸಲು ಸೂಕ್ತ ಕ್ರಮ ಜರುಗಿಸಲಾಗುವುದು. |
| ಆ) | ಹಾಗಿದ್ದಲ್ಲಿ, ಇದನ್ನು ಸರಿಪಡಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; | |

| | | |
|---|---|---|
| | | **ಮುಳವಾಡ ಏತ ನೀರಾವರಿ ಯೋಜನೆ ಹಂತ–3**<br><br>ಕೃಷ್ಣಾ ಮೇಲ್ದಂಡೆ ಯೋಜನೆ ಹಂತ–3ರ ಮುಳವಾಡ ಏತ ನೀರಾವರಿ ಯೋಜನೆ ಅಡಿ ವಿಜಯಪುರ ಜಿಲ್ಲೆಯಡಿಯ ಒಟ್ಟು 2,27,996 ಹೆ. ಅಚ್ಚುಕಟ್ಟು ಕ್ಷೇತ್ರಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಲು ಉದ್ದೇಶಿಸಲಾಗಿರುತ್ತದೆ.<br><br>ಮುಳವಾಡ ಏತ ನೀರಾವರಿ ಯೋಜನೆ ಹಂತ–3 ರಡಿಯ ತಿಡಗುಂದಿ ಶಾಖಾ ಕಾಲುವೆ ಕಿ.ಮೀ. 0.00 ದಿಂದ 40.00ರ ವರೆಗಿನ ಕಾಮಗಾರಿ ಪೂರ್ಣಗೊಂಡಿದ್ದು ಪ್ರಾಯೋಗಿಕವಾಗಿ ನೀರು ಹರಿಸಲಾಗಿದೆ. ಮುಂದುವರೆದು, ಕಿ.ಮೀ. 40.00 ರಿಂದ 65.00ರ ವರೆಗಿನ ಪ್ಯಾಕೇಜ್ ಕಾಮಗಾರಿಗಳು ವಿವಿಧ ಹಂತದ ಪ್ರಗತಿಯಲ್ಲಿವೆ.<br><br>ಪ್ರಸ್ತುತ ತಿಡಗುಂದಿ ಶಾಖಾ ಕಾಲುವೆ ಕಿ.ಮೀ. 40.00 ದಿಂದ 43.00 ಮತ್ತು ಕಿ.ಮೀ. 44.00 ದಿಂದ ಕಿ.ಮೀ. 47.00 ರವರೆಗಿನ ಕಾಮಗಾರಿಯನ್ನು ಪೂರ್ಣಗೊಳಿಸಿ ಕನ್ನೂರ ಬಾಂದಾರ, ಡೊಮನಾಳ ಕೆರೆ ಹಾಗೂ ತಿಡಗುಂದಿ ಕೆರೆಗಳನ್ನು ಎಪ್ರಿಲ್–2020 ರಿಂದ ಇಲ್ಲಿಯವರೆಗೆ ವರ್ಷದಲ್ಲಿ ಎರಡು ಬಾರಿ ತುಂಬಿಸಲಾಗುತ್ತಿದೆ.<br><br>ಕಿ.ಮೀ 43.00 ದಿಂದ 44.00 ಕಿ.ಮೀ ರವರೆಗಿನ ಕಾಮಗಾರಿಯ ಆಲೈನ್‌ಮೆಂಟ್‌ನಲ್ಲಿ (ಡೊಮನಾಳ ಗ್ರಾಮ) ಕೆಲವು ಕಟ್ಟಡಗಳು ಬರುತ್ತಿದ್ದು, ಆ ಭಾಗದಲ್ಲಿ ಬರುವ ಮಾಲಿಕರು ಅವುಗಳ ಪರಿಹಾರಧನವನ್ನು ನೀಡಿದ ನಂತರವೇ ಕಾಮಗಾರಿಯನ್ನು ನಿರ್ವಹಿಸಲು ಸೂಚಿಸಿ ತಕರಾರು ಮಾಡಿರುತ್ತಾರೆ ಮತ್ತು ಕೋವಿಡ್–1ನೇ ಅಲೆ ಹಾಗೂ 2ನೇ ಅಲೆಯಿಂದ ಕಾಮಗಾರಿಗೆ ಅವಶ್ಯವಿರುವ ಸಾಮಗ್ರಿಗಳು, ಕಾರ್ಮಿಕರು ಲಭ್ಯವಿಲ್ಲದ ಕಾರಣ ಕಾಮಗಾರಿಯನ್ನು ಪೂರ್ಣಗೊಳಿಸುವಲ್ಲಿ ವಿಳಂಭವಾಗಿರುತ್ತದೆ. ಪ್ರಸ್ತುತ ಕಿ.ಮೀ 43.00 ದಿಂದ 44.00 ಕಿ.ಮೀ. ವರೆಗಿನ ಕಾಲುವೆಯ ಭೂಸ್ವಾಧೀನದ ಐತೀರ್ಪು ದಿನಾಂಕ: 31.01.2022 ರಂದು ಪೂರ್ಣಗೊಂಡಿರುತ್ತದೆ. |
| ಇ) | ಚಿಮ್ಮಲಗಿ ಏತ ನೀರಾವರಿ ಯೋಜನೆ ಹಾಗೂ ಮುಳವಾಡ ಏತ ನೀರಾವರಿ ಯೋಜನೆಗಳಡಿ ಕಾಲುವೆಗಳ ನಿರ್ಮಾಣಕ್ಕಾಗಿ ಸ್ವಾಧೀನ ಪಡಿಸಿಕೊಳ್ಳಲಾಗಿರುವ ಜಮೀನು ಎಷ್ಟು; ಇನ್ನೂ ಪರಿಹಾರ ಒದಗಿಸಬೇಕಾದ ಜಮೀನು ಎಷ್ಟು; ಪರಿಹಾರ ಒದಗಿಸಲು ವಿಳಂಬವಾಗಿರುವುದಕ್ಕೆ ಕಾರಣಗಳೇನು; (ರೈತರ ಹೆಸರು, ಗ್ರಾಮದ ಹೆಸರು, ಸರ್ವೆ ನಂಬರ್, ವಿಸ್ತೀರ್ಣಗಳ ಮಾಹಿತಿಯನ್ನು ನೀಡುವುದು) | ವಿವರಗಳನ್ನು ಅನುಬಂಧ–1 ರಲ್ಲಿ ನೀಡಲಾಗಿದೆ. |
| ಈ) | ತಿಡಗುಂದಿ ಬ್ರ್ಯಾಂಚ್ ಕೆನಾಲ್ ಕಾಲುವೆ ನಿರ್ಮಾಣ ಕಾಮಗಾರಿ ಹಾಗೂ ಚಡಚಣ ಏತ ನೀರಾವರಿ ಯೋಜನೆಯ ಉಮರಾಣಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಭೂಮಿ ಪೂಜಾ ಸಂದರ್ಭದಲ್ಲಿ ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ ಅಧಿಕಾರಿಗಳು ಸ್ಥಳೀಯ ಶಾಸಕರನ್ನು ಆಹ್ವಾನಿಸದೇ ಶಿಷ್ಟಾಚಾರ ಉಲ್ಲಂಘಿಸಿರುವ ಕುರಿತು ಸಲ್ಲಿಸಿದ ವರದಿಯ ಕುರಿತು ಸರ್ಕಾರ ಕೈಗೊಂಡ ಕ್ರಮಗಳೇನು? | ತಿಡಗುಂದಿ ಶಾಖಾ ಕಾಲುವೆ ಕಿ.ಮೀ 40.00 ದಿಂದ 47.00 ಕಿ.ಮೀ ವರೆಗಿನ ನಿರ್ಮಾಣ ಕಾಮಗಾರಿಯ ಭೂಮಿ ಪೂಜೆಯನ್ನು ಕರ್ನಾಟಕ ಸರ್ಕಾರ / ನಿಗಮದ ವತಿಯಿಂದ ಜರುಗಿಸಲಾಗಿರುವುದಿಲ್ಲ.<br><br>ಮುಂದುವರೆದು, ಚಡಚಣ ಏತ ನೀರಾವರಿ ಯೋಜನೆಯ ಉಮ್ರಾಣಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ದಿನಾಂಕ:04/01/2021 ರಂದು ಗುತ್ತಿಗೆ ಕರಾರು ಮಾಡಿದ್ದು, ದಿನಾಂಕ:18/01/2021 ರಂದು ಮಾನ್ಯ ಉಪ ಮುಖ್ಯಮಂತ್ರಿಗಳು ಇವರ ತಾತ್ಕಾಲಿಕ ಪ್ರವಾಸ ಕಾರ್ಯಕ್ರಮದಲ್ಲಿ ಚಡಚಣ ತಾಲ್ಲೂಕಿನ ಹತ್ತಳ್ಳಿಯಲ್ಲಿರುವ ಬೋರಿ ಹಳ್ಳಕ್ಕೆ ಅಡ್ಡಲಾಗಿ ಸೇತುವೆ ನಿರ್ಮಾಣ ಮತ್ತು ಚಡಚಣದಲ್ಲಿ ನೂತನವಾಗಿ ನಿರ್ಮಿಸಿರುವ ಪ್ರವಾಸಿ ಮಂದಿರದ ಉದ್ಘಾಟಣಾ ಸಮಾರಂಭದಲ್ಲಿ ಭಾಗವಹಿಸುವುದು ಹಾಗೂ ತಾಲ್ಲೂಕಿನ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳ ಉದ್ಘಾಟನಾ / ಶಂಕು ಸ್ಥಾಪನಾ ಕಾರ್ಯಕ್ರಮದಲ್ಲಿ ಭಾಗವಹಿಸುವುದು ಎಂದು ಪ್ರಕಟಿಸಲಾಗಿರುತ್ತದೆ. |

| | | |
|---|---|---|
| | | ಸದರಿ ಪ್ರವಾಸ ಕಾರ್ಯಕ್ರಮದಲ್ಲಿ ಉಮರಾಣಿ ಬ್ಯಾರೇಜಿನ ಬಗ್ಗೆ ಪ್ರಸ್ತಾಪವಾಗಿರುವುದಿಲ್ಲ. ಆದಕಾರಣ ಜಿಲ್ಲಾಡಳಿತದಿಂದಾಗಲಿ ಅಥವಾ ಮೇಲಾಧಿಕಾರಿಗಳಿಂದಾಗಲಿ ಮಾನ್ಯ ಉಪ ಮುಖ್ಯ ಮಂತ್ರಿಗಳ ಕಾರ್ಯಕ್ರಮದ ಬಗ್ಗೆ ಮಾಹಿತಿ ಇಲ್ಲದಿರುವ ಪ್ರಯುಕ್ತ, ಇಲಾಖಾ ವತಿಯಿಂದ ಯಾವುದೇ ಸರಕಾರಿ ಕಾರ್ಯಕ್ರಮ ಆಯೋಜಿಸಲು ಸಿದ್ಧಪಡಿಸಿ ಕೊಂಡಿರುವುದಿಲ್ಲ ಹಾಗೂ ನಿಗಮದಿಂದ ಕಾರ್ಯಕ್ರಮವನ್ನು ಕೈಗೊಂಡಿರುವುದಿಲ್ಲ. ಮುಂದುವರೆದು, ಉಮರಾಣಿ ಗ್ರಾಮದ ಗ್ರಾಮಸ್ಥರ ಒತ್ತಾಯದ ಮೇರೆಗೆ ಉಮರಾಣಿ ಬ್ಯಾರೇಜಿನ ಕಾಮಗಾರಿ ಸ್ಥಳಕ್ಕೆ ಮಾನ್ಯ ಉಪ ಮುಖ್ಯ ಮಂತ್ರಿಗಳು ಆಗಮಿಸಿ ಖಾಸಗಿಯಾಗಿ ಗ್ರಾಮಸ್ಥರು ಕೈಗೊಂಡ ಕಾಮಗಾರಿಯ ಕಾರ್ಯಕ್ರಮದಲ್ಲಿ ಪಾಲ್ಗೊಂಡಿರುತ್ತಾರೆ.<br><br>ಈ ನಿಟ್ಟಿನಲ್ಲಿ ಚಡಚಣ ಏತ ನೀರಾವರಿ ಯೋಜನೆಯಡಿ ಬರುವ ಉಮ್ರಾಣಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಭೂಮಿ ಪೂಜೆಯನ್ನು ಕರ್ನಾಟಕ ಸರ್ಕಾರ / ನಿಗಮದ ವತಿಯಿಂದ ಜರುಗಿಸಲಾಗಿರುವುದಿಲ್ಲ, ಆದ್ದರಿಂದ ಶಿಷ್ಟಾಚಾರ ಉಲ್ಲಂಘನೆ ಆಗಿರುವುದಿಲ್ಲ ಎಂದು ವ್ಯವಸ್ಥಾಪಕ ನಿರ್ದೇಶಕರು, ಕೃಷ್ಣಾ ಭಾಗ್ಯ ಜಲ ನಿಗಮ ರವರು ವರದಿ ಮಾಡಿರುತ್ತಾರೆ. |

ಸಂಖ್ಯೆ:ಜಸಂಇ 08 ಡಬ್ಲ್ಯೂಬಿಎಂ 2022

(ಗೋವಿಂದ ಎಂ.ಕಾರಜೋಳ)
ಜಲ ಸಂಪನ್ಮೂಲ ಸಚಿವರು

## ಅನುಬಂಧ-1

**ವಿಧಾನ ಸಭೆಯ ಸದಸ್ಯರಾದ ಶ್ರೀ. ದೇವಾನಂದ ಫುಲಸಿಂಗ್ ಚವಾಣ್ (ನಾಗಠಾಣ) ಇವರ ಚುಕ್ಕೆ ಗುರುತಿನ/ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂ: 154 ಕ್ಕೆ ಉತ್ತರಗಳು.**

| ಕ್ರ ಸಂ. | ಕಾಮಗಾರಿ ಹೆಸರು | ಗ್ರಾಮದ ಹೆಸರು. | ಭೂಸ್ವಾಧೀನಪಡಿಸಿಕೊಳ್ಳಲಾಗಿರುವ ಜಮೀನು (ಎ-ಗುಂ) | ಪರಿಹಾರ ಒದಗಿಸಬೇಕಾದ ಜಮೀನು (ಎ-ಗುಂ) | ಪರಿಹಾರ ಒದಗಿಸಲು ವಿಳಂಭವಾಗಿರುವುದಕ್ಕೆ ಕಾರಣಗಳು |
|---|---|---|---|---|---|
| 1 | ತಿಡಗುಂದಿ ಬ್ರ್ಯಾಂಚ್ ಕಾಲುವೆ ಕಿ.ಮೀ 17.43 ರಿಂದ ಕಿ.ಮೀ 40.00 ರಿಂದ ನಿರ್ಮಾಣ ಕಾಮಗಾರಿ | ಕನ್ನೂರ | 112ಎ-06ಗುಂ | 112ಎ-06ಗುಂ | ಅವಾರ್ಡ ಪ್ರಕ್ರಿಯೇಯು ಪೂರ್ಣಗೊಂಡಿದ್ದು ಪರಿಹಾರ ಧನ ಪಾವತಿಸಬೇಕಾಗಿರುತ್ತದೆ. |
| | | ಶಿರನಾಳ | 88ಎ-09ಗುಂ | 88ಎ-09ಗುಂ | |
| 2 | ತಿಡಗುಂದಿ ಬ್ರ್ಯಾಂಚ್ ಕಾಲುವೆ ಕಿ.ಮೀ 40.00 ರಿಂದ ಕಿ.ಮೀ 47.00 ರಿಂದ ನಿರ್ಮಾಣ ಕಾಮಗಾರಿ | ಡೊಮನಾಳ | 63ಎ-29ಗುಂ | 63ಎ-29ಗುಂ | |
| 3 | ನಾಗಠಾಣ ಶಾಖಾ ಕಾಲುವೆ | ಜಾಲವಾಡ, ಇಬ್ರಾಹಿಂಪುರ, ಮಾನುರು, ದೇವರಹಿಪ್ಪರಗಿ, ನಿವಳಕೆದ್, ಇಂಗಳಗಿ, ಮುಳಸವಾಳಗಿ, ಶಿವನಗಿ, ಅಂಕಲಗಿ, ಜಂಬಗಿ, ಅಹೇರಿ, ನಾಗಠಾಣ, ಹುಣಸಿಹಾಳ್, ದ್ಯಾಬೇರಿ, ಗುಣಕಿ, ಮಿಂಚನಾಳ & ಮುಳಸವಾಳಗಿ | 1265ಎ-10ಗುಂ | 19ಎ-25ಗುಂ | |

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 155
2. ಸದಸ್ಯರ ಹೆಸರು : ಶ್ರೀ ದೇವಾನಂದ್ ಫುಲಸಿಂಗ್ ಚವಾಣ್
3. ಉತ್ತರಿಸಬೇಕಾದ ದಿನಾಂಕ : 15/02/2022
4. ಉತ್ತರಿಸುವ ಸಚಿವರು : ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ನಾಗಠಾಣ ವಿಧಾನಸಭಾ ಕ್ಷೇತ್ರದಲ್ಲಿ ಕೆರೆ ತುಂಬುವ ಯೋಜನೆಯಡಿ ಸಣ್ಣ ನೀರಾವರಿ ಇಲಾಖೆಯ ಎಷ್ಟು ಕೆರೆಗಳನ್ನು ತುಂಬಿಸಲಾಗಿದೆ; ಬಾಕಿ ಉಳಿದಿರುವ ಕೆರೆಗಳು ಎಷ್ಟು; ಬಾಕಿ ಉಳಿದಿರುವ ಕೆರೆಗಳನ್ನು ತುಂಬಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಕೆರೆಗಳ ವಿವರವಾದ ಮಾಹಿತಿ ನೀಡುವುದು) | ನಾಗಠಾಣ ವಿಧಾನಸಭಾ ಕ್ಷೇತ್ರದಲ್ಲಿ ಸಣ್ಣ ನೀರಾವರಿ ಇಲಾಖೆಯ ವ್ಯಾಪಿಯ್ತಲ್ಲಿ 28 ಕೆರೆಗಳಿರುತ್ತವೆ.<br>ಅವುಗಳಲ್ಲಿ 18 ಕೆರೆಗಳನ್ನು ತುಂಬಿಸುವ ಕಾಮಗಾರಿಗಳನ್ನು ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತದಿಂದ ಕೈಗೊಳ್ಳಲಾಗಿದೆ.<br>ಬಾಕಿ ಉಳಿದ 10 ಕೆರೆಗಳನ್ನು ತುಂಬಿಸುವ ಕಾಮಗಾರಿಗಳನ್ನು ಅವುಗಳ ತಾಂತ್ರಿಕ ಶಕ್ಯತೆ ಮತ್ತು ಅನುದಾನದ ಲಭ್ಯತೆಯನ್ನು ಆಧರಿಸಿ ಕೈಗೊಳ್ಳಲು ಪರಿಶೀಲಿಸಲಾಗುವುದು.<br>ಕೆರೆಗಳ ವಿವರವಾದ ಮಾಹಿತಿಯನ್ನು ಅನುಬಂಧ-1 ರಲ್ಲಿ ನೀಡಲಾಗಿದೆ. |
| ಆ | ಈ ಯೋಜನೆಯಡಿ ತುಂಬಿಸಲಾದ ಕೆರೆಗಳ ನಿರ್ವಹಣೆ ಜವಾಬ್ದಾರಿಯನ್ನು ಯಾವ ಇಲಾಖೆಗೆ ವಹಿಸಲಾಗಿದೆ; | ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತದಿಂದ ಕೈಗೆತ್ತಿಕೊಂಡು ಪೂರ್ಣಗೊಳಿಸಲಾದ ಕೆರೆ ತುಂಬಿಸುವ ಯೋಜನೆಗಳ ಅಡಿ ಬರುವ ಕೆರೆಗಳ ನಿರ್ವಹಣೆಯನ್ನು ಸಣ್ಣ ನೀರಾವರಿ ಇಲಾಖೆಗೆ ಹಸ್ತಾಂತರಿಸಿ ಕೊಡಲು ಹಾಗೂ ಏತ ನೀರಾವರಿ ಯೋಜನೆಗಳನ್ನು ಸದರಿ ನಿಗಮದಿಂದ ನಿರ್ವಹಿಸಲು ನಿರ್ಣಯಿಸಲಾಗಿರುತ್ತದೆ. |
| ಇ | ಜನ ಹಾಗೂ ಜಾನುವಾರುಗಳಿಗೆ ಕುಡಿಯುವ ನೀರು ಪೂರೈಸುವ ಹಾಗೂ ಅಂತರ್ಜಲಮಟ್ಟ ಹೆಚ್ಚಿಸುವ ದೃಷ್ಟಿಯಿಂದ ತುಂಬಲಾದ ಬಹುತೇಕ ಸಣ್ಣ ನೀರಾವರಿ ಇಲಾಖೆ ಕೆರೆಗಳಲ್ಲಿ ರೈತರು ರಾತ್ರಿ ಸಮಯದಲ್ಲಿ ಅಕ್ರಮವಾಗಿ ಪಂಪ್‌ಸೆಟ್‌ಗಳನ್ನು ಅಳವಡಿಸಿ ಕೃಷಿ ಚಟುವಟಿಕೆಗಳಿಗೆ ನೀರನ್ನು ಬಳಸಿಕೊಳ್ಳುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಅಕ್ರಮವಾಗಿ ನೀರು ಬಳಸುತ್ತಿರುವವರ ವಿರುದ್ಧ ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರವಾದ ಮಾಹಿತಿಯನ್ನು ನೀಡುವುದು) | ಗಮನಕ್ಕೆ ಬಂದಿದೆ.<br><br>ಕೆಲವೊಂದು ಕೆರೆಗಳಲ್ಲಿ ರೈತರು ರಾತ್ರಿ ಸಮಯದಲ್ಲಿ ಅಕ್ರಮವಾಗಿ ಪಂಪ್ ಸೆಟ್‌ಗಳನ್ನು ಅಳವಡಿಸಿ ಕೃಷಿ ಚಟುವಟಿಕೆಗಳಿಗೆ ನೀರನ್ನು ಬಳಸುತ್ತಿರುವುದು ಕಂಡು ಬಂದಿದೆ.<br>ಅಕ್ರಮವಾಗಿ ಪಂಪ್‌ಸೆಟ್‌ಗಳನ್ನು ಅಳವಡಿಸಿ ಕೃಷಿ ಚಟುವಟಿಕೆಗಳಿಗೆ ನೀರನ್ನು ಬಳಸಿಕೊಳ್ಳುತ್ತಿರುವವರ ಮೇಲೆ ಕಾನೂನು ಕ್ರಮ ಜರುಗಿಸಲು ಪೊಲೀಸ್ ಠಾಣೆಗೆ ದೂರು ಸಲ್ಲಿಸಲಾಗಿದೆ ಹಾಗ ಪಂಪ್‌ಸೆಟ್‌ಗಳನ್ನು ತೆರವುಗೊಳಿಸಲಾಗಿದೆ. |

| | | |
|---|---|---|
| ಈ | ಸಣ್ಣ ನೀರಾವರಿ ಇಲಾಖೆಯ ವಿಜಯಪುರ ವಿಭಾಗದ ಸಹಾಯಕ ಕಾರ್ಯಪಾಲಕ ಮತ್ತು ಕಾರ್ಯಪಾಲಕ ಅಭಿಯಂತರರು ಜನಪ್ರತಿನಿಧಿಗಳಿಂದ ಬಂದ ಕರೆಗಳನ್ನು ಸ್ವೀಕರಿಸದೇ ಶಿಷ್ಠಾಚಾರ ಉಲ್ಲಂಘಿಸಿರುವ ಕುರಿತು ನೀಡಿರುವ ದೂರಿನ ಮೇಲೆ ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರವಾದ ಮಾಹಿತಿಯನ್ನು ನೀಡುವುದು) | ಶಿಷ್ಠಾಚಾರ ಉಲ್ಲಂಘನೆ ಕುರಿತು ಜಿಲ್ಲಾಧಿಕಾರಿಗಳು, ವಿಜಯಪುರ ಜಿಲ್ಲೆ, ವಿಜಯಪುರ ಇವರು ದಿನಾಂಕ:02/02/2022 ರ ಪತ್ರದಲ್ಲಿ ಸಹಾಯಕ ಕಾರ್ಯಪಾಲಕ ಅಭಿಯಂತರರು ಸಣ್ಣ ನೀರಾವರಿ ಉಪ-ವಿಭಾಗ, ವಿಜಯಪುರ ಹಾಗೂ ಕಾರ್ಯಪಾಲಕ ಅಭಿಯಂತರರು ಸಣ್ಣ ನೀರಾವರಿ ವಿಭಾಗ, ವಿಜಯಪುರ ಇವರಿಗೆ ಕಾರಣ ಕೇಳುವ ನೋಟೀಸ್ ಜಾರಿ ಮಾಡಿರುತ್ತಾರೆ. ಸಹಾಯಕ ಕಾರ್ಯಪಾಲಕ ಅಭಿಯಂತರರು ಮತ್ತು ಕಾರ್ಯಪಾಲಕ ಅಭಿಯಂತರರು ತಮ್ಮಿಂದ ಶಿಷ್ಠಾಚಾರ ಉಲ್ಲಂಘನೆ ಆಗಿರುವುದಿಲ್ಲವೆಂದು ಜಿಲ್ಲಾಧಿಕಾರಿಗಳಿಗೆ ಸಮಜಾಯಿಷಿ ನೀಡಿರುತ್ತಾರೆ. |

ಕಡತ ಸಂಖ್ಯೆ:MID 7 LAQ 2022

(ಜೆ.ಸಿ.ಮಾಧುಸ್ವಾಮಿ)
ಕಾನೂನು, ಸಂಸದೀಯ ವ್ಯವಹಾರಗಳು
ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು.

ವಿಧಾನ ಸಭೆಯ ಸದಸ್ಯರಾದ ಮಾನ್ಯ ಶ್ರೀ ದೇವಾನಂದ್ ಫುಲಸಿಂಗ್ ಚವಾಣ್ (ನಾಗಠಾಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:155ಕ್ಕೆ ಅನುಬಂಧ-1

**ನಾಗಠಾಣ ವಿಧಾನಸಭಾ ಕ್ಷೇತ್ರದಲ್ಲಿ ಸಣ್ಣ ನೀರಾವರಿ ಇಲಾಖೆಯ ವ್ಯಾಪಿಯಲ್ಲಿರುವ ಕೆರೆಗಳ ವಿವರ**

| ಕ್ರಮ ಸಂ. | ತಾಲ್ಲೂಕು | ಕೆರೆಯ ಹೆಸರು | ಷರಾ |
|---|---|---|---|
| 1 | 2 | 3 | 4 |
| 1 | ವಿಜಯಪುರ | ಮಖಣಾಪೂರ ಕೆರೆ | ಕೆ.ಬಿ.ಜೆ.ಎನ್.ಎಲ್.ನಿಂದ ಕೆರೆಗಳಿಗೆ ನೀರು ತುಂಬಿಸುವ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ. |
| 2 | ವಿಜಯಪುರ | ನಾಗಠಾಣ ಮಧ್ಯಮ ನೀರಾವರಿ ಕೆರೆ | |
| 3 | ವಿಜಯಪುರ | ಕಗ್ಗೋಡ ಕೆರೆ | |
| 4 | ವಿಜಯಪುರ | ಬೊಮ್ಮನಹಳ್ಳಿ ಕೆರೆ | |
| 5 | ವಿಜಯಪುರ | ಕೌಲಗಿ ಆಹೇರಿ ಕೆರೆ | |
| 6 | ವಿಜಯಪುರ | ದ್ಯಾಬೇರಿ ಕೆರೆ | |
| 7 | ವಿಜಯಪುರ | ಆಹೇರಿ ಕೆರೆ | |
| 8 | ವಿಜಯಪುರ | ಕುಮಟಗಿ ಕೆರೆ (ಹಳೆ) | |
| 9 | ವಿಜಯಪುರ | ಕುಮಟಗಿ ಕೆರೆ (ಹೊಸ) | |
| 10 | ವಿಜಯಪುರ | ಹುಣಶ್ಯಾಳ ಜಿನುಗು ಕೆರ | |
| 11 | ವಿಜಯಪುರ | ಅಂಕಲಗಿ ಕೆರೆ | |
| 12 | ವಿಜಯಪುರ | ಡೊಮನಾಳ ಕೆರೆ | |
| 13 | ವಿಜಯಪುರ | ಹುಣಶ್ಯಾಳ ಕೆರೆ | |
| 14 | ವಿಜಯಪುರ | ಆಹೇರಿ-ಜಂಬಗಿ ಕೆರೆ | ಕೆ.ಬಿ.ಜೆ.ಎನ್.ಎಲ್.ನಿಂದ ಕೆರೆಗಳಿಗೆ ನೀರು ತುಂಬಿಸುವ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ. |
| 15 | ವಿಜಯಪುರ | ಅಲಿಯಾಬಾದ ಜಿನುಗು ಕೆರೆ | |
| 16 | ಚಡಚಣ | ಚಡಚಣ ಸಣ್ಣ ನೀರಾವರಿ ಕೆರೆ | |
| 17 | ಚಡಚಣ | ಗೋಡಿಹಾಳ ಸಣ್ಣ ನೀರಾವರಿ ಕೆರೆ | |
| 18 | ಚಡಚಣ | ಜಿಗಜೀವಣಗಿ ಸಣ್ಣ ನೀರಾವರಿ ಕೆರೆ ಸೈಟ-2 | |
| 19 | ಚಡಚಣ | ಇಂಚಗೇರಿ ಸಣ್ಣ ನೀರಾವರಿ ಕೆರೆ | |
| 20 | ಚಡಚಣ | ನಂದರಗಿ ಸಣ್ಣ ನೀರಾವರಿ ಕೆರೆ | |
| 21 | ಚಡಚಣ | ಜೀಗಜೀವಣಗಿ ಸಣ್ಣ ನೀರಾವರಿ ಕೆರೆ (ದೊಡ್ಡ) | |
| 22 | ಚಡಚಣ | ಶಿರಾಡೋಣ ಜಿನುಗು ಕೆರೆ | |

| ಕ್ರಮ ಸಂ. | ತಾಲ್ಲೂಕು | ಕೆರೆಯ ಹೆಸರು | ಷರಾ |
|---|---|---|---|
| 1 | 2 | 3 | 4 |
| 23 | ಚಡಚಣ | ಹಾಲಳ್ಳಿ ಜಿನುಗು ಕೆರೆ ಸೈಟ-1 | |
| 24 | ಚಡಚಣ | ಹಾಲಳ್ಳಿ ಜಿನುಗು ಕೆರೆ ಸೈಟ-2 | |
| 25 | ಚಡಚಣ | ಗೊಡಿಹಾಳ ಜಿನುಗು ಕೆರೆ | |
| 26 | ಚಡಚಣ | ಜಿಗಜೀವಣಗಿ ಜಿನುಗು ಕೆರೆ | |
| 27 | ಚಡಚಣ | ಇಂಚಗೇರಿ ಜಿನುಗು ಕೆರೆ | |
| 28 | ಚಡಚಣ | ಸಾತಲಗಾಂವ ಪಿ.ಬಿ. ಜಿನುಗು ಕೆರೆ | |



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 156 |
| ಮಾನ್ಯ ಸದಸ್ಯರ ಹೆಸರು | ಶ್ರೀ ದೇವಾನಂದ್ ಫುಲ್‌ಸಿಂಗ್ ಚವಾಣ್(ನಾಗಠಾಣ) |
| ಉತ್ತರಿಸಬೇಕಾದ ದಿನಾಂಕ | 15/02/2022 |
| ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಿಂದ ವಿಜಯಪುರ ಜಿಲ್ಲೆಯಲ್ಲಿ ವೃತ್ತಿನಿರತ ಕಾರ್ಮಿಕರ ಶೋಷಣೆಯ ಎಷ್ಟು ಪ್ರಕರಣಗಳು ದಾಖಲಾಗಿವೆ; (ವಿವರವಾದ ಮಾಹಿತಿ ಒದಗಿಸುವುದು) | ವಿಜಯಪುರ ಜಿಲ್ಲೆಯಲ್ಲಿ ವೃತ್ತಿನಿರತ ಕಾರ್ಮಿಕರ ಶೋಷಣೆ ಕುರಿತು ಯಾವುದೇ ಪ್ರಕರಣಗಳು ದಾಖಲಾಗಿರುವುದಿಲ್ಲ. |
| ಆ) | ಈ ಪ್ರಕರಣಗಳು ಯಾವ ತಾಲ್ಲೂಕಿನಲ್ಲಿ ಹೆಚ್ಚು ಕಂಡುಬಂದಿವೆ; | |
| ಇ) | ಕಾರ್ಮಿಕರ ಶೋಷಣೆ ತಡೆಗಟ್ಟುವ ನಿಟ್ಟಿನಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು; ಈ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸದೆ, ನಿರ್ಲಕ್ಷ್ಯ ತೋರಿದಂತಹ ಎಷ್ಟು ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳಲಾಗಿದೆ; | ಕಾರ್ಮಿಕ ಇಲಾಖೆಯ ಅಧಿಕಾರಿಗಳು ಆಗಿಂದಾಗ್ಗೆ ತನಿಖೆ ಕೈಗೊಂಡು ವಿವಿಧ ಕಾರ್ಮಿಕ ಕಾಯ್ದೆಗಳ ಪ್ರಾವಧಾನಗಳನ್ನು ಅನುಷ್ಠಾನ ಮಾಡುತ್ತಿರುತ್ತಾರೆ. ಯಾವುದೇ ಅಧಿಕಾರಿಗಳು ಈ ನಿಟ್ಟಿನಲ್ಲಿ ನಿರ್ಲಕ್ಷ ತೋರಿರುವುದು ಕಂಡುಬರುವುದಿಲ್ಲ. |
| ಈ) | ಕಡಿಮೆ ಕೂಲಿ ಹಾಗೂ ಹೆಚ್ಚು ಕೆಲಸದ ಶೋಷಣೆ ಮತ್ತು ಮಹಿಳಾ ಕಾರ್ಮಿಕರಿಗೆ ಕಿರುಕುಳ ತಪ್ಪಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಕನಿಷ್ಠ ವೇತನ ನೀಡದೇ ಇರುವ ಕುರಿತು ದೂರುಗಳು ಬಂದಲ್ಲಿ ಅಥವಾ ಕಾರ್ಮಿಕ ನಿರೀಕ್ಷಕರುಗಳ ತನಿಖಾ ಸಮಯದಲ್ಲಿ ಕಾರ್ಮಿಕರುಗಳಿಗೆ ಕನಿಷ್ಠ ವೇತನ ಪಾವತಿಸದೇ ಇರುವುದು ಕಂಡುಬಂದಲ್ಲಿ 1948ರ ಕನಿಷ್ಠ ವೇತನ ಕಾಯ್ದೆಯಡಿ ನೇಮಕಗೊಂಡ ಕ್ಲೇಮ್ ಪ್ರಾಧಿಕಾರಿಯವರಲ್ಲಿ ಕ್ಲೇಮ್ ಅರ್ಜಿಗಳನ್ನು ದಾಖಲಿಸಿ ಪರಿಹಾರ ನೀಡಲಾಗುತ್ತಿದೆ.<br><br>ಕೆಲಸದ ಸಮಯದಲ್ಲಿ ಮಹಿಳಾ ಕಾರ್ಮಿಕರಿಗೆ ಆಗುವ ಕಿರುಕುಳ ತಪ್ಪಿಸಲು 1948ರ ಔದ್ಯೋಗಿಕ ಸಂಸ್ಥೆಗಳ (ಸ್ಥಾಯಿ ಆದೇಶ) ಕಾಯ್ದೆಯಡಿ ಲೈಂಗಿಕ ಕಿರುಕುಳ ತಡೆ ಸಮಿತಿ ರಚಿಸಿ ಆದೇಶ ಹೊರಡಿಸಲಾಗುತ್ತಿದೆ. |

| | | |
|---|---|---|
| ಉ) | ವೃತ್ತಿ ನಿರತ ಸಂದರ್ಭದಲ್ಲಿ ಅಪಘಾತ ಮತ್ತು ಅವಘಡದಿಂದ ಎಷ್ಟು ಮಂದಿ ಕಾರ್ಮಿಕರು ಮೃತಪಟ್ಟಿದ್ದಾರೆ? (ಸಂಪೂರ್ಣವಾದ ಮಾಹಿತಿ ನೀಡುವುದು) | **ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ**<br>ಈ ಮಂಡಳಿಯಲ್ಲಿ ಕಳೆದ 3 ವರ್ಷದಲ್ಲಿ ವಿಜಯಪುರ ಜಿಲ್ಲೆಯಲ್ಲಿ 04 ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಕಟ್ಟಡ ಕೆಲಸ ನಿರ್ವಹಿಸುವಾಗ ಅಪಘಾತವುಂಟಾಗಿ ಮೃತ ಪಟ್ಟಿರುತ್ತಾರೆ. ವಿವರ ಈ ಕೆಳಕಂಡಂತಿದೆ: |

| ಕ್ರ.ಸಂ | ಫಲಾನುಭವಿಯ ಹೆಸರು | ಮಂಡಳಿಯ ವತಿಯಿಂದ ಬಿಡುಗಡೆ ಮಾಡಿದ ಮೊತ್ತ (ರೂ.ಗಳಲ್ಲಿ) |
|---|---|---|
| 1 | ಚಂದ್ರಕಾಂತ ರಾಮು ಪವಾರ | 5,00,000/- |
| 2 | ಇಸಾಕ ಮ ಶೇಖ | 5,00,000/- |
| 3 | ಹಣಮಂತ ಕಾಂಬಳೆ | 5,00,000/- |
| 4 | ಶಬೀರ ನೌಶಾದ ಶೇಖ | 2,00,000/- |
| | ಒಟ್ಟು | 17,00,000/- |

**ಕಾಇ 54 ಎಲ್‌ಇಟಿ 2022**

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

# ಕರ್ನಾಟಕ ವಿಧಾನ ಸಭೆ

01. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 157

02. ಮಾನ್ಯ ವಿಧಾನ ಸಭೆಯ ಸದಸ್ಯರ ಹೆಸರು : ಶ್ರೀ ದೇವಾನಂದ ಫುಲಸಿಂಗ್ ಚವಾಣ್(ನಾಗಠಾಣ)

03. ಉತ್ತರಿಸುವ ದಿನಾಂಕ : 15-02-2022.

04. ಉತ್ತರಿಸುವ ಸಚಿವರು : ಮಾನ್ಯ ಗೃಹ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಲ್ಲಿ ವಿಜಯಪುರ ಜಿಲ್ಲೆಯಲ್ಲಿ ಅತ್ಯಾಚಾರ/ ಅಪ್ರಾಪ್ತರ ಮೇಲಿನ ಅತ್ಯಾಚಾರ ಹಾಗೂ ಲೈಂಗಿಕ ದೌರ್ಜನ್ಯದ ಎಷ್ಟು ಪ್ರಕರಣಗಳು ದಾಖಲಾಗಿವೆ; ಈ ಪ್ರಕರಣಗಳಿಗೆ ಸಂಬಂಧಿಸಿದಂತೆ ಆರೋಪಿಗಳನ್ನು ಬಂಧಿಸಲಾಗಿದೆಯೇ; ಈ ಪೈಕಿ ಎಷ್ಟು ಮಂದಿಯನ್ನು ಶಿಕ್ಷಿಸಲಾಗಿದೆ; | ವಿಜಯಪುರ ಜಿಲ್ಲೆಯಲ್ಲಿ ಕಳೆದ ಮೂರು ವರ್ಷಗಳಲ್ಲಿ ದಾಖಲಿಸಿರುವ ಅತ್ಯಾಚಾರ ಮತ್ತು ಲೈಂಗಿಕ ದೌರ್ಜನ್ಯ ಪ್ರಕರಣಗಳು ಹಾಗೂ ಈ ಪ್ರಕರಣಗಳಿಗೆ ಸಂಬಂಧಿಸಿದಂತೆ ಬಂಧಿಸಲಾಗಿರುವ ಆರೋಪಿಗಳ ಸಂಖ್ಯೆ ಮತ್ತು ಅವರ ಪೈಕಿ ಶಿಕ್ಷಿಸಲಾಗಿರುವ ಆರೋಪಿಗಳ ಸಂಖ್ಯೆಯ ವಿವರಗಳು ಈ ಕೆಳಗಿನಂತಿದೆ. |

| ಕ್ರಮ ಸಂಖ್ಯೆ | ವರ್ಷ | ದಾಖಲಾದ ಪ್ರಕರಣಗಳು | ಬಂಧಿಸಲಾದ ಆರೋಪಿಗಳ ಸಂಖ್ಯೆ | ಶಿಕ್ಷೆಯಾದ ಆರೋಪಿತರ ಸಂಖ್ಯೆ |
|---|---|---|---|---|
| ಮಹಿಳೆಯರ ಮೇಲಿನ ಅತ್ಯಾಚಾರ ಪ್ರಕರಣಗಳು | | | | |
| 1 | 2019 | 7 | 15 | - |
| 2 | 2020 | 3 | 3 | - |
| 3 | 2021 | 15 | 12 | - |
| 4 | 2022(5ಫೆಬ್ರವರಿ) | 1 | 1 | - |
| ಅಪ್ರಾಪ್ತರ ಮೇಲಿನ ಅತ್ಯಾಚಾರ ಪ್ರಕರಣಗಳು/ದೌರ್ಜನ್ಯಗಳು (ಪೋಕ್ಸೋ ಕಾಯ್ದೆಯಡಿಯಲ್ಲಿನ ಪ್ರಕರಣಗಳು) | | | | |
| 1 | 2019 | 37 | 61 | 2 |
| 2 | 2020 | 48 | 69 | - |
| 3 | 2021 | 52 | 60 | - |
| 4 | 2022(5ಫೆಬ್ರವರಿ) | 1 | 1 | - |

ಮಹಿಳೆಯರ ಮೇಲಿನ ದೌರ್ಜನ್ಯ ಪ್ರಕರಣಗಳು

| ಕ್ರಮ ಸಂಖ್ಯೆ | ವರ್ಷ | ದಾಖಲಾದ ಪ್ರಕರಣಗಳು | | ಬಂಧಿಸಲಾದ ಆರೋಪಿಗಳ ಸಂಖ್ಯೆ | | ಶಿಕ್ಷೆಯಾದ ಆರೋಪಿತರ ಸಂಖ್ಯೆ | |
|---|---|---|---|---|---|---|---|
| | | ಐಪಿಸಿ 354 | ಐಪಿಸಿ 509 | ಐಪಿಸಿ 354 | ಐಪಿಸಿ 509 | ಐಪಿಸಿ 354 | ಐಪಿಸಿ 509 |
| 1 | 2019 | 104 | 2 | 266 | 10 | 1 | - |
| 2 | 2020 | 127 | 2 | 373 | 5 | 1 | - |
| 3 | 2021 | 136 | 1 | 286 | - | 0 | - |
| 4 | 2022 (5ಫೆಬ್ರವರಿ) | 09 | - | 04 | - | 0 | - |

| | | |
|---|---|---|
| ಆ) | ರಾಜ್ಯದಲ್ಲಿ ಇಂತಹ ಪ್ರಕರಣಗಳು ಹೆಚ್ಚಾಗುತ್ತಿದ್ದರೂ ಆರೋಪಿಗಳಿಗೆ ಶಿಕ್ಷೆಯಾಗದೇ ಇರುವುದರ ಬಗ್ಗೆ ವರದಿಯಾಗಿದ್ದು, ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು; | ರಾಜ್ಯದಲ್ಲಿ ವಿಜಯಪುರ ಜಿಲ್ಲೆ ಸೇರಿದಂತೆ ಅಪರಾಧ ಪ್ರಕರಣಗಳಲ್ಲಿ ವಿಶೇಷವಾಗಿ ಮಹಿಳೆಯರ ಮೇಲಿನ ಮತ್ತು ಮಕ್ಕಳ ಮೇಲಿನ ಅತ್ಯಾಚಾರ ಮತ್ತು ಲೈಂಗಿಕ ದೌರ್ಜನ್ಯ ಪ್ರಕರಣಗಳಲ್ಲಿ ಆರೋಪಿಗಳಿಗೆ ಶಿಕ್ಷೆಯಾಗುವ ನಿಟ್ಟಿನಲ್ಲಿ ಸರ್ಕಾರವು ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿರುತ್ತದೆ.<br>➢ ಅಪರಾಧ ಪ್ರಕರಣಗಳಲ್ಲಿ ನ್ಯಾಯಾಲಯದ ವಿಚಾರಣೆಯಲ್ಲಿರುವ ಪ್ರಕರಣಗಳಲ್ಲಿ ವಿಚಾರಣಾ ಕಾಲಕ್ಕೆ ಸಾಕ್ಷಿದಾರರುಗಳನ್ನು ಮತ್ತು ಸಾಕ್ಷ್ಯಾಧಾರಗಳನ್ನು ನ್ಯಾಯಾಲಯಕ್ಕೆ ನಿಗಧಿತ ಅವಧಿಯಲ್ಲಿ ಹಾಜರುಪಡಿಸಲು ಹಾಗೂ ಸಾಕ್ಷಿಗಳು ಸಾಕ್ಷಿಯನ್ನು ನುಡಿಯುವ ಮುನ್ನ ಪ್ರಕರಣದ ಬಗ್ಗೆ ಮಾಹಿತಿ ಮತ್ತು ಮನವರಿಕೆ ಮಾಡುವ ಕುರಿತು ರಾಜ್ಯದ ಪ್ರತಿ ಪೊಲೀಸ್ ಠಾಣೆಯಲ್ಲಿ **"ಕೋರ್ಟ್ ಮಾನಿಟರಿಂಗ್ ಸೆಲ್"** ಗಳನ್ನು ಸ್ಥಾಪಿಸಲಾಗಿರುತ್ತದೆ. ಸದರಿ ಸೆಲ್‌ಗಳಿಗೆ ಎ.ಎಸ್.ಐ ದರ್ಜೆಯ ಅಧಿಕಾರಿಯವರನ್ನು ಮುಖ್ಯಸ್ಥರನ್ನಾಗಿ ನೇಮಿಸಲಾಗಿರುತ್ತದೆ.<br>➢ ನ್ಯಾಯಾಲಯಗಳಲ್ಲಿ ಖುಲಾಸೆಗೊಂಡಿರುವ ಪ್ರಕರಣಗಳನ್ನು ಪರಾಮರ್ಶಿಸಲು ಸರ್ಕಾರವು ಈ ಕೆಳಕಂಡಂತೆ ಮೂರು ಹಂತದ ಅಕ್ವಿಟಲ್ ರಿವ್ಯೂ ಕಮಿಟಿಗಳನ್ನು ಸ್ಥಾಪಿಸಿರುತ್ತದೆ.<br>1. ರಾಜ್ಯ ಮಟ್ಟದ ಅಕ್ವಿಟಲ್ ರಿವ್ಯೂ ಕಮಿಟಿ<br>2. ವಲಯ ಮಟ್ಟದ ಅಕ್ವಿಟಲ್ ರಿವ್ಯೂ ಕಮಿಟಿ<br>3. ಜಿಲ್ಲಾ ಮಟ್ಟದ ಅಕ್ವಿಟಲ್ ರಿವ್ಯೂ ಕಮಿಟಿ<br>➢ ಜಿಲ್ಲೆಗಳು/ನಗರ ಮಾಸಿಕ ಅಪರಾಧ ಸಭೆಗಳಲ್ಲಿ ತನಿಖಾ ಅಧಿಕಾರಿಗಳಿಗೆ ಅಪರಾಧ ಪ್ರಕರಣಗಳಲ್ಲಿ ಆರೋಪಿಗಳಿಗೆ ಶಿಕ್ಷೆ ಆಗುವ ನಿಟ್ಟಿನಲ್ಲಿ ತನಿಖೆಯನ್ನು ವ್ಯವಸ್ಥಿತವಾಗಿ ಮತ್ತು ಕ್ರಮಬದ್ಧವಾಗಿ ಕೈಗೊಳ್ಳಲು ಸೂಕ್ತ ನಿರ್ದೇಶನಗಳನ್ನು ನೀಡಲಾಗಿರುತ್ತದೆ. |
| ಇ) | ಮಹಿಳೆಯರ ಮೇಲಿನ ಲೈಂಗಿಕ ದೌರ್ಜನ್ಯ ಪ್ರಕರಣಗಳ ವಿಚಾರಣೆಗಾಗಿ ತ್ವರಿತ ನ್ಯಾಯಾಲಯಗಳನ್ನು ಸ್ಥಾಪಿಸುವ ಆಲೋಚನೆ ಸರ್ಕಾರದ ಮುಂದಿದೆಯೇ? (ವಿವರ ನೀಡುವುದು) | ರಾಜ್ಯದಲ್ಲಿ ಮಹಿಳೆಯರ ಮೇಲಿನ ಲೈಂಗಿಕ ದೌರ್ಜನ್ಯ ಪ್ರಕರಣ ವಿಚಾರಣೆಗಾಗಿ Fast Track Court ಗಳನ್ನು ಸ್ಥಾಪಿಸಲಾಗಿರುತ್ತದೆ. ಹಾಗೆಯೇ ರಾಜ್ಯದ ಪ್ರತಿ ಜಿಲ್ಲೆಯಲ್ಲಿ ಮಕ್ಕಳ ಮೇಲಿನ ಲೈಂಗಿಕ ದೌರ್ಜನ್ಯ ಕುರಿತಂತೆ ಪೋಕ್ಸೋ ಕಾಯ್ದೆಯಡಿಯಲ್ಲಿ ದಾಖಲಾಗುವ ಪ್ರಕರಣಗಳಲ್ಲಿ ಪೋಕ್ಸೋ ವಿಶೇಷ ನ್ಯಾಯಾಲಯಗಳನ್ನು ಸ್ಥಾಪಿಸಲಾಗಿರುತ್ತದೆ. |

HD 2 SDN 2022

(ಅರಗ ಜ್ಞಾನೇಂದ್ರ)
ಗೃಹ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 158 |
| 2. | ಪ್ರಶ್ನೆ ಕೇಳಿದ ಸದಸ್ಯರು | ಶ್ರೀ. ದೇವಾನಂದ್ ಫುಲಸಿಂಗ್ ಚವಾಣ್ (ನಾಗಠಾಣ) |
| 3. | ಉತ್ತರಿಸುವ ದಿನಾಂಕ | 15.02.2022 |
| 4. | ಉತ್ತರಿಸುವ ಸಚಿವರು | ಮುಖ್ಯಮಂತ್ರಿಯವರು |

| | ಪ್ರಶ್ನೆ | ಉತ್ತರ |
|---|---|---|
| (ಅ) | ವಿಜಯಪುರ ಜಿಲ್ಲೆಯಲ್ಲಿ ಸರ್ಕಾರಿ ಅಧಿಕಾರಿಗಳು, ಜನಪ್ರತಿನಿಧಿಗಳು ಕಛೇರಿಗಳಿಗೆ ಭೇಟಿ ನೀಡಿದ ಸಂದರ್ಭದಲ್ಲಿ ತೋರಬೇಕಾದ ಗೌರವ ಪಾಲಿಸದಿರುವುದು, ಸರ್ಕಾರಿ ಸಭೆ ಸಮಾರಂಭಗಳಿಗೆ ಹಾಗೂ ಸರ್ಕಾರಿ ಕೆಲಸಗಳ ಭೂಮಿ ಪೂಜಾ ಸಮಾರಂಭದಲ್ಲಿ ಸ್ಥಳೀಯ ಜನಪ್ರತಿನಿಧಿಗಳನ್ನು ಪರಿಗಣಿಸದೇ ಹಲವಾರು ಸಂದರ್ಭಗಳಲ್ಲಿ ಶಿಷ್ಟಾಚಾರ ಉಲ್ಲಂಘನೆ ಮಾಡಿ ಅಗೌರವ ತೋರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಹೌದು, ಸರ್ಕಾರದ ಗಮನಕ್ಕೆ ಬಂದಿರುತ್ತದೆ. ವಿಜಯಪುರ ಜಿಲ್ಲೆಯಲ್ಲಿ ಕಳೆದ ಮೂರು ವರ್ಷಗಳಲ್ಲಿ ಶಿಷ್ಟಾಚಾರ ಉಲ್ಲಂಘನೆಯಡಿ ಒಟ್ಟು 10 ಪ್ರಕರಣಗಳು ದಾಖಲಾಗಿದ್ದು, ಅವುಗಳ ವಿವರಗಳನ್ನು ಅನುಬಂಧ-1 ರಲ್ಲಿ ಲಗತ್ತಿಸಿದೆ. |
| (ಆ) | ಈ ಜಿಲ್ಲೆಯಲ್ಲಿ ಕಳೆದ ಮೂರು ವರ್ಷಗಳಲ್ಲಿ ಶಿಷ್ಟಾಚಾರ ಉಲ್ಲಂಘನೆಯಡಿ ದಾಖಲಾದ ಪ್ರಕರಣಗಳು ಎಷ್ಟು; (ವಿವರ ನೀಡುವುದು) | |
| (ಇ) | ನಾಗಠಾಣ ಮತ ಕ್ಷೇತ್ರದಲ್ಲಿ ಕಳೆದ ಮೂರು ವರ್ಷಗಳಲ್ಲಿ ಸರ್ಕಾರಿ ಸಭೆ ಸಮಾರಂಭಗಳಲ್ಲಿ ಪಾಲಿಸಬೇಕಾದ ಶಿಷ್ಟಾಚಾರ ಜನಪ್ರತಿನಿಧಿಗಳಿಂದ ಬಂದ ದೂರವಾಣಿ ಕರೆಗಳಿಗೆ ಮರಳಿ ಉತ್ತರ ನೀಡುವ ಕುರಿತು ಹಾಗೂ ಸರ್ಕಾರಿ ಕೆಲಸಗಳ ಭೂಮಿ ಪೂಜಾ ಸಮಾರಂಭದಲ್ಲಿ ಸ್ಥಳೀಯ ಜನಪ್ರತಿನಿಧಿಗಳನ್ನು ಪರಿಗಣಿಸದಿರುವುದು ಸೇರಿದಂತೆ ಹಲವಾರು ಸಂದರ್ಭಗಳಲ್ಲಿ ಶಿಷ್ಟಾಚಾರ ಉಲ್ಲಂಘನೆ ಮಾಡಿ ಅಗೌರವ ತೋರಿರುವ ಕುರಿತು ಅಧಿಕಾರಿಗಳ ಮೇಲೆ ಕ್ರಮ ಕೈಗೊಳ್ಳುವಂತೆ ಸಲ್ಲಿಸಿದ ಪ್ರಸ್ತಾವನೆಗಳಿಗೆ ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರ ನೀಡುವುದು) | ವಿವರಗಳನ್ನು ಅನುಬಂಧ-2ರಲ್ಲಿ ಲಗತ್ತಿಸಿದೆ. |
| (ಈ) | ಸರ್ಕಾರಿ ಅಧಿಕಾರಿಗಳು ಜನಪ್ರತಿನಿಧಿಗಳೊಂದಿಗೆ ವರ್ತಿಸಬೇಕಾದ ಶಿಷ್ಟಾಚಾರದ ಮಾರ್ಗಸೂಚಿಗಳೇನು? (ಸರ್ಕಾರದಿಂದ ಹೊರಡಿಸಲಾದ ಶಿಷ್ಟಾಚಾರ ನಿಯಮಗಳ ಆದೇಶದ ಪ್ರತಿ ಒದಗಿಸುವುದು) | ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 5 ಹೆಚ್‌ಪಿಎ 2019, ದಿನಾಂಕ:30.04.2019ರಲ್ಲಿ ಆಡಳಿತ ವರ್ಗ ಮತ್ತು ಸಂಸತ್ ಹಾಗೂ ರಾಜ್ಯ ವಿಧಾನ ಮಂಡಲ ಸದಸ್ಯರುಗಳ ನಡುವಣ ಸರ್ಕಾರದ ವ್ಯವಹಾರಗಳು – ಸೂಕ್ತ ಕಾರ್ಯವಿಧಾನದ ಪಾಲನೆ ಕುರಿತಾದ ಕ್ರೋಢೀಕೃತ ಸೂಚನೆಗಳನ್ನು ನೀಡಲಾಗಿದ್ದು, ಸದರಿ ಸುತ್ತೋಲೆಯ ಪ್ರತಿಯನ್ನು ಅನುಬಂಧ-3ರಲ್ಲಿ ಲಗತ್ತಿಸಿದೆ. |

(ಸಂಖ್ಯೆ: ಸಿಆಸುಇ 06 ಹೆಚ್‌ಪಿಎ 2022)

**(ಬಸವರಾಜ ಬೊಮ್ಮಾಯಿ)**
ಮುಖ್ಯಮಂತ್ರಿ

# ಅನುಬಂಧ-1

| ಕ್ರ. ಸಂ | ದೂರು ನೀಡಿದ ಶಾಸಕರ /ಸಂಸತ್ ಸದಸ್ಯರ ಹೆಸರು /ಕ್ಷೇತ್ರ/ ಪತ್ರದ ದಿನಾಂಕ | ದೂರಿನ ಸಂಕ್ಷಿಪ್ತ ವಿವರ | ತೆಗೆದುಕೊಂಡು ಕ್ರಮ |
|---|---|---|---|
| 1 | ಶ್ರೀ ಸುನೀಲಗೌಡ ಬಿ ಪಾಟೀಲ, ಮಾನ್ಯ ಶಾಸಕರು, ವಿಧಾನ ಪರಿಷತ್, ವಿಜಯಪುರ -ಬಾಗಲಕೋಟೆ ಸ್ಥಳೀಯ ಸಂಸ್ಥೆಗಳ ಕ್ಷೇತ್ರ ಇವರ ಪತ್ರ ಸಂಖ್ಯೆ: ಎಸ್.ಬಿ.ಪಿ/ವಿ.ಪ.ಸ.ವಿ-ಬಾ/ಬೆಂ.ಕ/25/2019 ದಿನಾಂಕ.24.06.2019 | ಕೃಷಿ ಅಭಿಯಾನ ಸರಕಾರಿ ಕಾರ್ಯಕ್ರಮಕ್ಕೆ ಮಾನ್ಯ ಶಾಸಕರನ್ನು ಆಹ್ವಾನಿಸದೇ ಶಿಷ್ಟಾಚಾರ ಉಲ್ಲಂಘಿಸಿರುವ ಕುರಿತಂತೆ ಶ್ರೀ ಬಿ.ಶಿವಕುಮಾರ, ಜಂಟಿ ನಿರ್ದೇಶಕರು ಮತ್ತು ಶ್ರೀ ಎಚ್ ಬಿ ಪಡಸಲಗಿ, ಸಹಾಯಕ ನಿರ್ದೇಶಕರು, ಕೃಷಿ ಇಲಾಖೆ ವಿಜಯಪುರ ಇವರುಗಳ ವಿರುದ್ಧ ಹಕ್ಕುಚ್ಯುತಿ ಮಂಡಿಸುವ ಕುರಿತು. | ಹಕ್ಕುಬಾಧ್ಯತೆಗಳ ಸಮಿತಿಯಲ್ಲಿ ವಿಚಾರಣಾ ಹಂತದಲ್ಲಿ ಇರುತ್ತದೆ. |
| 2 | ಡಾ\|\| ದೇವಾನಂದ ಫುಲಸಿಂಗ್ ಚವಾಣ್, ಮಾನ್ಯ ಶಾಸಕರು, ನಾಗಠಾಣ ವಿಧಾನ ಸಭಾಕ್ಷೇತ್ರ ವಿಜಯಪುರ ಜಿಲ್ಲೆ ಇವರ ಪತ್ರ ಸಂಖ್ಯೆ:ಎಮ್.ಎಲ್.ಎ/ ನಾಗಠಾಣ /ವಿ-4678/2020 ದಿನಾಂಕ.07.01.2020 | ಶಿಷ್ಟಾಚಾರ ಉಲ್ಲಂಘನೆಯಡಿ ನಾಗಠಾಣ ವಿಧಾನಸಭಾ ಕ್ಷೇತ್ರ ಮಹಲ ಐನಾಪೂರ ಗ್ರಾಮದ ಸರ್ಕಾರಿ ಕನ್ನಡ ಹಿರಿಯ ಪ್ರಾಥಮಿಕ ಶಾಲೆಯ ಮುಖ್ಯ ಗುರುಗಳಾದ ಶ್ರೀ ಪಿ.ಎಸ್ ತಳಕೇರಿ ರವರ ಮೇಲೆ ಶಿಸ್ತು ಕ್ರಮ ಜರುಗಿಸುವ ಕುರಿತು. | ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ವಿಜಯಪುರ ಇವರಿಗೆ ಸದರಿ ದೂರಿನ ವಿಚಾರಣೆ ಮಾಡಿ ವರದಿ ಸಲ್ಲಿಸಲು ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ. |
| 3 | ಶ್ರೀಮತಿ. ಶಶಿಕಲಾ ಜೊಲ್ಲೆ, ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲ ಚೇತನ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಹಾಗೂ ವಿಜಯಪುರ ಜಿಲ್ಲಾ ಉಸ್ತುವಾರಿ ಸಚಿವರ ಪತ್ರ ಸಂಖ್ಯೆ: ಮಮಾಸ/ಆಕಾ/801/2020, ದಿನಾಂಕ:28-4-2020 | ಮುಳವಾಡ ಏತ ನೀರಾವರಿ ಯೋಜನೆ ವ್ಯಾಪ್ತಿಯ ತಿಡಗೂಂದಿ ಶಾಖಾ ಕಾಲುವೆಯಲ್ಲಿ ಬೃಹತ್‌ಮೇಲ್ಸೇತುವೆಯನ್ನು ಬಬಲೇಶ್ವರ ಕ್ಷೇತ್ರದ ಶಾಸಕರಾದ ಶ್ರೀಎಂ.ಬಿಪಾಟೀಲರು ಲೋಕಾರ್ಪಣೆ ಮಾಡಿದ್ದಾರೆಂದು ಪ್ರತಿಕೆಯಲ್ಲಿ ವರದಿ ಕುರಿತು. | ಈ ಕುರಿತು ಮುಖ್ಯ ಅಭಿಯಂತರರು, ಕೆ.ಬಿ.ಜೆ.ಎನ್.ಎಲ್‌ಆಲಮಟ್ಟಿ ಇವರಿಂದ ವರದಿಯನ್ನು ಪಡೆಯಲಾಗಿದ್ದು, "ಮುಳವಾಡ ಏತ ನೀರಾವರಿ ಯೋಜನೆ ವ್ಯಾಪ್ತಿಯ ತಿಡಗುಂದಿ ಶಾಖಾ ಕಾಲುವೆಯಲ್ಲಿ ಬೃಹತ್‌ಮೇಲ್ಸೇತುವೆಯ ಕಾರ್ಯ ಪೂರ್ಣಗೊಂಡಿರುವುದರಿಂದ ದಿನಾಂಕ24-4-2020ರಂದು ಕಾಲುವೆ ಹಾಗೂ ಜಲ ಸೇತುವೆಯಲ್ಲಿ ನೀರು ಹರಿಸುವ ಸಮಯದಲ್ಲಿ ಕೃಷ್ಣಾ ಭಾಗ್ಯ ಜಲ ನಿಗಮದ ಅಧಿಕಾರಿಗಳು ನಿರ್ವಹಣೆಗಾಗಿ ಹಾಜರಿದ್ದು, ಸದರಿ ಸಮಯದಲ್ಲಿ ಸಾರ್ವಜನಿಕರು ಹಾಗೂ ಜನ ಪ್ರತಿನಿಧಿಗಳು ಸಹ ಹಾಜರಿದ್ದು ಸ್ವಯಂ ಪ್ರೇರಿತರಾಗಿ ಪೂಜೆಯನ್ನು ಕೈಗೊಂಡಿರುವರು, ಆದರೆ, ನೀರಾವರಿ ಇಲಾಖೆಯಿಂದ ಯಾವುದೇ ಸಮಾರಂಭ ಕೈಗೊಂಡಿರುವುದಿಲ್ಲ ಹಾಗೂ ಯಾವುದೇ ಶಿಷ್ಟಾಚಾರ ಉಲ್ಲಂಘನೆ ಹಾಗೂ ಕೋವಿಡ್-19ರ ಯಾವುದೇ ನಿಯಮಗಳನ್ನು ಉಲ್ಲಂಘಿಸಿರುವುದಿಲವೆಂದು ವರದಿ ಸಲ್ಲಿಸಿರುವುದಾಗಿ ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ. |
| 4 | ಡಾ\|\| ದೇವಾನಂದ ಫುಲಸಿಂಗ್ ಚವಾಣ್, ಮಾನ್ಯ ಶಾಸಕರು, ನಾಗಠಾಣಾ ವಿಧಾನ ಸಭಾ ಕ್ಷೇತ್ರ, ವಿಜಯಪುರ ಜಿಲ್ಲೆ ಇವರ ಪತ್ರ ಸಂಖ್ಯೆ:ಎಮ್.ಎಲ್.ಎ/ ನಾಗಠಾಣ /ವಿ-5561/2020. | ಶಿಷ್ಟಾಚಾರ ಪಾಲಿಸುವಲ್ಲಿ ಅಗೌರವ ತೋರಿರುವ ಕೃಷ್ಣಾ ಕಾಡಾ ಅಭಿಯಂತರರುಗಳ ಮೇಲೆ ದೂರಿನ ಕುರಿತು. | ಉಪವಿಭಾಗಾಧಿಕಾರಿಗಳು ಇಂಡಿ ಇವರಿಗೆ ಸದರಿ ದೂರಿನ ವಿಚಾರಣೆ ಮಾಡಿ ವರದಿ ಸಲ್ಲಿಸಲು ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ. |

| | | | |
|---|---|---|---|
| 5 | ಡಾ|| ದೇವಾನಂದ ಫುಲಸಿಂಗ್ ಚವಾಣ್, ಮಾನ್ಯ ಶಾಸಕರು, ನಾಗಠಾಣ ವಿಧಾನ ಸಭಾ ಕ್ಷೇತ್ರ, ವಿಜಯಪುರ ಜಿಲ್ಲೆ ಇವರ ಪತ್ರ ಸಂಖ್ಯೆ:ಎಮ್.ಎಲ್.ಎ/ ನಾಗಠಾಣ /ವಿ-5320/2020, ದಿನಾಂಕ:02-6-2020 | ಶ್ರೀ ಎಸ್.ಆರ್.ಆಲಗೂರ, ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಮೊಬೈಲ್ ಸಂಖ್ಯೆಗೆ ಸಾರ್ವಜನಿಕ ದೂರಿನ ಮೇರೆಗೆ ಚರ್ಚಿಸಲು ಹಲವಾರು ಬಾರಿ ಕರೆ ಮಾಡಿದರು ಸಹ ಉದ್ದೇಶಪೂರ್ವಕವಾಗಿ ಕರೆಯನ್ನು ಸ್ವೀಕರಿಸದೆ ಶಿಷ್ಟಾಚಾರ ಉಲ್ಲಂಘಿಸಿರುವ ಬಗ್ಗೆ. | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ವಿಜಯಪುರ ಇವರಿಗೆ ಸದರಿ ದೂರಿನ ವಿಚಾರಣೆ ಮಾಡಿ ಅಗತ್ಯ ಕ್ರಮಕೈಗೊಳ್ಳಲು ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ. |
| 6 | ಡಾ||ಎಂ.ಬಿ ಪಾಟೀಲ, ಮಾನ್ಯ ಶಾಸಕರು ಹಾಗೂ ಮಾಜಿ ಸಚಿವರು, ಬಬಲೇಶ್ವರ ವಿಧಾನಸಭಾ ಕ್ಷೇತ್ರ ಇವರ ಪತ್ರ ಸಂಖ್ಯೆ:ಎಂ.ಬಿ.ಪಿ/ಬ.ಶಾ/ಗೃ.ಕ.ವಿಜೆಪಿ/1061/2020 ದಿನಾಂಕ.27.07.2020 | ಹಕ್ಕುಚ್ಯುತಿ ಹಾಗೂ ಶಿಷ್ಟಾಚಾರ ಉಲ್ಲಂಘನೆ ಮಾಡಿ ಹೊನಗನಹಳ್ಳಿ ಗ್ರಾಮದ ಸಂತೆಕಟ್ಟೆ ಕಾಮಗಾರಿ ಭೂಮಿ ಪೂಜೆ ಮಾಡಿದವರ ಹಾಗೂ ಅದಕ್ಕೆ ಪ್ರಚೋದನೆ ನೀಡಿದವರ ವಿರುದ್ಧ ಕಾನೂನು ಕ್ರಮ ಜರುಗಿಸುವ ಕುರಿತು | ಉಪನಿರ್ದೇಶಕರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ವಿಜಯಪುರ ಇವರಿಗೆ ಸದರಿ ದೂರಿನ ವಿಚಾರಣೆ ಮಾಡಿ ವರದಿ ಸಲ್ಲಿಸಲು ಜಿಲ್ಲಾಧಿಕಾರಿಗಳು ಸೂಚಿಸಿರುತ್ತಾರೆ |
| 7 | ಶ್ರೀ ಸೋಮನಗೌಡ ಬ ಪಾಟೀಲ (ಸಾಸನೂರ), ಮಾನ್ಯ ಶಾಸಕರು, ದೇವರಹಿಪ್ಪರಗಿ ವಿಧಾನಸಭಾ ಮತಕ್ಷೇತ್ರ ಇವರ ಪತ್ರ ಸಂಖ್ಯೆ:ಎಸ್‌ಬಿಪಿ/ಎಂಎಲ್‌ಎ/2262/2020-21, ದಿನಾಂಕ.30.11.2020 | ವಿಜಯಪುರ ಜಿಲ್ಲೆಯ ದೇವರಹಿಪ್ಪರಗಿ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಹಿಟ್ಟನಹಳ್ಳಿ-ಅಂಕಲಗಿ ರಸ್ತೆ ಕಾಮಗಾರಿಯನ್ನು ಕೆ.ಆರ್.ಐ.ಡಿ.ಎಲ್ ವಿಜಯಪುರ ಇವರು ತಮ್ಮ ಮನಬಂದಂತೆ ರಸ್ತೆ ಕಾಮಗಾರಿಗೆ ಚಾಲನೆ ನೀಡಿದ್ದು, ಶಿಷ್ಟಾಚಾರವನ್ನು ಪಾಲಿಸದಿರುವ ಕುರಿತು . | ಕಾರ್ಯನಿರ್ವಾಹಕ ಅಭಿಯಂತರರು, ಕೆ.ಆರ್.ಐ.ಡಿ.ಎಲ್ ವಿಜಯಪುರ ಇವರಿಗೆ ಸದರಿ ದೂರಿನ ವಿಚಾರಣೆ ಮಾಡಿ ವರದಿ ಸಲ್ಲಿಸಲು ಜಿಲ್ಲಾಧಿಕಾರಿಗಳು ಸೂಚಿಸಿರುತ್ತಾರೆ. |
| 8 | ಡಾ||ಎಂ.ಬಿ ಪಾಟೀಲ, ಮಾನ್ಯ ಶಾಸಕರು ಹಾಗೂ ಮಾಜಿ ಸಚಿವರು, ಬಬಲೇಶ್ವರ ವಿಧಾನಸಭಾ ಕ್ಷೇತ್ರ ಇವರ ಪತ್ರ ಸಂ.ಎಂ.ಬಿ.ಪಿ/ಬ.ಶಾ/ಗೃ.ಕವಿಜೆಪಿ/320/2021 ದಿನಾಂಕ.26.05.2021 | ಹಕ್ಕುಚ್ಯುತಿ ಹಾಗೂ ಶಿಷ್ಟಾಚಾರ ಉಲ್ಲಂಘನೆ ಮಾಡಿ ಅನಧಿಕೃತವಾಗಿ ಅಧಿಕಾರಿಗಳ ಸಭೆಯನ್ನು ಆಯೋಜಿಸಿದ ಪರಾಜಿತ ಅಭ್ಯರ್ಥಿಯಾದ ಶ್ರೀ ವಿಜುಗೌಡ ಪಾಟೀಲ ಹಾಗೂ ಭಾಗವಹಿಸಿದ ಅಧಿಕಾರಿಗಳ ವಿರುದ್ಧ ಕ್ರಮ ಜರುಗಿಸುವ ಕುರಿತು. | 1) ಉಪವಿಭಾಗಾಧಿಕಾರಿಗಳು ವಿಜಯಪುರ,<br>2) ಉಪಕಾರ್ಯದರ್ಶಿ, ಜಿಲ್ಲಾ ಪಂಚಾಯತ್ ವಿಜಯಪುರ.<br>3) ಪೊಲೀಸ್ ಉಪಾಧೀಕ್ಷಕರು, ವಿಜಯಪುರ ವಿಭಾಗ,<br>4) ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ವಿಜಯಪುರ ಇವರ ಅಧಿಕಾರಿಗಳನ್ನೊಳಗೊಂಡ ತಂಡವನ್ನು ರಚಿಸಿ ಸದರಿ ದೂರಿನ ವಿಚಾರಣೆ ಮಾಡಿ ವರದಿ ಸಲ್ಲಿಸಲು ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ. |
| 9 | ಶ್ರೀ ವಿಜುಗೌಡ ಎಸ್ ಪಾಟೀಲ, ಅಧ್ಯಕ್ಷರು, ಕರ್ನಾಟಕ ರಾಜ್ಯ ಬೀಜ ಮತ್ತು ಸಾವಯುವ ಪ್ರಮಾಣನ ಸಂಸ್ಥೆ ಬೆಂಗಳೂರು ಇವರ ಪತ್ರ ಸಂಖ್ಯೆ:ವಿಎಸ್‌ಪಿ/ಗೃ/30/2020-21, ದಿನಾಂಕ.7.6.2021 | ಶಿಷ್ಟಾಚಾರ ಉಲ್ಲಂಘನೆ ಮಾಡಿ ಅನಧಿಕೃತವಾಗಿ ಸರ್ಕಾರಿ ಕಾರ್ಯಕ್ರಮವನ್ನು ಚುನಾವಣೆಯಲ್ಲಿ ಸ್ಪರ್ಧಿತ ಅಭ್ಯರ್ಥಿಯಾದ ಶ್ರೀ ಎಂ.ಬಿ ಪಾಟೀಲ ಇವರ ಸರಕಾರಿ ಆಪ್ತ ಸಹಾಯಕರಿಂದ (ಕಂದಾಯ ಇಲಾಖೆ ಗ್ರಾಮಲೆಕ್ಕಾಧಿಕಾರಿ) ಚಾಲನೆ ನೀಡಿದ ಕಾರಣ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸವು ಕುರಿತು. | ಉಪವಿಭಾಗಾಧಿಕಾರಿಗಳು, ವಿಜಯಪುರ ಇವರಿಗೆ ಸದರಿ ದೂರಿನ ವಿಚಾರಣೆ ಮಾಡಿ ವರದಿ ಸಲ್ಲಿಸಲು ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ. |
| 10 | ಡಾ|| ದೇವಾನಂದ ಫುಲಸಿಂಗ್ ಚವಾಣ್, ಮಾನ್ಯ ಶಾಸಕರು, ನಾಗಠಾಣ ವಿಧಾನ ಸಭಾ ಕ್ಷೇತ್ರ, ವಿಜಯಪುರ ಜಿಲ್ಲೆ ಇವರ ಪತ್ರ ಸಂಖ್ಯೆ:ಎಮ್.ಎಲ್.ಎ/ ನಾಗಠಾಣ /ವಿ-8914/2021, ದಿನಾಂಕ:24-12-2021 | ಶ್ರೀ ರಮೇಶ ಮೇತ್ರಿ, ಕಾರ್ಯನಿರ್ವಾಹಕ ಅಭಿಯಂತರರು ಹಾಗೂ ಶ್ರೀ ಪ್ರಕಾಶ ನಾಯ್ಕ, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆ ಇವರು ಜನ ಪ್ರತಿನಿಧಿಗಳಿಂದ ಬಂದ ದೂರವಾಣಿ ಕರೆಗಳಿಗೆ ಮರಳಿ ಉತ್ತರ ನೀಡದೇ ಇರುವ ಬಗ್ಗೆ ದೂರು. | ಸಂಬಂಧಪಟ್ಟ ಅಧಿಕಾರಿಗಳಿಗೆ ಕಾರಣ ಕೇಳುವ ನೋಟೀಸ್ ಜಾರಿಗೊಳಿಸಿ, ವಿವರಣೆಯನ್ನು ಪಡೆದಿದ್ದು, ಪರಿಶೀಲಿಸಲಾಗುತ್ತಿರುವುದಾಗಿ ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ. |

****

# ಅನುಬಂಧ-2

| ಕ್ರ.ಸಂ | ದೂರು ನೀಡಿದ ಶಾಸಕರ /ಸಂಸತ್ ಸದಸ್ಯರ ಹೆಸರು /ಕ್ಷೇತ್ರ/ ಪತ್ರದ ದಿನಾಂಕ | ದೂರಿನ ಸಂಕ್ಷಿಪ್ತ ವಿವರ | ತೆಗೆದುಕೊಂಡು ಕ್ರಮ |
|---|---|---|---|
| 1 | ಡಾ|| ದೇವಾನಂದ ಫುಲಸಿಂಗ ಚವಾಣ್, ಮಾನ್ಯ ಶಾಸಕರು, ನಾಗರಣಾ ವಿಧಾನ ಸಭಾಕ್ಷೇತ್ರ, ವಿಜಯಪುರ ಜಿಲ್ಲೆ ಇವರ ಪತ್ರ ಸಂಖ್ಯೆ:ಎಮ್.ಎಲ್.ಎ/ ನಾಗಠಾಣ /ವಿ-4678/2020, ದಿನಾಂಕ.07.01.2020 | ಶಿಷ್ಟಾಚಾರ ಉಲ್ಲಂಘನೆಯಡಿ ನಾಗಠಾಣ ವಿಧಾನಸಭಾ ಕ್ಷೇತ್ರ ಮಹಲ ಐನಾಪೂರ ಗ್ರಾಮದ ಸರ್ಕಾರಿ ಕನ್ನಡ ಹಿರಿಯ ಪ್ರಾಥಮಿಕ ಶಾಲೆಯ ಮುಖ್ಯ ಗುರುಗಳಾದ ಶ್ರೀ ಪಿ.ಎಸ್ ತಳಕೇರಿ ರವರ ಮೇಲೆ ಶಿಸ್ತು ಕ್ರಮ ಜರುಗಿಸುವ ಕುರಿತು. | ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ವಿಜಯಪುರ ಇವರಿಗೆ ಸದರಿ ದೂರಿನ ವಿಚಾರಣೆ ಮಾಡಿ ವರದಿ ಸಲ್ಲಿಸಲು ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ. |
| 2 | ಡಾ|| ದೇವಾನಂದ ಫುಲಸಿಂಗ ಚವಾಣ್, ಮಾನ್ಯ ಶಾಸಕರು, ನಾಗರಣಾ ವಿಧಾನ ಸಭಾ ಕ್ಷೇತ್ರ ವಿಜಯಪುರ ಜಿಲ್ಲೆ ಇವರ ಪತ್ರ ಸಂಖ್ಯೆ:ಎಮ್.ಎಲ್.ಎ/ ನಾಗಠಾಣ /ವಿ-5561/2020. | ಶಿಷ್ಟಾಚಾರ ಪಾಲಿಸುವಲ್ಲಿ ಅಗೌರವ ತೋರಿರುವ ಕೃಷ್ಣಾ ಕಾಡಾ ಅಭಿಯಂತರರುಗಳ ಮೇಲೆ ದೂರಿನ ಕುರಿತು. | ಉಪವಿಭಾಗಾಧಿಕಾರಿಗಳು, ಇಂಡಿ ಇವರಿಗೆ ಸದರಿ ದೂರಿನ ವಿಚಾರಣೆ ಮಾಡಿ ವರದಿ ಸಲ್ಲಿಸಲು ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ. |
| 3 | ಡಾ|| ದೇವಾನಂದ ಫುಲಸಿಂಗ ಚವಾಣ್, ಮಾನ್ಯ ಶಾಸಕರು, ನಾಗರಣಾ ವಿಧಾನ ಸಭಾ ಕ್ಷೇತ್ರ, ವಿಜಯಪುರ ಜಿಲ್ಲೆ ಇವರ ಪತ್ರ ಸಂಖ್ಯೆ:ಎಮ್.ಎಲ್.ಎ/ ನಾಗಠಾಣ /ವಿ-5320/2020, ದಿನಾಂಕ:02-6-2020 | ಶ್ರೀ ಎಸ್.ಆರ್.ಆಲಗೂರ, ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಮೊಬೈಲ್ ಸಂಖ್ಯೆಗೆ ಸಾರ್ವಜನಿಕ ದೂರಿನ ಮೇರೆಗೆ ಚರ್ಚಿಸಲು ಹಲವಾರು ಬಾರಿ ಕರೆ ಮಾಡಿದರು ಸಹ ಉದ್ದೇಶಪೂರ್ವಕವಾಗಿ ಕರೆಯನ್ನು ಸ್ವೀಕರಿಸದೆ ಶಿಷ್ಟಾಚಾರ ಉಲ್ಲಂಘಿಸಿರುವ ಬಗ್ಗೆ. | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ವಿಜಯಪುರ ಇವರಿಗೆ ಸದರಿ ದೂರಿನ ವಿಚಾರಣೆ ಮಾಡಿ ಅಗತ್ಯ ಕ್ರಮಕೈಗೊಳ್ಳಲು ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ. |
| 4 | ಡಾ|| ದೇವಾನಂದ ಫುಲಸಿಂಗ ಚವಾಣ್, ಮಾನ್ಯ ಶಾಸಕರು, ನಾಗರಣಾ ವಿಧಾನ ಸಭಾ ಕ್ಷೇತ್ರ, ವಿಜಯಪುರ ಜಿಲ್ಲೆ ಇವರ ಪತ್ರ ಸಂಖ್ಯೆ:ಎಮ್.ಎಲ್.ಎ/ ನಾಗಠಾಣ /ವಿ-8914/2021, ದಿನಾಂಕ:24-12-2021 | ಶ್ರೀ ರಮೇಶ ಮೇತ್ರಿ, ಕಾರ್ಯನಿರ್ವಾಹಕ ಅಭಿಯಂತರರು ಹಾಗೂ ಶ್ರೀ ಪ್ರಕಾಶ ನಾಯ್ಕ, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆ ಇವರು ಜನ ಪ್ರತಿನಿಧಿಗಳಿಂದ ಬಂದ ದೂರವಾಣಿ ಕರೆಗಳಿಗೆ ಮರಳಿ ಉತ್ತರ ನೀಡದೇ ಇರುವ ಬಗ್ಗೆ ದೂರು ಬಂದಿರುತ್ತದೆ. | ಸಂಬಂಧಪಟ್ಟ ಅಧಿಕಾರಿಗಳಿಗೆ ಕಾರಣ ಕೇಳುವ ನೋಟೀಸ್ ಜಾರಿಗೊಳಿಸಿ, ವಿವರಣೆಯನ್ನು ಪಡೆದಿದ್ದು, ಪರಿಶೀಲಿಸಲಾಗುತ್ತಿರುವುದಾಗಿ ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ. |

****

ಅನುಬಂಧ -3



**ಕರ್ನಾಟಕ ಸರ್ಕಾರ**

ಸಂಖ್ಯೆ: ಸಿಆಸುಇ 5 ಹೆಚ್‌ಪಿಎ 2019

ಕರ್ನಾಟಕ ಸರ್ಕಾರದ ಸಚಿವಾಲಯ
ವಿಧಾನ ಸೌಧ
ಬೆಂಗಳೂರು ದಿನಾಂಕ:30.04.2019.

**ಸುತ್ತೋಲೆ**

**ವಿಷಯ:** ಆಡಳಿತ ವರ್ಗ ಮತ್ತು ಸಂಸತ್ ಹಾಗೂ ರಾಜ್ಯ ವಿಧಾನ ಮಂಡಲ ಸದಸ್ಯರುಗಳ ನಡುವಣ ಸರ್ಕಾರದ ವ್ಯವಹಾರಗಳು – ಸೂಕ್ತ ಕಾರ್ಯವಿಧಾನದ ಪಾಲನೆ ಕುರಿತಾದ ಕ್ರೋಢೀಕೃತ ಸೂಚನೆಗಳು.

******

ಸರ್ಕಾರದ ಆಡಳಿತ ವರ್ಗ ಹಾಗೂ ಸಂಸತ್/ವಿಧಾನ ಮಂಡಲ ಸದಸ್ಯರು ಮತ್ತು ಇತರೆ ಚುನಾಯಿತ ಪ್ರತಿನಿಧಿಗಳ ನಡುವಣ ಸರ್ಕಾರಿ ವ್ಯವಹಾರಗಳ ಕಾರ್ಯವಿಧಾನದ ನಿರ್ವಹಣೆ ಕುರಿತು ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರದಿಂದ ಕಾಲಕಾಲಕ್ಕೆ ಸೂಚನೆ ಮತ್ತು ನಿರ್ದೇಶನಗಳನ್ನು ನೀಡಲಾಗಿರುತ್ತದೆ. ಈ ಎಲ್ಲಾ ಸುತ್ತೋಲೆಗಳನ್ನು ಹಿಂಪಡೆದು, ಅವುಗಳಲ್ಲಿದ್ದ ನಿರ್ದೇಶನಗಳನ್ನು ಸಮಗ್ರವಾಗಿ ಕೆಳಕಂಡಂತೆ ಒಟ್ಟುಗೂಡಿಸಿ ನೀಡಲಾಗಿದೆ. ಈ ಸೂಚನೆಗಳನ್ನು ಸರ್ಕಾರದ ಎಲ್ಲಾ ಅಧಿಕಾರಿ/ಸಿಬ್ಬಂದಿಗಳು ಕಡ್ಡಾಯವಾಗಿ ಪಾಲಿಸುವಂತೆ ಸೂಚಿಸಲಾಗಿದೆ.

**ಭೇಟಿ**

1. ಪ್ರಜಾಪ್ರಭುತ್ವದಲ್ಲಿ ಚುನಾಯಿತ ಪ್ರತಿನಿಧಿಗಳಾದ ಸಂಸತ್ ಸದಸ್ಯರು ಹಾಗೂ ರಾಜ್ಯ ವಿಧಾನ ಮಂಡಲದ ಸದಸ್ಯರುಗಳ ಸ್ಥಾನವು ಮಹತ್ವಪೂರ್ಣವಾಗಿದ್ದು, ಅವರು ಸಾರ್ವಜನಿಕರ ಹಾಗೂ ಆಡಳಿತ ವ್ಯವಸ್ಥೆಯ ನಡುವೆ ಪ್ರಮುಖ ಕೊಂಡಿಯಾಗಿರುತ್ತಾರೆ. ಅವರು ಕ್ಷೇತ್ರ ಒಂದರ ಪ್ರತಿನಿಧಿ ಎಂಬ ಅಂಶವನ್ನು ಗಮನದಲ್ಲಿಟ್ಟುಕೊಂಡು ಅವರು ನೀಡುವ ಮನವಿ ಹಾಗೂ ಸಲಹೆಗಳನ್ನು ಪರಿಗಣಿಸುವುದಲ್ಲದೆ ಸರ್ಕಾರಿ ಕಚೇರಿಗಳಿಗೆ ಭೇಟಿ ನೀಡಿದಾಗ ಅವರುಗಳಿಗೆ ಸೂಕ್ತ ಗೌರವ ನೀಡುವಂತೆ ಮತ್ತು ಸೌಜನ್ಯಪೂರ್ವಕವಾಗಿ ನಡೆದುಕೊಳ್ಳಲು ಸೂಚಿಸಲಾಗಿದೆ.

2. ಅವರು ಏನು ಹೇಳಬಹುದು ಎಂಬುದನ್ನು ಎಚ್ಚರಿಕೆಯಿಂದ ಪರ್ಯಾಲೋಚಿಸಿ ಅಥವಾ ತಾಳ್ಮೆಯಿಂದ ಆಲಿಸಿ ಸರ್ಕಾರಿ ನೌಕರರು ತಮ್ಮ ಸ್ವಂತ ವಿವೇಚಾನುಸಾರವಾಗಿ ನಿಯಮಾನುಸಾರವಾಗಿ ನಡೆದುಕೊಳ್ಳಬೇಕು.

3. ಅವರು ಭೇಟಿಗಾಗಿ ಕೋರಿದಾಗ ಆದ್ಯತೆ ಮೇಲೆ ಅವಕಾಶ ನೀಡಬೇಕಾಗಿರುತ್ತದೆ. ಅಧಿಕಾರಿಗಳನ್ನು ಭೇಟಿ ಮಾಡಲು ಗೊತ್ತುಪಡಿಸಿಕೊಂಡ ಸಂದರ್ಶನ ವ್ಯವಸ್ಥೆಯಲ್ಲಿ/ಭೇಟಿಮಾಡಲು ಯಾವುದೇ ಅನಾನುಕೂಲತೆಯಿಂದಾಗಿ ತಪ್ಪಿಹೋದಲ್ಲಿ ಅವರೊಂದಿಗೆ ಸಮಾಲೋಚಿಸಿ ಹೊಸದಾಗಿ ಸಂದರ್ಶನ ಸಮಯವನ್ನು ನಿಗದಿಪಡಿಸಬೇಕು.

4. ಒಂದು ವೇಳೆ ಯಾವುದೇ ಮುನ್ಸೂಚನೆ ಇಲ್ಲದೆ ಭೇಟಿಗಾಗಿ ಬಂದರು ಸಹ, ಆದ್ಯತೆ ಮೇಲೆ ಅವರಿಗೆ ಭೇಟಿ ಮಾಡಲು ಅವಕಾಶ ಕಲ್ಪಿಸುವುದು.

## ಸರ್ಕಾರಿ ಕಾರ್ಯಕ್ರಮ

ಸರ್ಕಾರಿ ಸಭೆ ಮತ್ತು ಸಮಾರಂಭಗಳಿಗೆ ಜನಪ್ರತಿನಿಧಿಗಳನ್ನು ಆಹ್ವಾನಿಸುವಲ್ಲಿ ಅನುಸರಿಸಬೇಕಾದ ಶಿಷ್ಟಾಚಾರದ ಕುರಿತು ಹೊರಡಿಸಿರುವ ಸರ್ಕಾರದ ಸುತ್ತೋಲೆ ಸಂಖ್ಯೆ:34 ಹೆಚ್.ಪಿ.ಎ. 2018(1) ದಿನಾಂಕ 06-03-2019 ರ ಮತ್ತು ಈ ಸುತ್ತೋಲೆಗೆ ಕಾಲಕಾಲಕ್ಕೆ ಮಾಡುವ ತಿದ್ದುಪಡಿ ಅಂಶಗಳನ್ನು ಚಾಚು ತಪ್ಪದೇ ಪಾಲಿಸುವುದು.

## ದೂರವಾಣಿ ಕರೆಗಳು

ಸಂಸದರು ಹಾಗೂ ವಿಧಾನ ಮಂಡಲದ ಸದಸ್ಯರುಗಳು ದೂರವಾಣಿ ಕರೆಗಳನ್ನು ಮಾಡಿದಾಗ ಪ್ರಧಾನ ಕಾರ್ಯದರ್ಶಿಗಳು, ಕಾರ್ಯದರ್ಶಿಗಳು ಹಾಗೂ ಇಲಾಖಾ ಮುಖ್ಯಸ್ಥರುಗಳು ಸಭೆಯಲ್ಲಿದ್ದಾಗ ಅವರ ಆಪ್ತ ಕಾರ್ಯದರ್ಶಿಗಳು/ ಆಪ್ತ ಸಹಾಯಕರು ಅವರಿಗೆ ಬಂದಂತಹ ದೂರವಾಣಿ ಕರೆಗಳನ್ನು ಪಟ್ಟಿ ಮಾಡುವುದಲ್ಲದೆ ಅವರುಗಳು ಹಿಂದಿರುಗಿ ಬಂದ ನಂತರ ಅವರಿಗೆ ಅದನ್ನು ತೋರಿಸಲು ಕ್ರಮ ತೆಗೆದುಕೊಳ್ಳತಕ್ಕದ್ದು ಹಾಗೂ ಅಂತಹ ದೂರವಾಣಿ ಕರೆಗಳನ್ನು ಕಡ್ಡಾಯವಾಗಿ ಹಿಂತಿರುಗಿಸುವಂತೆ ಸೂಚಿಸಲಾಗಿದೆ.

## ಪತ್ರ ವ್ಯವಹಾರ

1) ಸಂಸತ್ ಸದಸ್ಯರಿಂದ ಹಾಗೂ ವಿಧಾನ ಮಂಡಲ ಸದಸ್ಯರುಗಳಿಂದ ಸ್ವೀಕರಿಸಿದ ಪತ್ರಗಳನ್ನು ತ್ವರಿತವಾಗಿ ನಿರ್ವಹಿಸತಕ್ಕದ್ದು. ಸಾರ್ವಜನಿಕರಿಗೆ ಅಥವಾ ಅವರ ಒಂದು ಭಾಗಕ್ಕೆ ಅಥವಾ ಯಾವುದೇ ವ್ಯಕ್ತಿಗೆ ಅನ್ಯಾಯವಾಗಿದೆ ಎಂದು ಸಂಸದರು ಅಥವಾ ವಿಧಾನ ಮಂಡಲದ ಸದಸ್ಯರುಗಳಿಂದ ಸಚಿವರಿಗೆ ಪತ್ರ ಬಂದಲ್ಲಿ ಅವರ ಆಪ್ತ ಕಾರ್ಯದರ್ಶಿಯವರು ಸ್ವೀಕೃತಿಯನ್ನು ನೀಡತಕ್ಕದ್ದು ಹಾಗೂ ಅದರ ಅಂತಿಮ ವಿಲೇವಾರಿಯನ್ನು ಗಮನಿಸತಕ್ಕದ್ದು ಮತ್ತು ಸಂಬಂಧಪಟ್ಟ ಸದಸ್ಯರಿಗೆ ಅಂತಿಮ ಉತ್ತರವನ್ನು ನೀಡತಕ್ಕದ್ದು.

2) ಸರ್ಕಾರದ ಕಾರ್ಯದರ್ಶಿ ಅಥವಾ ಇತರೆ ಹಿರಿಯ ಅಧಿಕಾರಿಗಳಿಗೆ ಇದೇ ರೀತಿಯ ಪತ್ರವು ಸದಸ್ಯರುಗಳಿಂದ ಸ್ವೀಕೃತವಾದಲ್ಲಿ ಸ್ವೀಕೃತಿಯನ್ನು ನೀಡುವುದಲ್ಲದೇ ಸದರಿ ಅಧಿಕಾರಿಯು ವಿಷಯವನ್ನು ತ್ವರಿತಗತಿಯಲ್ಲಿ ಪರಿಶೀಲಿಸಿ ಸೂಕ್ತ ಉತ್ತರವನ್ನು ಕಳುಹಿಸತಕ್ಕದ್ದು.

3) ಯಾವುದೇ ಇಲಾಖಾ ಮುಖ್ಯಸ್ಥರು, ಸಾರ್ವಜನಿಕ ಉದ್ದಿಮೆಗಳು, ಸಂಸದರು ಅಥವಾ ವಿಧಾನ ಮಂಡಲದ ಸದಸ್ಯರುಗಳಿಂದ ಸ್ವೀಕರಿಸುವ ಪತ್ರಗಳನ್ನು ಪರಿಶೀಲಿಸಿ ಉತ್ತರವನ್ನು ನೀಡತಕ್ಕದ್ದು. ಪತ್ರಗಳಲ್ಲಿ ಸರ್ಕಾರದ ನೀತಿಯ ವಿಷಯಗಳು ಒಳಗೊಂಡಿದ್ದಲ್ಲಿ ಅಂತಹ ಪತ್ರಗಳನ್ನು ಉತ್ತರಿಸುವ ಪೂರ್ವದಲ್ಲಿ ಸಕ್ಷಮ ಪ್ರಾಧಿಕಾರದ ಅನುಮೋದನೆಯನ್ನು ಪಡೆಯತಕ್ಕದ್ದು.

4) ಕೂಡಲೇ ದೊರೆಯುವ ಮತ್ತು ರಹಸ್ಯವಲ್ಲದ ಸ್ಥಳೀಯ ಮಹತ್ವದ ವಿಷಯಗಳಿಗೆ ಸಂಬಂಧಿಸಿದಂತೆ ಮಾಹಿತಿ ಮತ್ತು ಅಂಕಿಅಂಶಗಳನ್ನು ಕೋರಿದಾಗ ಅಂತಹ ವಿವರಗಳನ್ನು ಒದಗಿಸಬೇಕಲ್ಲದೆ, ಸಂದೇಹಾಸ್ಪದ ಸಂದರ್ಭಗಳಲ್ಲಿ ಅವರ ಕೋರಿಕೆಯನ್ನು ತಿರಸ್ಕರಿಸುವ ಮೊದಲು ಉನ್ನತ ಅಧಿಕಾರಿಗಳಿಂದ ಸೂಚನೆಗಳನ್ನು ಪಡೆಯತಕ್ಕದ್ದು.

5) ಕಾರ್ಯನೀತಿಯಲ್ಲದ ವಿಷಯಗಳಲ್ಲಿ ಕೆಳಹಂತದ ಅಧಿಕಾರಿಗಳು ಸ್ವೀಕರಿಸುವ ಸದಸ್ಯರ ಪತ್ರಗಳಿಗೆ ಸಕ್ಷಮ ಪ್ರಾಧಿಕಾರದ ಅನುಮೋದನೆಯೊಂದಿಗೆ ಉತ್ತರ ನೀಡಬಹುದು ಮತ್ತು ಸರ್ಕಾರದ ನೀತಿಯನ್ನು ಒಳಗೊಂಡಿರುವ ಪ್ರಕರಣಗಳಲ್ಲಿ ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆದು ಉತ್ತರ ನೀಡತಕ್ಕದ್ದು.

6) ಸದನದಲ್ಲಿ ಉತ್ತರ, ತಿರಸ್ಕರಿಸುವ ಪ್ರಕರಣಗಳನ್ನು ಹೊರತುಪಡಿಸಿ ಸದಸ್ಯರಿಂದ ಮಾಹಿತಿ ಕೋರಿ ಸ್ವೀಕರಿಸುವ ಎಲ್ಲಾ ಪತ್ರಗಳಿಗೆ ಸ್ವೀಕೃತಿ ಪತ್ರವನ್ನು ಹಾಗೂ ಮುಂದಿನ 15 ದಿನಗಳಲ್ಲಿ ಕೈಗೊಂಡ ಕ್ರಮವನ್ನು ತಿಳಿಸತಕ್ಕದ್ದು.

7) ಉತ್ತರ ನೀಡಲು ವಿಳಂಬವಾದಲ್ಲಿ ಅಂತಿಮ ಉತ್ತರವನ್ನು ಎಷ್ಟು ದಿನಗಳೊಳಗಾಗಿ ನೀಡಲಾಗುವುದು ಎಂಬುದನ್ನು ಒಳಗೊಂಡಂತೆ ಮಧ್ಯಂತರ ಉತ್ತರವನ್ನು ನೀಡತಕ್ಕದ್ದು.

8) ಸದಸ್ಯರಿಗೆ ಉತ್ತರವನ್ನು ಕಳುಹಿಸುವಾಗ ಸ್ಪುಟವಾಗಿದೆ ಎಂಬುದನ್ನು ಖಚಿತಪಡಿಸಿಕೊಳ್ಳತಕ್ಕದ್ದು ಹಾಗೂ ಪೂರ್ವ ಮುದ್ರಿತ ಅಥವಾ ಸೈಕ್ಲೋಸ್ಟೈಲ್ ಮಾಡಿದ್ದ ಉತ್ತರವನ್ನು ಕಳುಹಿಸತಕ್ಕದ್ದಲ್ಲ.

9) ಮಾಜಿ ಸದಸ್ಯರು, ಸಚಿವರು ಅಥವಾ ಕಾರ್ಯದರ್ಶಿಯವರಿಗೆ ಪತ್ರ ಬರೆದಿದ್ದಲ್ಲಿ ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆದು ಉತ್ತರವನ್ನು ಕಳುಹಿಸತಕ್ಕದ್ದು.

10) ಸದಸ್ಯರು ಪತ್ರವನ್ನು ಸಂಬಂಧಪಟ್ಟ ಇಲಾಖೆಗೆ ಅಲ್ಲದೆ ಬೇರೆ ಇಲಾಖೆಗೆ ವಿಳಾಸಿಸಿದ್ದಲ್ಲಿ ಸದರಿ ಇಲಾಖೆಯು ಅಂತಹ ಪತ್ರಗಳನ್ನು ಸಂಬಂಧಪಟ್ಟ ಇಲಾಖೆಗೆ ಒಂದು ವಾರದೊಳಗೆ ವರ್ಗಾಯಿಸತಕ್ಕದ್ದು.

11) ಪತ್ರ ಸ್ವೀಕರಿಸಿದ ದಿನಾಂಕ, ಸ್ವೀಕೃತಿ ನೀಡಿದ ದಿನಾಂಕ, ಪರಿಶೀಲನೆಯ ಮುಂದುವರಿದ ಹಂತ ಮತ್ತು ಅಂತಿಮ ಉತ್ತರವನ್ನು ಕಳುಹಿಸಿದ ದಿನಾಂಕವನ್ನು ಒಳಗೊಂಡ ವಿಶೇಷ ವಹಿಯನ್ನು ಪ್ರತಿ ಸಚಿವರ ಮತ್ತು ಕಾರ್ಯದಶಿಯವರ ಕಛೇರಿಯಲ್ಲಿ ನಿರ್ವಹಿಸುವುದಲ್ಲದೆ ತ್ವರಿತ ಕ್ರಮ ಕೈಗೊಂಡ ಕುರಿತು ಪ್ರತಿ ತಿಂಗಳು ಸದರಿ ಅಧಿಕಾರಿಗಳು ಪರಿಶೀಲಿಸತಕ್ಕದ್ದು.

12) ಸೂಚನೆಗಳು ಸರ್ಕಾರದ ಇಲಾಖೆಗಳ ಆಡಳಿತಕ್ಕೊಳಪಡುವ ಎಲ್ಲಾ ಅಧಿಕಾರಿ ಮತ್ತು ಸಿಬ್ಬಂದಿ ವರ್ಗ ಮತ್ತು ಸರ್ಕಾರದ ಸ್ವಾಮ್ಯಕ್ಕೊಳಪಡುವ ಎಲ್ಲಾ ಸಂಸ್ಥೆಗಳಿಗೂ ಅನ್ವಯಿಸುತ್ತವೆ.

13) ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿ ಕಂಡಿಕೆ 143 ರನ್ವಯ ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ ನಿಯಮ 26ರಲ್ಲಿ ನಿಗದಿಪಡಿಸಿರುವಂತೆ ಸರ್ಕಾರಿ ನೌಕರರು ಸೇವಾ ಷರತ್ತುಗಳಿಗೆ ಸಂಬಂಧಪಟ್ಟ ವಿಷಯಗಳಲ್ಲಿ ವಿಧಾನ ಮಂಡಲದ/ ಸಂಸತ್ ಸದಸ್ಯರ ಅಥವಾ ಅಂತಹ ಇತರೆ ಪ್ರತಿಷ್ಠಿತರ ಬೆಂಬಲ ಅಥವಾ ಮಧ್ಯಸ್ಥಿಕೆ ಪಡೆಯುವುದಕ್ಕೆ ಅವಕಾಶ ಇರುವುದಿಲ್ಲ.

ಸರ್ಕಾರದ ಆಯುಕ್ತರು ಮತ್ತು ಕಾರ್ಯದರ್ಶಿಗಳು ಹಾಗೂ ಇಲಾಖಾ ಮುಖ್ಯಸ್ಥರುಗಳು ತಮ್ಮ ಆಡಳಿತಕ್ಕೊಳಪಡುವ ಎಲ್ಲಾ ಅಧಿಕಾರಿಗಳು ಹಾಗೂ ಸಿಬ್ಬಂದಿ ವರ್ಗಗಳು, ಸರ್ಕಾರದ ಸ್ವಾಮ್ಯಕ್ಕೊಳಪಡುವ ಎಲ್ಲಾ ಸಂಸ್ಥೆಗಳು ಚುನಾವಣಾ ಕ್ಷೇತ್ರವನ್ನು ಪ್ರತಿನಿಧಿಸುವ ಸಂಸತ್ ಸದಸ್ಯರು ಮತ್ತು ಶಾಸಕರುಗಳು ತಮ್ಮ ಕಚೇರಿಗಳಿಗೆ ಭೇಟಿ ನೀಡಿದಾಗ ಅವರುಗಳಿಗೆ ಸೂಕ್ತ ಗೌರವ ನೀಡುವಂತೆ ಮತ್ತು ಅವರುಗಳೊಡನೆ ಸೌಜನ್ಯಪೂರ್ವಕವಾಗಿ ನಡೆದುಕೊಳ್ಳಲು ಸೂಚಿಸಲಾಗಿದೆ. ಈ ಸೂಚನೆಗಳನ್ನು ಪಾಲಿಸದಿದ್ದಲ್ಲಿ, ಅಂತಹವರ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳಲಾಗುವುದೆಂದು ತಿಳಿಸಲಾಗಿದೆ.

ಕೆ. ರತ್ನಪ್ರಭಾ (signature)
ಸರ್ಕಾರದ ಮುಖ್ಯ ಕಾರ್ಯದರ್ಶಿ

**ಪ್ರತಿಗಳು:**

1) ಸರ್ಕಾರದ ಎಲ್ಲಾ ಅಪರ ಮುಖ್ಯ ಕಾರ್ಯದರ್ಶಿಗಳು.
2) ಸರ್ಕಾರದ ಎಲ್ಲಾ ಪ್ರಧಾನ ಕಾರ್ಯದರ್ಶಿಗಳು / ಕಾರ್ಯದರ್ಶಿಗಳು.
3) ರಾಜ್ಯಪಾಲರ ಪ್ರಧಾನ ಕಾರ್ಯದರ್ಶಿಗಳು, ರಾಜಭವನ, ಬೆಂಗಳೂರು.
4) ನಿವಾಸಿ ಆಯುಕ್ತರು, ಕರ್ನಾಟಕ ಭವನ, ನವದೆಹಲಿ.
5) ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆ.
6) ಕಾರ್ಯದರ್ಶಿ, ಕರ್ನಾಟಕ ವಿಧಾನ ಪರಿಷತ್.
7) ಎಲ್ಲಾ ವಿಭಾಗಾಧಿಕಾರಿಗಳು.
8) ಎಲ್ಲಾ ಇಲಾಖಾ ಮುಖ್ಯಸ್ಥರುಗಳು.
9) ಎಲ್ಲಾ ಜಿಲ್ಲಾಧಿಕಾರಿಗಳು.
10) ಎಲ್ಲಾ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು.
11) ಎಲ್ಲಾ ಸಚಿವರ ಆಪ್ತ ಕಾರ್ಯದರ್ಶಿಗಳು.
12) ಪತ್ರಿಕಾ ಪ್ರಕಟಣೆ / ಹೆಚ್ಚುವರಿ ಪ್ರತಿಗಳು.

**ಮಾಹಿತಿಗಾಗಿ:**

1) ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ.
2) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸು ಇಲಾಖೆ ಇವರ ಆಪ್ತ ಕಾರ್ಯದರ್ಶಿ.
3) ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸು ಇಲಾಖೆ (ರಾಜಕೀಯ)

DFA/663059

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 159

ಸದಸ್ಯರ ಹೆಸರು : ಶ್ರೀ ರಾಮಪ್ಪ.ಎಸ್.(ಹರಿಹರ)

ಉತ್ತರಿಸ ಬೇಕಾದ ದಿನಾಂಕ : 15.02.2022

ಉತ್ತರಿಸ ಬೇಕಾದ ಸಚಿವರು : ಮಾನ್ಯ ಮುಖ್ಯಮಂತ್ರಿಯವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ನಗರಾಭಿವೃದ್ಧಿ ಇಲಾಖೆಯ ನಗರೋತ್ಥಾನ ಯೋಜನೆಯಡಿಯಲ್ಲಿ ಹರಿಹರ ಕ್ಷೇತ್ರಕ್ಕೆ ಮಂಜೂರಾದ ರೂ.8.00 ಕೋಟಿ ಮೊತ್ತವನ್ನು ಆರ್ಥಿಕ ಇಲಾಖೆಯಿಂದ ತಡೆಹಿಡಿಯಲಾಗಿದ್ದು, ಸದರಿ ಮೊತ್ತವನ್ನು ಬಿಡುಗಡೆಗೊಳಿಸುವಂತೆ ಹಲವಾರು ಬಾರಿ ಸರ್ಕಾರಕ್ಕೆ ಮನವಿ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಅನುದಾನ ಕೊರತೆ ಹಿನ್ನೆಲೆಯಲ್ಲಿ ರೂ.642.5 ಕೋಟಿಗಳನ್ನು ತಡೆಹಿಡಿಯಲಾಗಿತ್ತು. ಸದರಿ ಮೊತ್ತದಲ್ಲಿ ಹರಿಹರ ಕ್ಷೇತ್ರಕ್ಕೆ ಒದಗಿಸಿದ್ದ ರೂ.8.00 ಕೋಟಿಗಳನ್ನು ತಡೆಹಿಡಿಯಲಾಗಿದೆ. |
| ಆ) | ಬಂದಿದ್ದಲ್ಲಿ ತಡೆಹಿಡಿಯಲಾದ ಅನುದಾನವನ್ನು ಯಾವ ಕಾಲಮಿತಿಯೊಳಗೆ ಬಿಡುಗಡೆಗೊಳಿಸಲಾಗುವುದು? (ಸಂಪೂರ್ಣ ವಿವರ ನೀಡುವುದು) | ಈ ಬಗ್ಗೆ ಪರಿಶೀಲಿಸಲಾಗುತ್ತಿದ್ದು, ರಾಜ್ಯದ ಆರ್ಥಿಕ ಪರಿಸ್ಥಿತಿಗೆ ಅನುಸಾರ ಪರಿಶೀಲಿಸಿ, ಸೂಕ್ತ ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ: ಆಇ 90 ವೆಚ್ಚ-9/ 2022

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

**ಕರ್ನಾಟಕ ವಿಧಾನ ಸಭೆ**

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 16
2. ಸದಸ್ಯರ ಹೆಸರು : ಡಾ॥ ಅಜಯ್ ಧರ್ಮ ಸಿಂಗ್ (ಜೇವರ್ಗಿ)
3. ಉತ್ತರಿಸಬೇಕಾದ ದಿನಾಂಕ : 15.02.2022
4. ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಯವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಸರ್ಕಾರದ ವಿವಿಧ ಇಲಾಖೆಗಳಲ್ಲಿ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರವು ತೆಗೆದುಕೊಂಡ ಕ್ರಮಗಳೇನು; | ಆರ್ಥಿಕ ಮಿತವ್ಯಯ ಜಾರಿಯಲ್ಲಿದ್ದರೂ ಸಹ ಇಲಾಖೆಗಳಿಂದ ಬರುವ ಪ್ರಸ್ತಾವನೆಗಳನ್ನು ಪ್ರಕರಣವಾರು ಪರಿಶೀಲಿಸಿ, ಸಾರ್ವಜನಿಕ ಕೆಲಸಕಾರ್ಯಗಳಿಗೆ ತೊಂದರೆಯಾಗದಂತೆ, ಅಗತ್ಯತೆಗೆ ಅನುಗುಣವಾಗಿ ಹುದ್ದೆಗಳ ಭರ್ತಿಗೆ ಸಹಮತಿ ನೀಡಲಾಗುತ್ತಿದೆ. |
| ಆ | ಹಾಗಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಕ್ರಮ ತೆಗೆದುಕೊಳ್ಳಲಾಗುವುದು; (ಪೂರ್ಣವಿವರ ನೀಡುವುದು) | ಸರ್ಕಾರವು ಒದಗಿಸುವ ಸೇವೆಗಳನ್ನು ಸಾರ್ವಜನಿಕರಿಗೆ ತಲುಪಿಸಲು ಮಾಹಿತಿ ಮತ್ತು ತಂತ್ರಜ್ಞಾನದ (ICT) ಬಳಕೆ ಮಾಡಿಕೊಳ್ಳಲಾಗುತ್ತಿದೆ. ಇದರಿಂದ ಸರಳವಾಗಿ ಹಾಗೂ ಸುಲಭವಾಗಿ ಸರ್ಕಾರದ ಸೇವೆಗಳನ್ನು ಪರಿಣಾಮಕಾರಿಯಾಗಿ ಮತ್ತು ಕಾಲಮಿತಿಯೊಳಗೆ ಒದಗಿಸಲು ಸಾಧ್ಯವಾಗುತ್ತದೆ.<br>ಅನವಶ್ಯಕ ವೆಚ್ಚವನ್ನು ಕಡಿತಗೊಳಿಸುವ ನಿಟ್ಟಿನಲ್ಲಿ ಆರ್ಥಿಕ ಮಿತವ್ಯಯ ಜಾರಿಗೊಳಿಸಲಾಗಿದೆ.<br>ಇಲಾಖೆಯಲ್ಲಿನ ಹುದ್ದೆಗಳನ್ನು ನೇರ ನೇಮಕಾತಿ ಮತ್ತು ಮುಂಬಡ್ತಿ ಹುದ್ದೆಗಳು ಎಂದು ಗುರುತಿಸಲಾಗಿದೆ. ಇವುಗಳ ಪೈಕಿ ಮುಂಬಡ್ತಿ ಹುದ್ದೆಗಳನ್ನು ಭರ್ತಿ ಮಾಡಲು ಆಡಳಿತ ಇಲಾಖೆಗಳಿಗೆ ಅಧಿಕಾರವಿರುತ್ತದೆ. ಅಂದರೆ ಆರ್ಥಿಕ ಇಲಾಖೆಯ ಅನುಮತಿ ಅವಶ್ಯಕತೆ ಇರುವುದಿಲ್ಲ. ನೇರ ನೇಮಕಾತಿ ಹುದ್ದೆಗಳಿಗೆ ಸಂಬಂಧಿಸಿದಂತೆ, ಪ್ರತಿ ಇಲಾಖೆಗೆ ನಿಗದಿಪಡಿಸಿರುವ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ನಿರ್ವಹಿಸಲು ಅವಶ್ಯವಿರುವ ಸಿಬ್ಬಂದಿಯನ್ನು ಭರ್ತಿ ಮಾಡಲು ಸ್ವೀಕೃತವಾಗುವ ಪ್ರಸ್ತಾವನೆಗಳನ್ನು ವೃಂದವಾರು ಪರಿಶೀಲಿಸಿ, ಅನುಮತಿ ನೀಡಲಾಗುತ್ತಿದೆ. ಅಂದರೆ, ಇಲಾಖೆಗಳಿಗೆ ನಿಗದಿಪಡಿಸಿರುವ ಕೆಲಸಗಳನ್ನು ನಿರ್ವಹಿಸಲು ಅಗತ್ಯವಿರುವ ಹುದ್ದೆಗಳ ಭರ್ತಿಗೆ ಆರ್ಥಿಕ ಮಿತವ್ಯಯ ಆದೇಶದಿಂದ ವಿನಾಯಿತಿ ನೀಡಲು ಕ್ರಮವಹಿಸಲಾಗುತ್ತಿದೆ.<br>ಪ್ರಸಕ್ತ ಸಾಲಿನಲ್ಲಿ, ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ |

DFA/664130

| | | |
|---|---|---|
| | | ಖಾಲಿ ಇದ್ದ 15,000 ಪಧವೀದರ ಪ್ರಾಥಮಿಕ ಶಾಲಾ ಶಿಕ್ಷಕರ ಹುದ್ದೆ ಭರ್ತಿ ಗೆ ಅನುಮತಿ ನೀಡಲಾಗಿದೆ. |
| ಇ | ರಾಜ್ಯ ಸರ್ಕಾರಿ ನೌಕರರಿಗೆ ಕೇಂದ್ರ ಸರ್ಕಾರಿ ನೌಕರರಿಗೆ ನೀಡುತ್ತಿರುವ ಸರಿ ಸಮಾನವಾದ ವೇತನ ಮತ್ತು ಭತ್ಯೆಗಳನ್ನು ನೀಡಲು ಸರ್ಕಾರ ಉದ್ದೇಶಿಸಿದೆಯೇ; | ಸಾಂಪ್ರದಾಯಿಕವಾಗಿ ರಾಜ್ಯ ಸರ್ಕಾರವು ತನ್ನದೇ ಆದ ವೇತನ ಆಯೋಗ/ವೇತನ ಸಮಿತಿಗಳಂತಹ ತಜ್ಞ ಸಮಿತಿಗಳ ಶಿಫಾರಸ್ಸಿನ ಮೇರೆಗೆ ರಾಜ್ಯ ಸರ್ಕಾರಿ ನೌಕರರ ವೇತನ ಮತ್ತು ಭತ್ಯೆಗಳನ್ನು ಕಾಲದಿಂದ ಕಾಲಕ್ಕೆ ಪರಿಷ್ಕರಿಸಿಕೊಂಡು ಬಂದಿರುತ್ತದೆ.<br>ಇದು ಸರ್ಕಾರದ ನೀತಿ ನಿರ್ಣಯಕ್ಕೆ ಸಂಬಂಧಿಸಿದ ವಿಷಯವಾಗಿದ್ದು ಸಂಧರ್ಭಾನುಸಾರ ಸರ್ಕಾರದ ಆರ್ಥಿಕ ಸ್ಥಿತಿಗತಿಗಳನ್ನು ಗಮನದಲ್ಲಿರಿಸಿ ಕ್ರಮ ಕೈಗೊಳ್ಳಲಾಗುವುದು. |
| ಈ | ಹಾಗಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಕ್ರಮ ಕೈಗೊಳ್ಳಲಾಗುವುದು? (ಪೂರ್ಣ ವಿವರ ನೀಡುವುದು) | ಮೇಲಿನ ಉತ್ತರದಿಂದ ಉದ್ಭವಿಸುವುದಿಲ್ಲ. |

ಸಂಖ್ಯೆ: ಆಇ 10 ಬಿಜಿಎಲ್ 2022

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 160 |
| ಸದಸ್ಯರ ಹೆಸರು | : | ಶ್ರೀ ರಾಮಪ್ಪ ಎಸ್. (ಹರಿಹರ) |
| ಉತ್ತರಿಸುವ ದಿನಾಂಕ | : | 15.02.2022 |
| ಉತ್ತರಿಸುವ ಸಚಿವರು | : | ಮಾನ್ಯ ಜಲಸಂಪನ್ಮೂಲ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹರಿಹರ ತಾಲ್ಲೂಕಿನಲ್ಲಿ ಜಲಸಂಪನ್ಮೂಲ ಇಲಾಖೆಯ ವತಿಯಿಂದ 2018–19ನೇ ಸಾಲಿನಿಂದ ಇಲ್ಲಿಯವರೆಗೂ ಕೈಗೊಂಡಿರುವ ಕಾಮಗಾರಿಗಳು ಯಾವುವು; ಸದರಿ ಕಾಮಗಾರಿಗಳಿಗೆ ಎಷ್ಟು ಅನುದಾನ ಮಂಜೂರು ಮಾಡಲಾಗಿದೆ; (ವರ್ಷವಾರು, ಅನುದಾನವಾರು ಲೆಕ್ಕಶೀರ್ಷಿಕೆವಾರು ಸಂಪೂರ್ಣ ವಿವರ ನೀಡುವುದು. | ಕರ್ನಾಟಕ ನೀರಾವರಿ ನಿಗಮದ ವ್ಯಾಪ್ತಿಯಲ್ಲಿನ ಹರಿಹರ ತಾಲ್ಲೂಕಿನಲ್ಲಿ 2018–19 ನೇ ಸಾಲಿನಿಂದ ಇಲ್ಲಿಯವರೆಗೂ ಲೆಕ್ಕಶೀರ್ಷಿಕೆವಾರು ಹಂಚಿಕೆಯಾಗಿರುವ ಅನುದಾನದ ವಿವರಗಳು ಈ ಕೆಳಗಿನಂತಿವೆ. |
| ಆ) | ಸದರಿ ಮಂಜೂರಾದ ಕಾಮಗಾರಿಗಳು ಯಾವ ಯಾವ ಹಂತದಲ್ಲಿವೆ; (ಸಂಪೂರ್ಣ ವಿವರ ನೀಡುವುದು) | |

| ಕ್ರ.ಸಂ. | ವರ್ಷ | ಲೆಕ್ಕಶೀರ್ಷಿಕೆವಾರು ಅನುದಾನ (ರೂ.ಲಕ್ಷಗಳಲ್ಲಿ) | | | |
|---|---|---|---|---|---|
| | | 4701 | 4701–SCP | 4701–TSP | 2701 |
| 1 | 2018–19 | 4.68 | 330.00 | 255.00 | 187.81 |
| 2 | 2019–20 | 0.00 | 0.00 | 0.00 | 142.70 |
| 3 | 2020–21 | 581.00 | 0.00 | 0.00 | 209.50 |
| 4 | 2021–22 | 564.93 | 75.00 | 525.00 | 20.00 |

ಕಾಮಗಾರಿಯ ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

**ಸಂಖ್ಯೆ: ಜಸಂಇ 15 ಎಂಎಲ್ಎ 2022**

(ಗೋವಿಂದ ಎಂ.ಕಾರಜೋಳ)
ಜಲಸಂಪನ್ಮೂಲ ಸಚಿವರು

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ರಾಮಪ್ಪ ಎಸ್. (ಹರಿಹರ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 160 ಕ್ಕೆ ಅನುಬಂಧ

Head of Account: 4701
Year: 2018-19
Malebennuru division

| Sl.No | Name of work | Estimate Amount (in lakhs) | Present Status |
|---|---|---|---|
| 1 | 3 | 5.00 | 12 |
| 1 | Drilling of bore holes and location & existing pezometer & D.B. kere pickup project (Indent No.25556) | 4.68 | work completed |
| | Total (A) | 4.68 | |

Head of Account: 4701 SCP
Year: 2018-19
Davanagere division

| Sl. No | Name of Work | Granted Amount | Status of work |
|---|---|---|---|
| 1 | 2 | 3.00 | 4 |
| SCP | | | |
| 1 | ಹರಿಹರ ತಾಲ್ಲೂಕಿನ ಸಾರಥಿ ಗ್ರಾಮದ ಎಸ್.ಸಿ ಕಾಲೋನಿಯಲ್ಲಿ ಸಿಮೆಂಟ್ ಕಾಂಕ್ರೀಟ್ ರಸ್ತೆ ನಿರ್ಮಾಣ | 5.00 | Work completed |
| 2 | ಹರಿಹರ ತಾಲ್ಲೂಕಿನ ಕೊಂಡಜ್ಜಿ ಗ್ರಾಮದ ಎಸ್.ಸಿ ಕಾಲೋನಿಯಲ್ಲಿ ಸಿಮೆಂಟ್ ಕಾಂಕ್ರೀಟ್ ರಸ್ತೆ ನಿರ್ಮಾಣ | 5.00 | Work completed |
| 3 | ಹರಿಹರ ತಾಲ್ಲೂಕಿನ ಚಿಕ್ಕಬಿದರೆ ಗ್ರಾಮದ ಎಸ್.ಸಿ ಕಾಲೋನಿಯಲ್ಲಿ ಸಿ.ಸಿ. ರಸ್ತೆ & ಚರಂಡಿ ನಿರ್ಮಾಣ ಕಾಮಗಾರಿ. | 10.00 | Work completed |
| | Total(B) | 20.00 | |
| Malebennuru division | | | |
| 1 | ಹರಿಹರ ತಾಲ್ಲೂಕಿನ ಕೊಕ್ಕನೂರು ಗ್ರಾಮದ ಎಸ್.ಸಿ ಕಾಲೋನಿಯಲ್ಲಿ ಸಿಮೆಂಟ್ ಕಾಂಕ್ರೀಟ್ ರಸ್ತೆ ನಿರ್ಮಾಣ | 5.00 | ಪೂರ್ಣಗೊಂಡಿದೆ. |
| 2 | ಹರಿಹರ ತಾಲ್ಲೂಕಿನ ಯಲವಟ್ಟಿ ಗ್ರಾಮದ ಎಸ್.ಸಿ ಕಾಲೋನಿಯಲ್ಲಿ ಸಿಮೆಂಟ್ ಕಾಂಕ್ರೀಟ್ ರಸ್ತೆ ನಿರ್ಮಾಣ | 5.00 | ಪೂರ್ಣಗೊಂಡಿದೆ. |
| 3 | ಹರಿಹರ ತಾಲ್ಲೂಕಿನ ಆದಾಪುರ ಗ್ರಾಮದ ಎಸ್.ಸಿ ಕಾಲೋನಿಯಲ್ಲಿ ಸಿಮೆಂಟ್ ಕಾಂಕ್ರೀಟ್ ರಸ್ತೆ ನಿರ್ಮಾಣ | 5.00 | ಪೂರ್ಣಗೊಂಡಿದೆ. |
| 4 | ಹರಿಹರ ತಾಲ್ಲೂಕಿನ ಕೊಮಾರನಹಳ್ಳಿ ಗ್ರಾಮದ ಎಸ್.ಸಿ ಕಾಲೋನಿಯಲ್ಲಿ ಸಿಮೆಂಟ್ ಕಾಂಕ್ರೀಟ್ ರಸ್ತೆ ನಿರ್ಮಾಣ | 5.00 | ಪೂರ್ಣಗೊಂಡಿದೆ. |
| 5 | ಹರಿಹರ ತಾಲ್ಲೂಕಿನ ಶಂಖಿಪುರ ಗ್ರಾಮದ ಎಸ್.ಸಿ ಕಾಲೋನಿಯಲ್ಲಿ ಸಿಮೆಂಟ್ ಕಾಂಕ್ರೀಟ್ ರಸ್ತೆ ನಿರ್ಮಾಣ | 5.00 | ಪೂರ್ಣಗೊಂಡಿದೆ. |
| 6 | ಹರಿಹರ ತಾಲ್ಲೂಕಿನ ಬನ್ನಿಕೋಡು ಗ್ರಾಮದ ಎಸ್.ಸಿ ಕಾಲೋನಿಯಲ್ಲಿ ಸಿಮೆಂಟ್ ಕಾಂಕ್ರೀಟ್ ರಸ್ತೆ ನಿರ್ಮಾಣ | 5.00 | ಪೂರ್ಣಗೊಂಡಿದೆ. |
| 7 | ಹರಿಹರ ತಾಲ್ಲೂಕಿನ ಕಡರನಾಯಕನಹಳ್ಳಿ ಗ್ರಾಮದ ಎಸ್.ಸಿ ಕಾಲೋನಿಯಲ್ಲಿ ಸಿಮೆಂಟ್ ಕಾಂಕ್ರೀಟ್ ರಸ್ತೆ ನಿರ್ಮಾಣ | 5.00 | ಪೂರ್ಣಗೊಂಡಿದೆ. |
| 8 | ಹರಿಹರ ತಾಲ್ಲೂಕಿನ ಕುಣೆಬೆಳಕೆರೆ ಗ್ರಾಮದ ಎಸ್.ಸಿ ಕಾಲೋನಿಯಲ್ಲಿ ಕಾಂಕ್ರೀಟ್ ಬಾಕ್ಸ್ ಚರಂಡಿ ನಿರ್ಮಾಣ (ಹರಿಹರ ತಾಲ್ಲೂಕಿನ ಕುಣೆಬೆಳಕೆರೆ ಗ್ರಾಮದ ಎಸ್.ಸಿ ಕಾಲೋನಿಯಲ್ಲಿ ಸಿಮೆಂಟ್ ಕಾಂಕ್ರೀಟ್ ರಸ್ತೆ ನಿರ್ಮಾಣ ಬದಲಾಗಿ) | 5.00 | ಪ್ರಾರಂಭಿಸಬೇಕು |
| 9 | ಹರಿಹರ ತಾಲ್ಲೂಕು ಭಾನುವಳ್ಳಿ ಗ್ರಾಮದ ಎಸ್.ಸಿ ಕಾಲೋನಿಯಲ್ಲಿ ಸಿಮೆಂಟ್ ಕಾಂಕ್ರೀಟ್ ರಸ್ತೆ ನಿರ್ಮಾಣ. ( ಹರಿಹರ ತಾಲ್ಲೂಕಿನ ಭಾನುವಳ್ಳಿ ಗ್ರಾಮದ ಎಸ್.ಸಿ ಕಾಲೋನಿಯಲ್ಲಿ ಸಮುದಾಯ ಭವನ ನಿರ್ಮಾಣ ಬದಲಾಗಿ) | 10.00 | ಪ್ರಾರಂಭಿಸಬೇಕು |
| 10 | ಹರಿಹರ ತಾಲ್ಲೂಕು ಬೆಳ್ಳೂಡಿ ಗ್ರಾಮದ ಎಸ್.ಸಿ ಕಾಲೋನಿಯಲ್ಲಿ ಸಿಮೆಂಟ್ ಕಾಂಕ್ರೀಟ್ ರಸ್ತೆ ನಿರ್ಮಾಣ. (ಹರಿಹರ ತಾಲ್ಲೂಕಿನ ಬೆಳ್ಳೂಡಿ ಗ್ರಾಮದ ಎಸ್.ಸಿ ಕಾಲೋನಿಯಲ್ಲಿ ಸಮುದಾಯ ಭವನ ನಿರ್ಮಾಣ ಬದಲಾಗಿ) | 10.00 | ಪ್ರಾರಂಭಿಸಬೇಕು |
| 11 | ಹರಿಹರ ತಾಲ್ಲೂಕಿನ ಗುತ್ತೂರು ಗ್ರಾಮದ ಎಸ್.ಸಿ ಕಾಲೋನಿಯಲ್ಲಿ ಸಿ.ಸಿ. ರಸ್ತೆ & ಚರಂಡಿ ನಿರ್ಮಾಣ ಕಾಮಗಾರಿ. | 10.00 | ಪೂರ್ಣಗೊಂಡಿದೆ. |
| 12 | ಹರಿಹರ ತಾಲ್ಲೂಕಿನ ಗಂಗನರಸಿ ಗ್ರಾಮದ ಎಸ್.ಸಿ ಕಾಲೋನಿಯಲ್ಲಿ ಸಿ.ಸಿ. ರಸ್ತೆ & ಚರಂಡಿ ನಿರ್ಮಾಣ ಕಾಮಗಾರಿ. | 10.00 | ಪೂರ್ಣಗೊಂಡಿದೆ. |
| 13 | ಹರಿಹರ ತಾಲ್ಲೂಕಿನ ಮಲ್ಲನಾಯಕನಹಳ್ಳಿ ಗ್ರಾಮದ ಎಸ್.ಸಿ ಕಾಲೋನಿಯಲ್ಲಿ ಸಿ.ಸಿ. ರಸ್ತೆ & ಚರಂಡಿ ನಿರ್ಮಾಣ ಕಾಮಗಾರಿ. | 15.00 | ಪೂರ್ಣಗೊಂಡಿದೆ. |

| Sl.no | ಕಾಮಗಾರಿಯ ಹೆಸರು | ತಾಲ್ಲೂಕು | ಟೆಂಡರ್‌ಗಿಟ್ಟ ಮೊತ್ತ/ಎಸ್.ಆರ್ | ಗುತ್ತಿಗೆ ಮೊತ್ತ | ಟೆಂಡರ್ ಕರೆದ ದಿನಾಂಕ | ಗುತ್ತಿಗೆ ವಹಿಸಿದ ದಿನಾಂಕ | ನೀರಾವರಿ ಕ್ಷೇತ್ರ | ಗುತ್ತಿಗೆದಾರರ ಹೆಸರು |
|---|---|---|---|---|---|---|---|---|
| 7 | "Survey, Design, Supply, Installation, Testing and Commissioning of Micro Irrigation System under Chitradurga Branch Canal comprising Gravity Bulk Feeders, Construction of Sump cum Pump house, Supplying and installation of Pumping machineries, Terminal Bay, Electrical substation, Electrical power line and other appurtenant works including construction of Pipe Distribution Network and Automated Drip irrigation system for providing irrigation facility to 7421.00 Ha under Blocks 4A, 4B, 4C and 4D and filling up of 17 tanks coming under Chitradurga Branch Canal of Upper Bhadra Project including SCADA with all accessories, Operation and Maintenance for 5 years after the date of completion and transfer (BOMT) on Turnkey basis" CBC-Drip-Package - III" | ಹೊಸದುರ್ಗ | 310.6/354.79 | 433.13 | 08.06.2021 | 27.10.2021 | 18337.291 | SHAIK AFZAL (NCC LIMITED) |
| 8 | Survey, Design, Supply, Installation, Testing and Commissioning of Micro Irrigation System under Jagalur Branch Canal comprising Gravity Bulk Feeders, Construction of Sump cum Pump house, Supplying and installation of Pumping machineries, Terminal Bay, Electrical substation, Electrical power line and other appurtenant works including construction of Pipe Distribution Network and Automated Drip irrigation system for providing irrigation facility to 18423 Ha and filling up of 09 Nos. tanks coming under Jagaluru Block of Jagalur Branch Canal under Upper Bhadra Project including SCADA with all accessories Operation and Maintenance for 5 years after the date of completion and transfer (BOMT) on Turnkey basis." (JBC-Package-1) (INDENT NO:1692) | ಜಗಳೂರು | 1036.75/1195.37 | 1405.75 | 10.06.2021 | 28.10.2021 | 45524.224 | M/s Megha Engineering and Infrastructure Ltd and M/s Netafim Irrigation India Private Limited (JV), |
| 9 | Survey, Design, Supply, Installation, Testing and Commissioning of Micro Irrigation System under Jagalur Branch Canal comprising Gravity Bulk Feeders, Construction of Sump cum Pump house, Supplying and installation of Pumping machineries, Terminal Bay, Electrical substation, Electrical power line and other appurtenant works including construction of Pipe Distribution Network and Automated Drip irrigation system for providing irrigation facility to 5,700 Ha and filling up of 04 Nos. tanks coming under Chitradurga Block of Jagalur Branch Canal under Upper Bhadra Project including SCADA with all accessories Operation and Maintenance for 5 years after the date of completion and transfer (BOMT) on Turnkey basis. (JBC Package - 2) | ಚಿತ್ರದುರ್ಗ | 322.30/363.69 | 427.71 | 08.06.2021 | 27.10.2021 | 14085 | M/s Megha Engineering and Infrastructure Ltd and M/s Netafim Irrigation India Private Limited (JV), |
| | | | | **6322.14** | | | **218658.89** | |

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂ. | 84 |
| ಮಾನ್ಯ ಸದಸ್ಯರ ಹೆಸರು | ಶ್ರೀ ಶಿವಾನಂದ ಎಸ್.ಪಾಟೀಲ್ (ಬಸವನಬಾಗೇವಾಡಿ) |
| ಉತ್ತರಿಸಬೇಕಾದ ದಿನಾಂಕ | 15–02–2022 |
| ಉತ್ತರಿಸಬೇಕಾದವರು | ಅಬಕಾರಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಮೈಸೂರು ಸೇಲ್ಸ್ ಇಂಟರ್ ನ್ಯಾಷನಲ್ ಲಿಮಿಟೆಡ್ (ಎಂ.ಎಸ್.ಐ.ಎಲ್) ವತಿಯಿಂದ ಕಾರ್ಯನಿರ್ವಹಿಸುತ್ತಿರುವ ಮದ್ಯ ಮಾರಾಟ ಮಳಿಗೆಗಳು ಎಷ್ಟು; (ಜಿಲ್ಲಾವಾರು ಮಳಿಗೆಗಳ ಮಾಹಿತಿ ಒದಗಿಸುವುದು) | ರಾಜ್ಯದಲ್ಲಿ ಮೈಸೂರು ಸೇಲ್ಸ್ ಇಂಟರ್ ನ್ಯಾಷನಲ್ ಲಿಮಿಟೆಡ್ (ಎಂ.ಎಸ್.ಐ.ಎಲ್) ವತಿಯಿಂದ ಒಟ್ಟು **957** ಮದ್ಯ ಮಾರಾಟ ಮಳಿಗೆಗಳು ಕಾರ್ಯನಿರ್ಹಿಸುತ್ತಿವೆ. ಜಿಲ್ಲಾವಾರು ಮಳಿಗೆಗಳ ಮಾಹಿತಿಯನ್ನು **ಅನುಬಂಧದಲ್ಲಿ** ಇರಿಸಿದೆ. |
| ಆ) | ರಾಜ್ಯದಲ್ಲಿ ಎಂ.ಎಸ್.ಐ.ಎಲ್ ವತಿಯಿಂದ ಹೊಸದಾಗಿ ಮದ್ಯ ಮಾರಾಟ ಮಳಿಗೆಗಳನ್ನು ತೆರೆಯಲಾಗುವುದೇ; ಹಾಗಿದ್ದಲ್ಲಿ, ಈ ಮಳಿಗೆಗಳನ್ನು ತೆರೆಯಲು ಯಾವ ಕ್ರಮ ಕೈಗೊಳ್ಳಲಾಗಿದೆ; | ಸರ್ಕಾರದ ಪತ್ರ ಸಂಖ್ಯೆ: ಎಫ್‌ಡಿ 07 ಇಎಫ್‌ಎಲ್ 2008, ದಿನಾಂಕ:03.07.2009ರಲ್ಲಿ 463 ಹಾಗೂ ಎಫ್‌ಡಿ 15 ಇಎಫ್‌ಎಲ್ 2015, ದಿ:23.09.2016ರಲ್ಲಿ 900 ಹೀಗೆ ಒಟ್ಟಾರೆ 1363 ಸಿಎಲ್–11ಸಿ ಸನ್ನದುಗಳನ್ನು ಸರ್ಕಾರಿ ಸ್ವಾಮ್ಯದ ಎಂ.ಎಸ್.ಐ.ಎಲ್ ಸಂಸ್ಥೆಯವರಿಗೆ ಮಂಜೂರು ಮಾಡಲಾಗಿದ್ದು, ಈ ಪೈಕಿ ಒಟ್ಟು 957 ಮಳಿಗೆಗಳನ್ನು ತೆರೆಯಲಾಗಿದ್ದು, ಇನ್ನೂ 406 ಸನ್ನದುಗಳನ್ನು ತೆರೆಯಲು ಬಾಕಿ ಇರುತ್ತದೆ.<br>ಎಂ.ಎಸ್.ಐ.ಎಲ್ ಮಳಿಗೆಗಳನ್ನು ತೆರೆಯಲು ನಿಗದಿಪಡಿಸಿರುವ ಕೋಟಾದಲ್ಲಿ ಬಾಕಿ ಇರುವ ಸನ್ನದುಗಳನ್ನು ಮಾತ್ರ ತೆರೆಯಲಾಗುವುದು. |
| ಇ) | ವಿಧಾನಸಭಾ ಮತಕ್ಷೇತ್ರವಾರು ಎಷ್ಟು ಹೊಸ ಮದ್ಯ ಮಾರಾಟ ಮಳಿಗೆಗಳನ್ನು ತೆರೆಯಲಾಗುವುದು? (ವಿವರ ನೀಡುವುದು) | ಉದ್ಭವಿಸುವುದಿಲ್ಲ. |

ಆಇ 05 ಇಎಲ್‌ಕ್ಯೂ 2022

(ಕೆ. ಗೋಪಾಲಯ್ಯ)
ಅಬಕಾರಿ ಸಚಿವರು

# ಅನುಬಂಧ

ಕಾರ್ಯನಿರ್ವಹಿಸುತ್ತಿರುವ ಎಂಎಸ್‌ಐಎಲ್ ಮದ್ಯ ಮಳಿಗೆಗಳ ವಿವರ (ಜಿಲ್ಲಾವಾರು)

| ಕ್ರ.ಸಂ | ಜಿಲ್ಲೆ | ಕಾರ್ಯನಿರ್ವಹಿಸುತ್ತಿರುವ ಮಳಿಗೆಗಳು |
|---|---|---|
| 1 | ಬಾಗಲಕೋಟೆ | 43 |
| 2 | ಬೆಂಗಳೂರು ಗ್ರಾಮಾಂತರ | 10 |
| 3 | ಬೆಂಗಳೂರು ನಗರ | 71 |
| 4 | ಬೆಳಗಾವಿ | 79 |
| 5 | ಬಳ್ಳಾರಿ | 45 |
| 6 | ಬೀದರ್ | 32 |
| 7 | ವಿಜಯಪುರ | 39 |
| 8 | ಚಾಮರಾಜನಗರ | 12 |
| 9 | ಚಿಕ್ಕಬಳ್ಳಾಪುರ | 28 |
| 10 | ಚಿಕ್ಕಮಗಳೂರು | 30 |
| 11 | ಚಿತ್ರದುರ್ಗ | 29 |
| 12 | ದಕ್ಷಿಣ ಕನ್ನಡ | 24 |
| 13 | ದಾವಣಗೆರೆ | 37 |
| 14 | ಧಾರವಾಡ | 29 |
| 15 | ಗದಗ್ | 15 |
| 16 | ಕಲಬುರಗಿ | 43 |
| 17 | ಹಾಸನ | 38 |
| 18 | ಹಾವೇರಿ | 28 |
| 19 | ಕೊಡಗು | 9 |
| 20 | ಕೋಲಾರ | 21 |
| 21 | ಕೊಪ್ಪಳ | 23 |
| 22 | ಮಂಡ್ಯ | 37 |
| 23 | ಮೈಸೂರು | 38 |
| 24 | ರಾಯಚೂರು | 30 |
| 25 | ರಾಮನಗರ | 18 |
| 26 | ಶಿವಮೊಗ್ಗ | 39 |
| 27 | ತುಮಕೂರು | 55 |

| | | |
|---|---|---|
| 28 | ಉಡುಪಿ | 14 |
| 29 | ಉತ್ತರ ಕನ್ನಡ | 20 |
| 30 | ಯಾದಗಿರಿ | 21 |
| ಒಟ್ಟು | | **957** |

ಆಇ 05 ಇಎಲ್‌ಕ್ಯೂ 2022

## ಕರ್ನಾಟಕ ವಿಧಾನ ಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 85
2) ಮಾನ್ಯ ಸದಸ್ಯರ ಹೆಸರು : ಶ್ರೀ ಶಿವಾನಂದ ಎಸ್. ಪಾಟೀಲ್ (ಬಸವನ ಬಾಗೇವಾಡಿ)
3) ಉತ್ತರಿಸುವ ದಿನಾಂಕ : 15.02.2022
4) ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಮನಗೂಳಿ ಪೊಲೀಸ್ ಠಾಣೆ ಮತ್ತು ಅದರ ಪೊಲೀಸ್ ಸಿಬ್ಬಂದಿಗಳಿಗೆ ವಸತಿ ಗೃಹಗಳನ್ನು ನಿರ್ಮಿಸುವ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿದೆಯೇ? | ಮನಗೂಳಿ ಪೊಲೀಸ್ ಠಾಣೆಗೆ ಹೊಸ ಕಟ್ಟಡ ನಿರ್ಮಾಣದ ಬಗ್ಗೆ ಅನುದಾನ ಲಭ್ಯತೆಗೆ ಅನುಸಾರವಾಗಿ ಕ್ರಮವಹಿಸಲಾಗುವುದು.<br><br>ಮನಗೂಳಿ ಪೊಲೀಸ್ ನೌಕರರಿಗೆ ಸಂಬಂಧಿಸಿದಂತೆ 01-ಪಿಎಸ್ಐ ವಸತಿ ಗೃಹ ಮತ್ತು 24 ಸಿಬ್ಬಂದಿ ವಸತಿಗೃಹಗಳು ಲಭ್ಯವಿರುತ್ತದೆ. ಪೊಲೀಸ್ ಸಿಬ್ಬಂದಿಗಳ ಮಂಜೂರಾತಿ ಬಲದ 61% ರಷ್ಟು ವಸತಿಗೃಹಗಳು ಲಭ್ಯವಿರುವುದರಿಂದ ಹೊಸದಾಗಿ ವಸತಿಗೃಹಗಳ ನಿರ್ಮಾಣದ ಬಗ್ಗೆ ಅನುದಾನದ ಲಭ್ಯತೆಗೆ ಅನುಸಾರವಾಗಿ ಪರಿಶೀಲಿಸಲಾಗುವುದು. |
| ಆ. | ಮನಗೂಳಿ ಪೊಲೀಸ್ ಠಾಣೆ ಕಟ್ಟಡವು ಆಡಳಿತಕ್ಕೆ ಕಿಕ್ಕಿರಿದಾಗಿರುವುದು ಮತ್ತು ಠಾಣೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಪೊಲೀಸ್ ಸಿಬ್ಬಂದಿಗಳಿಗೆ ಈಗಿರುವ ವಸತಿಗೃಹಗಳು ಕಡಿಮೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | |
| ಇ. | ಹಾಗಿದ್ದಲ್ಲಿ, ಮನಗೂಳಿ ಪೊಲೀಸ್ ಠಾಣೆಗೆ ಹೊಸ ಕಟ್ಟಡ ಮತ್ತು ಅದರ ಪೊಲೀಸ್ ನೌಕರರಿಗೆ ವಸತಿ ಗೃಹಗಳನ್ನು ನಿರ್ಮಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | |
| ಈ. | ಯಾವ ನಿರ್ದಿಷ್ಟ ಕಾಲಮಿತಿಯಲ್ಲಿ ಪೊಲೀಸ್ ಠಾಣೆಗೆ ಹೊಸ ಕಟ್ಟಡ ಮತ್ತು ಅದರ ಪೊಲೀಸ್ ನೌಕರರಿಗೆ ವಸತಿ ಗೃಹಗಳನ್ನು ನಿರ್ಮಿಸಲಾಗುವುದು? | |

**ಸಂಖ್ಯೆ: ಹೆಚ್‌ಡಿ 10 ಪಿಬಿಎಲ್ 2022**

**(ಆರಗ ಜ್ಞಾನೇಂದ್ರ)**
ಗೃಹ ಸಚಿವರು

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 86 |
| ಸದಸ್ಯರ ಹೆಸರು | : ಶ್ರೀ ಶಿವಾನಂದ ಎಸ್.ಪಾಟೀಲ್ (ಬಸವನಬಾಗೇವಾಡಿ) |
| ಉತ್ತರಿಸುವ ದಿನಾಂಕ | : 15.02.2022 |
| ಉತ್ತರಿಸುವ ಸಚಿವರು | : ಜಲಸಂಪನ್ಮೂಲ ಸಚಿವರು |

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಕೃಷ್ಣಾ ಮೇಲ್ದಂಡೆ ಯೋಜನೆಯಡಿ ಬಾಧಿತ ಪ್ರದೇಶವೆಂದು ಗುರುತಿಸಿರುವ ವಂದಾಲ ಗ್ರಾಮಕ್ಕೆ ಪುನರ್ವಸತಿ ಕಲ್ಪಿಸಲು ಯೋಜಿಸಲಾಗಿದೆಯೇ; | ಹೌದು |
| ಆ) | ಹಾಗಿದ್ದಲ್ಲಿ, ಈ ಗ್ರಾಮಕ್ಕೆ ಪುನರ್ವಸತಿ ಕಲ್ಪಿಸಲು ಇದುವರೆಗೂ ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-3ರ ಯೋಜನೆಯಡಿ ಮುಳುಗಡೆಯಾಗುವ ವಂದಾಲ ಗ್ರಾಮಕ್ಕೆ ಪುನರ್‌ವಸತಿ ಕಲ್ಪಿಸಲು ವಂದಾಲ ಗ್ರಾಮದ 63ಎ-22 ಗುಂ. ಉಣ್ಣೀಬಾವಿ ಗ್ರಾಮದ 50ಎ-30 ಗುಂ. ಹಾಗೂ ಹುಣಶ್ಯಾಳ ಪಿ.ಸಿ. ಗ್ರಾಮದ 430ಎ-20ಗುಂ. ಸೇರಿ ಒಟ್ಟಾರೆ 544ಎ-32ಗುಂ. ಕ್ಷೇತ್ರವನ್ನು ಗುರುತಿಸಲಾಗಿದ್ದು, ಭೂಸ್ವಾಧೀನಪಡಿಸಿಕೊಳ್ಳುವ ಕುರಿತು ಭೂಸ್ವಾಧೀನ ಕಾಯ್ದೆ ಕಲಂ 11(1) ರಡಿ ಪ್ರಾಥಮಿಕ ಅಧಿಸೂಚನೆಯನ್ನು ಹೊರಡಿಸಲಾಗಿದೆ. ಸದರಿ ಅಧಿಸೂಚನೆಯು ದಿನಾಂಕ:02.02.2022 ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದೆ.<br><br>ಸದರಿ ಅಧಿಸೂಚನೆ ಪ್ರಕಾರ ಭೂಮಾಲೀಕರುಗಳಿಗೆ ಕಲಂ 11(1) ರನ್ವಯ ನೋಟಿಸು ಜಾರಿ ಮಾಡಲಾಗಿದೆ. |
| ಇ) | ಕೃಷ್ಣಾ ಮೇಲ್ದಂಡೆ ಯೋಜನೆಯಡಿ ಈ ಗ್ರಾಮಕ್ಕೆ ಯಾವ ಪ್ರದೇಶದಲ್ಲಿ ಪುನರ್ವಸತಿ ಕಲ್ಪಿಸಲಾಗುವುದು; | |
| ಈ) | ಈ ಯೋಜನೆಯಡಿ ವಂದಾಲ ಗ್ರಾಮವನ್ನು ಯಾವ ವರ್ಷದಿಂದ ಪುನರ್ ನಿರ್ಮಿಸಲಾಗುವುದು: | ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-3ರ ಯೋಜನೆಯಡಿ ಮುಳುಗಡೆಯಾಗುವ 20 ಗ್ರಾಮಗಳ ಪೈಕಿ 12 ಗ್ರಾಮಗಳನ್ನು ತಾಂತ್ರಿಕ ಪರಿಹಾರದಡಿಯಲ್ಲಿ ಪರಿಗಣಿಸಬೇಕೇ ಅಥವಾ ಮುಳುಗಡೆ ಗ್ರಾಮಗಳೆಂದು ಪರಿಗಣಿಸಿ ಪುನರ್ವಸತಿ ಕಲ್ಪಿಸುವ ಕುರಿತಾಗಿ ದಿನಾಂಕ:28.09.2021 ರಂದು ಸನ್ಮಾನ್ಯ ಮುಖ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಪ್ರಗತಿ ಪರಿಶೀಲನಾ ಸಭೆಯಲ್ಲಿ ಚರ್ಚಿಸಿ ತಾಂತ್ರಿಕ ಪರಿಹಾರವನ್ನು ಕೈಬಿಟ್ಟು ಮುಳುಗಡೆ ಹೊಂದಲಿರುವ ಜಮೀನು ಹಾಗೂ ಪುನರ್ವಸತಿಗಾಗಿ ಅವಶ್ಯವಿರುವ ಜಮೀನನ್ನು ಭೂಸ್ವಾಧೀನಕ್ಕೆ ಒಳಪಡಿಸಲು ಹಾಗು ಪುನರ್ವಸತಿಗಳಲ್ಲಿ ಮೂಲಭೂತ ಸೌಕರ್ಯ ಕಲ್ಪಿಸಲು ಕ್ರಮ ಜರುಗಿಸುವಂತೆ ನಡುವಳಿಯಾಗಿರುತ್ತದೆ.<br><br>ಅಲ್ಲದೇ, ವಂದಾಲ ಗ್ರಾಮದ ಪುನರ್‌ವಸತಿಗಾಗಿ ವಂದಾಲ, ಉಣ್ಣೀಬಾವಿ ಹಾಗೂ ಹುಣಶ್ಯಾಳ ಪಿ.ಸಿ. ಗ್ರಾಮಗಳಲ್ಲಿನ ಜಮೀನುಗಳನ್ನು ಗುರುತಿಸಿ, ಈ ಹಿಂದೆ ಭೂಸ್ವಾಧೀನಪಡಿಸಿಕೊಳ್ಳುವ ಕುರಿತು ದಿನಾಂಕ:30.12.2014ರ ಪ್ರಕಾರ ಪ್ರಾಥಮಿಕ ಅಧಿಸೂಚನೆ ಹೊರಡಿಸಲಾಗಿತ್ತು. ಆದರೆ, ಸದರಿ ಗ್ರಾಮಗಳ ಭೂಮಾಲೀಕರು ಏಕರೂಪ ಬೆಲೆ ನಿಗದಿಪಡಿಸುವ ಕುರಿತು ಒತ್ತಾಯಿಸಿ ಜೆ.ಎಂ.ಸಿ. ಮಾಡಲು ಅಡ್ಡಿಪಡಿಸಿರುತ್ತಾರೆ. |
| ಉ) | ಕೃಷ್ಣಾ ಮೇಲ್ದಂಡೆ ಯೋಜನೆಯಡಿ ಬಾಧಿತ ಪ್ರದೇಶವಾಗಿರುವ ವಂದಾಲ ಗ್ರಾಮಕ್ಕೆ ಪುನರ್ವಸತಿ ಮತ್ತು ಪುನರ್ ನಿರ್ಮಾಣ ಕಾರ್ಯ ಕೈಗೊಳ್ಳುವಲ್ಲಿ ವಿಳಂಬವಾಗುತ್ತಿರುವುದಕ್ಕೆ ಕಾರಣಗಳೇನು? | |

| | | | |
|---|---|---|---|
| | | | ಈ ಕಾರಣಗಳಿಂದಾಗಿ ಭೂಸ್ವಾಧೀನಪಡಿಸಿಕೊಳ್ಳುವ ಪ್ರಾಥಮಿಕ ಅಧಿಸೂಚನೆ ಪ್ರಕರಣವು ಅಸಿಂಧುಗೊಂಡು ವಂದಾಲ ಗ್ರಾಮಕ್ಕೆ ಪುನರ್‌ವಸತಿ ಮತ್ತು ಪುನರ್‌ನಿರ್ಮಾಣ ಕಾರ್ಯ ವಿಳಂಬವಾಗಿರುತ್ತದೆ.<br><br>ಆದಾಗ್ಯೂ, ಈಗಾಗಲೇ, ವಂದಾಲ ಗ್ರಾಮಕ್ಕೆ ಗುರುತಿಸಲಾದ ಒಟ್ಟಾರೆ 544ಎ-32ಗುಂ. ಕ್ಷೇತ್ರವನ್ನು ಭೂಸ್ವಾಧೀನಪಡಿಸಿಕೊಳ್ಳುವ ಕುರಿತು ಭೂಸ್ವಾಧೀನ ಕಾಯ್ದೆ ಕಲಂ 11(1) ರಡಿ ಪ್ರಾಥಮಿಕ ಅಧಿಸೂಚನೆಯನ್ನು ದಿನಾಂಕ:02.02.2022 ರಂದು ಹೊರಡಿಸಲಾಗಿದ್ದು, ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದೆ. ಭೂಸ್ವಾಧೀನ ಪ್ರಕ್ರಿಯೆ ಪೂರ್ಣಗೊಂಡ ನಂತರ ಪುನರವಸತಿ ನಿರ್ಮಿಸಲು ಕ್ರಮ ಜರುಗಿಸಲಾಗುವುದು. |

ಸಂಖ್ಯೆ:ಜಸಂಇ 12 ಡಬ್ಲ್ಯುಬಿಎಂ 2022

**(ಗೋವಿಂದ ಎಂ.ಕಾರಜೋಳ)**

ಜಲ ಸಂಪನ್ಮೂಲ ಸಚಿವರು

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 87

2. ಸದಸ್ಯರ ಹೆಸರು : ಶಿವಾನಂದ ಎಸ್.ಪಾಟೀಲ್

3. ಉತ್ತರಿಸುವ ದಿನಾಂಕ : 15.02.2022

4. ಉತ್ತರಿಸುವ ಸಚಿವರು : ಜಲ ಸಂಪನ್ಮೂಲ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರಗಳು |
|---|---|---|
| ಅ) | ರಾಜ್ಯದಿಂದ ನದಿಗಳ ಜೋಡಣೆ ಮಾಡುವ ಕುರಿತು ರಾಜ್ಯ ಸರ್ಕಾರದಿಂದ ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆಯೇ; | ರಾಷ್ಟ್ರೀಯ ಜಲ ಅಭಿವೃದ್ಧಿ ಸಂಸ್ಥೆಯಿಂದ (NWDA) ರಾಜ್ಯದಲ್ಲಿನ ಬೇಡ್ತಿ-ವರದಾ ಮತ್ತು ಹೇಮಾವತಿ-ನೇತ್ರಾವತಿ ತಿರುವು ಯೋಜನೆಗಳ ವರದಿಗಳನ್ನು ಸಿದ್ಧಪಡಿಸಲು ಕ್ರಮವಹಿಸಿರುತ್ತದೆ:<br><br>(i) **ಬೇಡ್ತಿ-ವರದ ತಿರುವು ಯೋಜನೆ:**<br><br>ಬೇಡ್ತಿ ನದಿಯಿಂದ 242 Mcum (8.55 TMC) ನೀರನ್ನು ವರದಾ ನದಿಗೆ ತಿರುವುಗೊಳಿಸಲು ಪ್ರಾಥಮಿಕ ವರದಿಯನ್ನು NWDA ವತಿಯಿಂದ ತಯಾರಿಸಲಾಗಿತ್ತು. ಸದರಿ ಯೋಜನೆಯ ಬಗ್ಗೆ ರಾಷ್ಟ್ರೀಯ ಜಲ ಅಭಿವೃದ್ಧಿ ಸಂಸ್ಥೆಯು ಇತ್ತೀಚಿಗೆ ಪರ್ಯಾಯಗಳೊಂದಿಗೆ ಪ್ರಸ್ತಾಪಿಸಿದಂತೆ ತಿರುವುಗೊಳಿಸಲಾಗುವ ನೀರಿನ ಪ್ರಮಾಣವನ್ನು ಹೀರೇವಡ್ಡಟ್ಟಿ ಬಳಿ ನೀರನ್ನು ಶೇಖರಣೆ ಮಾಡಲು ಈ ಹಿಂದೆ ಪ್ರಸ್ತಾಪಿಸಿದ್ದ ಬೇಡ್ತಿ-ವರದಾ ನದಿ ಜೋಡಣೆಯ ವಿಸ್ತೃತ ಯೋಜನೆಯನ್ನು National Perspective Plan ಅಡಿಯಲ್ಲಿ ವಿವರವಾದ ಯೋಜನಾ ವರದಿ ಸಿದ್ಧಪಡಿಸಲು ರಾಜ್ಯ ಸರ್ಕಾರವು ಸಹಮತಿಯನ್ನು NWDA ಗೆ ದಿನಾಂಕ:21.01.2021ರ ಪತ್ರದಲ್ಲಿ ತಿಳಿಸಿದೆ.<br><br>ಸದರಿ ಯೋಜನೆಯ ವಿವರವಾದ ಯೋಜನಾ ವರದಿಯನ್ನು NWDA ಇಂದ ನಿರೀಕ್ಷಿಸಲಾಗಿದೆ.<br><br>(ii) **ನೇತ್ರಾವತಿ-ಹೇಮಾವತಿ ತಿರುವು ಯೋಜನೆ:**<br><br>ರಾಷ್ಟ್ರೀಯ ಜಲ ಅಭಿವೃದ್ಧಿ ಸಂಸ್ಥೆಯು ನೇತ್ರಾವತಿ-ಹೇಮಾವತಿ ಜೋಡಣೆಯ ಬಗ್ಗೆ ಪ್ರಾಥಮಿಕ ವರದಿಯನ್ನು ತಯಾರಿಸಿದ್ದ ವರದಿಯಲ್ಲಿ 188 Mcum (6.64 TMC) ತಿರುವುಗೊಳಿಸಲು ಪ್ರಸ್ತಾಪಿಸಲಾಗಿತ್ತು.<br><br>NWDA ಪ್ರಸ್ತಾಪಿಸಿದ್ದ ನೇತ್ರಾವತಿ-ಹೇಮಾವತಿ ಜೋಡಣೆ ಯೋಜನೆಯ ಜಲಾಯನ ಪ್ರದೇಶವು ರಾಜ್ಯವು ಈಗಾಗಲೇ ಅನುಷ್ಠಾನಗೊಳಿಸುತ್ತಿರುವ ಎತ್ತಿನಹೊಳೆ ಯೋಜನೆಯ ಜಲಾನಯನ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಹಿನ್ನೆಲೆಯಲ್ಲಿ, ನೇತ್ರಾವತಿ-ಹೇಮಾವತಿ ಜೋಡಣೆ ಯೋಜನೆಯ ಅಧ್ಯಯನವನ್ನು ಮುಂದುವರೆಸಬಾರದೆಂದು NWDA ಸಂಸ್ಥೆಯನ್ನು ಕೋರಲಾಗಿದೆ. |
| ಆ) | ರಾಜ್ಯ ಸರ್ಕಾರದಿಂದ ರಾಜ್ಯದ ಯಾವ ಯಾವ ನದಿಗಳನ್ನು ಜೋಡಿಸುವ ಬಗ್ಗೆ ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದೆ; | |
| ಇ) | ರಾಜ್ಯ ಸರ್ಕಾರದಿಂದ ಪ್ರಸ್ತಾಪಿಸಲಾಗಿರುವ ನದಿಗಳ ಜೋಡಣೆಯಲ್ಲಿ ಯಾವ ನದಿಗಳ ಜೋಡಣೆ ಕಾರ್ಯ ಸಾಧು ಎಂದು ಕೇಂದ್ರ ಸರ್ಕಾರದ ಗುರುತಿಸಿರುತ್ತದೆ; | |
| ಈ) | ರಾಜ್ಯದಲ್ಲಿ ನದಿಗಳ ಜೋಡಣೆಯಿಂದ ರಾಜ್ಯಕ್ಕೆ ನದಿಗಳವಾರು ಸಿಗುವ ನೀರಿನ ಪ್ರಮಾಣ ಎಷ್ಟು; | |
| ಉ) | ರಾಜ್ಯದಲ್ಲಿ ನದಿಗಳ ಜೋಡಣೆಯಿಂದ ರಾಜ್ಯಕ್ಕೆ ಆಗುವ ಲಾಭ ಮತ್ತು ಹಾನಿಗಳೇನು? | |

| | | |
|---|---|---|
| | | ಎತ್ತಿನಹೊಳೆ ಯೋಜನೆಯನ್ನು ನೇತ್ರಾವತಿ-ಹೇಮಾವತಿ ನದಿ ಜೋಡಣೆಯ ವಿಸ್ತೃತ ಯೋಜನೆಯನ್ನಾಗಿ National Perspective Plan ಅಡಿಯಲ್ಲಿ ಪರಿಗಣಿಸಿ ಆರ್ಥಿಕ ನೆರವನ್ನು ಒದಗಿಸಲು ಕೇಂದ್ರ ಸರ್ಕಾರವನ್ನು ಕೋರಲಾಗಿದೆ.<br><br>ಬೇಡ್ತಿ-ಅಘನಾಶಿನಿ-ವರದಾ ನದಿ ಜೋಡಣೆ ಯೋಜನೆಯು ರಾಜ್ಯದಲ್ಲಿನ (Intra-State) ನದಿ ಜೋಡಣೆಯಾಗಿದ್ದು, ರಾಷ್ಟ್ರೀಯ ಜಲ ಅಭಿವೃದ್ಧಿ ಸಂಸ್ಥೆಯ ಪರಿಶೀಲನೆಯಲ್ಲಿದೆ.<br><br>ರಾಜ್ಯದಲ್ಲಿನ ನದಿ ಜೋಡಣೆ ಯೋಜನೆಗಳ ವಿವರವಾದ ಯೋಜನಾ ವರದಿಗಳು ಸಿದ್ಧವಾದ ನಂತರ ಸದರಿ ಯೋಜನೆಗಳ ಎಲ್ಲಾ ಸಾಧಕ-ಭಾದಕಗಳ ಕುರಿತು ಕೂಲಂಕಷವಾಗಿ ಅಧ್ಯಯನ ಕೈಗೊಂಡು, ಸಕ್ಷಮ ಪ್ರಾಧಿಕಾರಗಳ ತೀರುವಳಿ/ಅನುಮೋದನೆಗಳೊಂದಿಗೆ ಹಾಗೂ ಅಗತ್ಯವಿರುವ ಆರ್ಥಿಕ ನೆರವು/ನಿಧಿಯೊಂದಿಗೆ ಅನುಷ್ಠಾನಗೊಳಿಸಲು ಸಾಧ್ಯವಾಗುತ್ತದೆ. |

**ಸಂಖ್ಯೆ: ಜಸಂಇ 05 ಕೃವಿಇ 2022**

**(ಗೋವಿಂದ ಎಂ.ಕಾರಜೋಳ)**
**ಜಲ ಸಂಪನ್ಮೂಲ ಸಚಿವರು**

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 88
2. ಸದಸ್ಯರ ಹೆಸರು : ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ)
3. ಉತ್ತರಿಸುವ ದಿನಾಂಕ : 15.02.2022
4. ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕರ್ನಾಟಕ ಲೋಕಸೇವಾ ಆಯೋಗದವರು ದಿನಾಂಕ: 06.02.2020ರಂದು 107 ಪತ್ರಾಂಕಿತ ಹುದ್ದೆಗಳಿಗೆ ನೇಮಕಾತಿಗಾಗಿ ಅಧಿಸೂಚನೆ ಹೊರಡಿಸಿದ್ದು ನಿಜವೇ: | ಕರ್ನಾಟಕ ಲೋಕಸೇವಾ ಆಯೋಗವು ನೀಡಿದ ಮಾಹಿತಿಯಂತೆ,<br>ಕರ್ನಾಟಕ ಲೋಕಸೇವಾ ಆಯೋಗವು 2017-18ನೇ ಸಾಲಿನ ಪತ್ರಾಂಕಿತ (ಗೆಜೆಟೆಡ್ ಪ್ರೊಬೇಷನರ್ಸ್) 106 ಹುದ್ದೆಗಳ ಪೂರ್ವಭಾವಿ ಪರೀಕ್ಷೆಗೆ ದಿನಾಂಕ: 31.01.2020ರಂದು ಹಾಗೂ ಮುಖ್ಯ ಪರೀಕ್ಷೆಗೆ ದಿನಾಂಕ: 23.11.2020ರಂದು ಅಧಿಸೂಚನೆಗಳನ್ನು ಹೊರಡಿಸಲಾಗಿರುತ್ತದೆ. |
| ಆ | ಹಾಗಿದ್ದಲ್ಲಿ, ಪೂರ್ವಭಾವಿ ಪರೀಕ್ಷೆ ಹಾಗೂ ಮುಖ್ಯ ಪರೀಕ್ಷೆಯನ್ನು ನಡೆಸಲಾಗಿದೆಯೇ: | ಹೌದು. |
| ಇ | ನಡೆಸಿದ್ದಲ್ಲಿ, ಯಾವಾಗ ಸದರಿ ಪರೀಕ್ಷೆಗಳನ್ನು ನಡೆಸಲಾಗಿದೆ; ಮೌಲ್ಯಮಾಪನ ಕೈಗೊಳ್ಳಲಾಗಿದೆಯೇ; ಪ್ರಸ್ತುತ ಯಾವ ಹಂತದಲ್ಲಿದೆ; | ಪೂರ್ವಭಾವಿ ಪರೀಕ್ಷೆಯನ್ನು ದಿನಾಂಕ: 24.08.2020ರಂದು ಹಾಗೂ ಮುಖ್ಯ ಪರೀಕ್ಷೆಯನ್ನು ದಿನಾಂಕ: 13.02.2021 ರಿಂದ 16.02.2021ರವರೆಗೆ ನಡೆಸಲಾಗಿರುತ್ತದೆ. ಮೌಲ್ಯಮಾಪನ ಪ್ರಾರಂಭಿಸುವ ಹಂತದಲ್ಲಿದೆ. |
| ಈ | ಸದರಿ ಮುಖ್ಯ ಪರೀಕ್ಷೆಯ ಫಲಿತಾಂಶವನ್ನು ಇದುವರೆಗೂ ಪ್ರಕಟಿಸದಿರಲು ಕಾರಣಗಳೇನು; ಯಾವಾಗ ಫಲಿತಾಂಶವನ್ನು | ಕರ್ನಾಟಕ ರಾಜ್ಯ ಲೆಕ್ಕ ಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯ ಸಹಾಯಕ ನಿಯಂತ್ರಕರ ಹುದ್ದೆಗಳು ಹಾಗೂ ಕರ್ನಾಟಕ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯಲ್ಲಿನ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ (ಗ್ರೂಪ್ 'ಎ') ವೃಂದದ 24 ಹುದ್ದೆಗಳ ಮುಖ್ಯ ಪರೀಕ್ಷೆಗಳನ್ನು, 2017-18ನೇ |

| | | |
|---|---|---|
| | ಪ್ರಕಟಿಲಾಗುವುದು? (ವಿವರ ನೀಡುವುದು) | ಸಾಲಿನ ಗೆಜೆಟೆಡ್ ಪ್ರೊಬೇಷನರ್ ನೇಮಕಾತಿಯ ಹುದ್ದೆಗಳಿಗೆ ಮುನ್ನವೇ ನಡೆಸಿದ್ದರಿಂದ, ಸದರಿ ಪರೀಕ್ಷೆಗಳ ಗಣಕೀಕೃತ ಮೌಲ್ಯಮಾಪನವನ್ನು ಮೊದಲು ಕೈಗೆತ್ತಿಕೊಂಡು ಜನವರಿ-2022ರ ಅಂತ್ಯಕ್ಕೆ ಪೂರ್ಣಗೊಳಿಸಲಾಗಿದೆ.<br><br>ಆದ್ದರಿಂದ, 2017-18ನೇ ಸಾಲಿನ ಗೆಜೆಟೆಡ್ ಪ್ರೊಬೇಷನರ್ ನೇಮಕಾತಿಯ ಮೌಲ್ಯಮಾಪನವನ್ನು ಶೀಘ್ರದಲ್ಲಿಯೇ ಪ್ರಾರಂಭಿಸಲಾಗುವುದು. |

ಸಿಆಸುಇ 15 ಎಸ್‌ಎಸ್‌ಸಿ 2022

**(ಬಸವರಾಜ ಬೊಮ್ಮಾಯಿ)**
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 89
ಸದಸ್ಯರ ಹೆಸರು : ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್(ಇಂಡಿ)
ಉತ್ತರಿಸಬೇಕಾದ ದಿನಾಂಕ : 15/02/2022.
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹೋಟಾ ಸಮಿತಿಯು ಯಾವಾಗ ವರದಿಯನ್ನು ನೀಡಿದೆ; ಈ ವರದಿಯಲ್ಲಿರುವ ಶಿಫಾರಸ್ಸುಗಳೇನು | ಹೋಟಾ ಸಮಿತಿಯು ವರದಿಯನ್ನು ದಿನಾಂಕ:20.08.2013ರಂದು ನೀಡಿದೆ. ಈ ವರದಿಯಲ್ಲಿರುವ ಶಿಫಾರಸ್ಸುಗಳನ್ನು **ಅನುಬಂಧ-1**ರಲ್ಲಿ ನೀಡಲಾಗಿದೆ. |
| ಆ) | ಸದರಿ ಸಮಿತಿಯ ವರದಿಯನ್ನು ಕರ್ನಾಟಕ ಲೋಕಸೇವಾ ಆಯೋಗವು ಒಪ್ಪಿಕೊಂಡಿದೆಯೇ ಅಥವಾ ಇಲ್ಲವೇ: | ಹೋಟಾ ಸಮಿತಿಯು ನೀಡಿರುವ ಶಿಫಾರಸ್ಸುಗಳಲ್ಲಿ, ಹಲವು ಶಿಫಾರಸ್ಸುಗಳನ್ನು ಸರ್ಕಾರವು ಒಪ್ಪಿಕೊಂಡು, ನಿಯಮಗಳಿಗೆ ಸೂಕ್ತ ತಿದ್ದುಪಡಿಯನ್ನು ಮಾಡಿರುತ್ತದೆ. |
| ಇ) | ಈ ಸಮಿತಿಯ ವರದಿಯ ಪ್ರಕಾರ ಒಂದು ವರ್ಷದ ಒಳಗೆ ಸಂಪೂರ್ಣ ನೇಮಕಾತಿ ಪ್ರಕ್ರಿಯೆ ಮುಗಿಯಬೇಕಾಗಿದ್ದರೂ ಕರ್ನಾಟಕ ಲೋಕಸೇವಾ ಆಯೋಗದವರು 3-4ವರ್ಷ ತೆಗೆದುಕೊಂಡರು ಸಹ ಸಮರ್ಪಕವಾಗಿ ಪ್ರಕ್ರಿಯೆ ಕೈಗೊಳ್ಳದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಅಂಗವಿಕಲ ಮೀಸಲಾತಿಯನ್ನು ಹೆಚ್ಚಿಸಲಾಗಿದ್ದು ಹಾಗೂ ಹೊಸದಾಗಿ ತೃತೀಯ ಲಿಂಗದ ಅಭ್ಯರ್ಥಿಗಳಿಗೂ ಕೂಡ ಮೀಸಲಾತಿಯನ್ನು ಕಲ್ಪಿಸಿರುವುದರಿಂದ, ಅದರಂತೆ, ಪರಿಶೀಲಿಸಿ ಖಾಲಿಯಿರುವ ಹುದ್ದೆಗಳನ್ನು ನೇಮಕಾತಿ ಮಾಡಿಕೊಳ್ಳಲು ಕ್ರಮಕೈಗೊಳ್ಳಲಾಗುತ್ತಿದೆ. |
| ಈ) | ಬಂದಿದ್ದಲ್ಲಿ,ಸರ್ಕಾರ ಕೈಗೊಂಡಿರುವ ಕ್ರಮಗಳೇನು; | |
| ಉ) | ಕರ್ನಾಟಕ ಲೋಕಸೇವಾ ಆಯೋಗದ ಅಧಿಕಾರಿಗಳ ಮೇಲೆ ಸರ್ಕಾರದ ನಿಯಂತ್ರಣವಿದೆಯೇ ಅಥವಾ ಇಲ್ಲವೇ;(ವಿವರ ನೀಡುವುದು) | ಕರ್ನಾಟಕ ಲೋಕಸೇವಾ ಆಯೋಗವು ಒಂದು ಸಾಂವಿಧಾನಿಕ ಸಂಸ್ಥೆಯಾಗಿದ್ದು, ಇಲ್ಲಿ ಕಾರ್ಯನಿರ್ವಹಿಸುತ್ತಿರುವ ಕಾರ್ಯದರ್ಶಿ ಮತ್ತು ಪರೀಕ್ಷಾ ನಿಯಂತ್ರಕರನ್ನು ಹೊರತುಪಡಿಸಿ ಇನ್ನಿತರ ಅಧಿಕಾರಿ/ಸಿಬ್ಬಂದಿಗಳು ಆಯೋಗದ ಅಧೀನದಲ್ಲಿಯೇ ಕಾರ್ಯನಿರ್ವಹಿಸುತ್ತಿದ್ದು, ಕರ್ನಾಟಕ ಲೋಕಸೇವಾ ಆಯೋಗವೇ ಸಕ್ಷಮ ಪ್ರಾಧಿಕಾರವಾಗಿರುತ್ತದೆ. |

| | | |
|---|---|---|
| ಊ) | ಹೋಟಾ ಸಮಿತಿಯ ವರದಿಯ ಶಿಫಾರಸ್ಸಿನಂತೆ ಪ್ರತಿವರ್ಷ ನೇಮಕಾತಿ ಪ್ರಕ್ರಿಯೆ ನಡೆಸದಿರಲು ಕಾರಣಗಳೇನು; ತಪ್ಪಿತಸ್ಥ ಅಧಿಕಾರಿಗಳ ವಿರುದ್ಧ ಸರ್ಕಾರ ಕ್ರಮ ಕೈಗೊಳ್ಳುವುದೇ? (ವಿವರ ನೀಡುವುದು) | ಗೆಜೆಟೆಡ್ ಪ್ರೊಬೇಷನರ್ಸ್ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕಾತಿ) ನಿಯಮಗಳು, 1997ರನ್ವಯ ಹಾಗೂ ಹಾಲಿ ಜಾರಿಯಲ್ಲಿರುವ ಮೀಸಲಾತಿ ನಿಯಮಗಳನ್ವಯ ಪರಿಶೀಲಿಸಿ, ಆರ್ಥಿಕ ಇಲಾಖೆಯ ಅಭಿಪ್ರಾಯ ಪಡೆದು ರಿಕ್ತ ಸ್ಥಾನಗಳ ವಿವರಗಳನ್ನು ಒದಗಿಸಲು ಆಡಳಿತ ಇಲಾಖೆಗಳ ಹಂತದಲ್ಲಿ ಕ್ರಮ ಕೈಗೊಳ್ಳಲು ಕಾಲಾವಕಾಶ ತೆಗೆದುಕೊಳ್ಳುತ್ತಿದ್ದು, ಗೆಜೆಟೆಡ್ ಪ್ರೊಬೇಷನರ್ಸ್ ಹುದ್ದೆಗಳ ರಿಕ್ತ ಸ್ಥಾನಗಳ ವಿವರಗಳನ್ನು ಆಡಳಿತ ಇಲಾಖೆಗಳಿಂದ ಪಡೆದ ನಂತರ ಕರ್ನಾಟಕ ಲೋಕಸೇವಾ ಆಯೋಗಕ್ಕೆ ಬಿಡುಗಡೆ ಮಾಡಲಾಗುತ್ತದೆ. |
| ಋ) | ಕೆಲವೊಂದು ಪ್ರಕರಣಗಳಲ್ಲಿ ಕಾನೂನು ಇಲಾಖೆಯ ಮೇಲೆ ಒತ್ತಾಯ/ಪ್ರಭಾವ ಬೀರಿ ಅಧಿಕಾರಿಗೆ ಅನುಕೂಲವಾಗುವ ರೀತಿಯಲ್ಲಿ ಅಭಿಪ್ರಾಯ ಪಡೆದಿರುವ ಪ್ರಕರಣಗಳೇಷ್ಟು? (ಸಂಪೂರ್ಣ ಮಾಹಿತಿ ನೀಡುವುದು) | ಇಂತಹ ಯಾವುದೇ ಪ್ರಕರಣಗಳು ಕಂಡು ಬಂದಿರುವುದಿಲ್ಲ. |

**ಸಂಖ್ಯೆ.ಸಿಆಸುಇ 39 ಎಸ್‌ಎಲ್‌ಎ 2022** **(ಬಸವರಾಜ ಬೊಮ್ಮಾಯಿ)**

**ಮುಖ್ಯಮಂತ್ರಿ**

ಅನುಬಂಧ - 1

# ಕರ್ನಾಟಕ ರಾಜ್ಯ ಸೇವೆಗಳಲ್ಲಿನ ಹುದ್ದೆಗಳಿಗೆ ಮತ್ತು ಸೇವೆಗಳಿಗೆ ಆಯ್ಕೆ ಮಾಡುವಲ್ಲಿ ಮುಕ್ತ, ನಿಷ್ಪಕ್ಷಪಾತವಾದ ಮತ್ತು ಅರ್ಹತೆ ಆಧಾರಿತ ಆಯ್ಕೆಗಳನ್ನು ಮಾಡಲು ಕರ್ನಾಟಕ ಲೋಕ ಸೇವಾ ಆಯೋಗದಲ್ಲಿ ಜಾರಿಯಲ್ಲಿರುವ ವ್ಯವಸ್ಥೆ ಮತ್ತು ಪ್ರಕ್ರಿಯೆಗಳನ್ನು ಪರಿಷ್ಕರಿಸುವ ಉದ್ದೇಶದಿಂದ ಕರ್ನಾಟಕ ಸರ್ಕಾರವು ರಚಿಸಿದ್ದ ಸಮಿತಿಯು ನೀಡಿರುವ ವರದಿ

## (ಜುಲೈ - ಆಗಸ್ಟ್ 2013)

ಗೆಜೆಟೆಡ್ ಪ್ರೊಬೆಷನರುಗಳ ವಿವಿಧ ಗ್ರೂಪ್-ಎ ಮತ್ತು ಗ್ರೂಪ್-ಬಿ ಹುದ್ದೆಗಳ ನೇರ ನೇಮಕಾತಿಗಳಲ್ಲಿ ಅವ್ಯವಹಾರಗಳು ನಡೆದಿದೆ ಎನ್ನಲಾದ ಮತ್ತು ಅದರಲ್ಲಿಯೂ ಮುಖ್ಯವಾಗಿ ವ್ಯಕ್ತಿತ್ವ ಪರೀಕ್ಷೆಯಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರಗಳಿಗೆ ಸಂಬಂಧಿಸಿದಂತೆ ರಾಜ್ಯ ಉಚ್ಛ ನ್ಯಾಯಾಲಯದ ಮುಂದೆ ರಿಟ್ ಅರ್ಜಿಗಳು ದಾಖಲಾದ ಮತ್ತು ಮಾಧ್ಯಮಗಳಲ್ಲಿ ವರದಿಯಾದ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರವು ಶ್ರೀ ಪಿ.ಸಿ. ಹೋಟಾ, ಐಎಎಸ್., (ನಿವೃತ್ತ) ಮತ್ತು ಅಧ್ಯಕ್ಷರು (ನಿವೃತ್ತ), ಕೇಂದ್ರ ಲೋಕಸೇವಾ ಆಯೋಗ (ಚಿಕ್ಕದಾಗಿ ಕೇ.ಲೋ.ಸೇ.ಆ.) ಇವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಿತು.ಶ್ರೀ ಕೌಶಿಕ್ ಮುಖರ್ಜಿ, ಐಎಎಸ್, ಅಪರ ಮುಖ್ಯ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಮತ್ತು ಶ್ರೀ ಸಂಜೀವ್ ಕುಮಾರ್, ಐಎಎಸ್, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ, ಇವರುಗಳನ್ನು ಸಮಿತಿಯ ಸದಸ್ಯರುಗಳನ್ನಾಗಿ ನೇಮಕ ಮಾಡಲಾಗಿತ್ತು.

(2) ಶ್ರೀ ಪಿ.ಸಿ. ಹೋಟಾ ಇವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನುರಚಿಸಿ ಹೊರಡಿಸಿದ ದಿನಾಂಕ 26.7.2013ರ ಅಧಿಸೂಚನೆಯ ಪ್ರತಿಯನ್ನು ಅನುಬಂಧಿಸಲಾಗಿದೆ. (ಅನುಬಂಧ-1).

(3) ಸಮಿತಿಯು ಐದು ಕೆಲಸದ ದಿನಗಳಂದು ಬೆಂಗಳೂರಿನಲ್ಲಿ (3ರಿಂದ 8ನೇ ಆಗಸ್ಟ್ 2013ರವರೆಗೆ) ಈ ಕೆಳಕಂಡವರುಗಳ ಜೊತೆಯಲ್ಲಿ ಚರ್ಚಿಸಲು ಸಭೆ ಸೇರಿತು :

(i) ಕರ್ನಾಟಕ ಲೋಕಸೇವಾ ಆಯೋಗದ ಹಂಗಾಮಿ ಅಧ್ಯಕ್ಷರು ಮತ್ತು ಸದಸ್ಯರು (ಚಿಕ್ಕದಾಗಿ ಕ.ಲೋ.ಸೇ.ಆ.)

(ii) ಕರ್ನಾಟಕ ಸರ್ಕಾರದ ಹಿಂದಿನ ಮುಖ್ಯ ಕಾರ್ಯದರ್ಶಿ

(iii) ಕರ್ನಾಟಕ ಲೋಕಸೇವಾ ಆಯೋಗದ ಮಾಜಿ ಅಧ್ಯಕ್ಷರುಗಳು ಮತ್ತು ಮಾಜಿ ಕಾರ್ಯದರ್ಶಿಗಳು

(iv) ವಿವಿಧ ಸೇವಾ ಸಂಘಗಳ ಪದಾಧಿಕಾರಿಗಳು

(v) ಕ.ಲೋ.ಸೇ.ಆ.ವು ಕಾಲಕಾಲಕ್ಕೆ ನಡೆಸುವ ಪರೀಕ್ಷೆಗಳಲ್ಲಿ ಕೇಂದ್ರ ಅಧೀಕ್ಷಕರಾಗಿ ಕಾರ್ಯ ನಿರ್ವಹಿಸಿದ ಕಾಲೇಜು ಪ್ರಾಂಶುಪಾಲರುಗಳು

(vi) ಗೆಜೆಟೆಡ್ ಪ್ರೊಬೆಷನರುಗಳ ನೇಮಕಾತಿಯಲ್ಲಿನ ಮುಖ್ಯ ಲಿಖಿತ ಪರೀಕ್ಷೆಯಲ್ಲಿ ಉತ್ತರ ಪತ್ರಿಕೆಗಳ ಪರೀಕ್ಷಕರು ಮತ್ತು ಪರಿಶೋಧಕರು

(vii) ಗೆಜೆಟೆಡ್ ಪ್ರೊಬೆಷನರುಗಳ ನೇಮಕಾತಿಯಲ್ಲಿನ ಮುಖ್ಯ ಲಿಖಿತ ಪರೀಕ್ಷೆಯಲ್ಲಿ ಉತ್ತರ ಪತ್ರಿಕೆಗಳ ಪರೀಕ್ಷಕರು ಮತ್ತು ಪರಿಶೋಧಕರು

(viii) ಕ.ಲೋ.ಸೇ.ಆ.ದ ಕಾರ್ಯದರ್ಶಿಯೂ ಒಳಗೊಂಡಂತೆ ಕೆಲವು ಇತರ ಅಧಿಕಾರಿಗಳು (ಸಮಿತಿಯ ಮುಂದೆ ಹಾಜರಾದ ಗಣ್ಯವ್ಯಕ್ತಿಗಳು ಮತ್ತು ಇತರ ಆಸಕ್ತ ವ್ಯಕ್ತಿಗಳ ಪಟ್ಟಿಯನ್ನು ಲಗತ್ತಿಸಲಾಗಿದೆ (ಅನುಬಂಧ–2).

(4) ಸಮಿತಿಯು ದಿನಾಂಕ 18–19ನೇ ಆಗಸ್ಟ್ 2013ರಂದು ಬೆಂಗಳೂರಿನಲ್ಲಿ ಮತ್ತೆ ಸಭೆ ಸೇರಿತು ಮತ್ತು ವರದಿಯನ್ನು ಅಂತಿಮಗೊಳಿಸಲು ಮುಂದುವರೆದಂತೆ ಚರ್ಚೆಗಳನ್ನು ನಡೆಸಿತು ಮತ್ತು ನಿಗದಿಪಡಿಸಿದ 45 ದಿನಗಳ ಅವಧಿಯೊಳಗೆ ದಿನಾಂಕ 20.8.2013ರಂದೇ ಶಿಫಾರಸ್ಸುಗಳನ್ನು ಸಲ್ಲಿಸಿತು.

(5) ದಿನಾಂಕ 3 ರಿಂದ 8ನೇ ಆಗಸ್ಟ್ 2013ರ ಅವಧಿಯಲ್ಲಿ ವಿವಿಧ ಗಣ್ಯವ್ಯಕ್ತಿಗಳು ಮತ್ತು ಆಸಕ್ತ ವ್ಯಕ್ತಿಗಳೊಂದಿಗೆ ನಡೆಸಿದ ಸಭೆಗಳಲ್ಲಿ ಸಮಿತಿಯು ಪ್ರಸ್ತುತ ವಿವಿಧ ಸ್ಪರ್ಧಾತ್ಮಕ ಪರೀಕ್ಷೆಗಳು ಮತ್ತು ವ್ಯಕ್ತಿತ್ವ ಪರೀಕ್ಷೆಗಳು ಅದರಲ್ಲೂ ಮುಖ್ಯವಾಗಿ ಗೆಜೆಟೆಡ್ ಪ್ರೊಬೆಷನರುಗಳ ನೇಮಕಾತಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಪದ್ಧತಿ ಮತ್ತು ಕಾರ್ಯವಿಧಾನದ ಬಗ್ಗೆ ಚರ್ಚಿಸಿತು. ಈ ನೇಮಕಾತಿ ಪ್ರಕ್ರಿಯೆಯನ್ನು ಮೂರು ಹಂತಗಳಲ್ಲಿ ಮಾಡಲಾಗುತ್ತಿರುವುದನ್ನು ಸಮಿತಿಯು ಗಮನಿಸಿತು, ಅಂದರೆ, ಬಹು ಆಯ್ಕೆ ಉತ್ತರಗಳನ್ನು ಒಳಗೊಂಡ ವಸ್ತುನಿಷ್ಠ ಮಾದರಿಯಲ್ಲಿ ಪೂರ್ವಭಾವಿ ಪರೀಕ್ಷೆಯನ್ನು ನಡೆಸಿ ಬಹು ಸಂಖ್ಯೆಯಲ್ಲಿ ಭಾಗವಹಿಸುವ ಅಭ್ಯರ್ಥಿಗಳ ಸಂಖ್ಯೆಯನ್ನು ಕಡಿಮೆ ಮಾಡಲು; ಪೂರ್ವಭಾವಿ ಪರೀಕ್ಷೆಯಲ್ಲಿ ಅರ್ಹರಾದ ಅಭ್ಯರ್ಥಿಗಳಿಗೆ ಮುಖ್ಯ ಲಿಖಿತ ಪರೀಕ್ಷೆ, ಮುಖ್ಯ ಪರೀಕ್ಷೆಯು ಸಾಂಪ್ರದಾಯಿಕ ಪ್ರಬಂಧ ಮಾದರಿಯಲ್ಲಿದ್ದು ಕಡ್ಡಾಯ ಪತ್ರಿಕೆಗಳು ಮತ್ತು ಐಚ್ಛಿಕ ಪತ್ರಿಕೆಗಳನ್ನು ಒಳಗೊಂಡಿದ್ದು (ಸಾಮಾನ್ಯ ವಿಷಯ – ಎರಡು ಪತ್ರಿಕೆಗಳು – 600 ಅಂಕಗಳು; ಮೊದಲ ಐಚ್ಛಿಕ ವಿಷಯ – ಎರಡು ಪತ್ರಿಕೆಗಳು – 600 ಅಂಕಗಳು; ಎರಡನೇ ಐಚ್ಛಿಕ ವಿಷಯ – ಎರಡು ಪತ್ರಿಕೆಗಳು – 600 ಅಂಕಗಳು); ಮುಂದುವರಿದಂತೆ 200 ಅಂಕಗಳನ್ನು ಒಳಗೊಂಡ ವ್ಯಕ್ತಿತ್ವ ಪರೀಕ್ಷೆ.

(6) ಕ.ಲೋ.ಸೇ.ಆ.ವು ಮುಕ್ತವಾದ ಮತ್ತು ನಿಷ್ಪಕ್ಷಪಾತವಾದ ಮತ್ತು ಅರ್ಹತೆಯ ಆಧಾರದ ಮೇಲೆ ಆಯ್ಕೆಗಳನ್ನು ಮಾಡುವ ಸಂಬಂಧವಾಗಿ ಪದ್ಧತಿಗಳನ್ನು ಮತ್ತು

ಕಾರ್ಯವಿಧಾನಗಳನ್ನು ಬಲಪಡಿಸುವ ಬಗ್ಗೆ ಸಮಿತಿಯು ಶಿಫಾರಸ್ಸುಗಳನ್ನು ಮಾಡುವ ಮೊದಲು, ನ್ಯಾಯೋಚಿತ ಆಳ್ವಿಕೆಯಲ್ಲಿರುವ ಪ್ರಜಾಸತ್ತಾತ್ಮಕ ದೇಶದಲ್ಲಿ ನಿಷ್ಪಕ್ಷಪಾತವಾದ ಲೋಕಸೇವಾ ಆಯೋಗದ ಪ್ರಾಮುಖ್ಯತೆಯ ಬಗ್ಗೆ ಸಂಕ್ಷಿಪ್ತವಾಗಿ ವರದಿ ಮಾಡಲು ಇಚ್ಛಿಸುತ್ತದೆ. ಲೋಕಸೇವಾ ಆಯೋಗಗಳು ದೇಶದ ಸುಸ್ಥಿತ ಆಡಳಿತಕ್ಕೆ ಹಂತಹಂತವಾಗಿ ಹೇಗೆ ಬೆಳೆದು ಬಂದಿವೆ ಎಂಬುದನ್ನು ಸಂಕ್ಷಿಪ್ತವಾಗಿ ವಿವರಿಸಲು ಸಹ ಸಮಿತಿಯು ಇಚ್ಛಿಸುತ್ತದೆ.

(7) ಈ ಸಂಬಂಧವಾಗಿ, ಲೀ ಕಮಿಷನ್ ಎಂದು ಜನಪ್ರಿಯವಾಗಿರುವ ದಿ ರಾಯಲ್ ಕಮಿಷನ್ ಆನ್ ಸುಪೀರಿಯರ್ ಸರ್ವಿಸಸ್ ಇನ್ ಇಂಡಿಯಾ (1924) — ಈ ಕೆಳಕಂಡಂತೆ ಅವಲೋಕನೆ ಮಾಡಿರುತ್ತದೆ :-

> "Wherever democratic institutions exist, experience has shown that to secure an efficient civil service, it is essential to protect it as far as possible from political or personal influences and give it that position of stability and security which is vital to its successful working as the impartial and efficient instrument by which the Governments, of whatever political complexion, may give effect to their policies. In countries, where this principle has been neglected, and where the 'Spoils System' has taken its place, an inefficient and disorganized Civil Service has been the inevitable result and corruption has been rampant"

(8) ಸಂವಿಧಾನವನ್ನು ರಚಿಸುವ ಬಗ್ಗೆ ಡಾ: ಬಿ.ಆರ್. ಅಂಬೇಡ್ಕರ್ ಇವರ ಅಧ್ಯಕ್ಷತೆಯಲ್ಲಿ ರಚಿಸಲಾದ ಕರಡು ಸಮಿತಿಯು ಮುಕ್ತವಾದ ಮತ್ತು ಅರ್ಹತೆ ಆಧಾರದ ಮೇಲೆ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ಆಯ್ಕೆ ಮಾಡಲು ಲೋಕಸೇವಾ ಆಯೋಗಗಳ ಪ್ರಾಮುಖ್ಯತೆಯನ್ನು ಮನಗಂಡು, ಅದರಂತೆ ಕೇಂದ್ರಾಡಳಿತ ಪ್ರದೇಶಗಳನ್ನೂ ಸೇರಿಸಿ ಕೇಂದ್ರ ಸರ್ಕಾರದ ಸಿವಿಲ್ ಸೇವಾ ಹುದ್ದೆಗಳಿಗಾಗಿ, ಕೇಂದ್ರ ಲೋಕಸೇವಾ ಆಯೋಗವನ್ನು ರಚಿಸಲು ಮತ್ತು ವಿವಿಧ ರಾಜ್ಯಗಳ ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳನ್ನು ಭರ್ತಿ ಮಾಡಲು ರಾಜ್ಯ ಲೋಕಸೇವಾ ಆಯೋಗಗಳನ್ನು ರಚಿಸಲು ಆಸ್ಪದಗಳನ್ನು ಕಲ್ಪಿಸಿದರು. (ಪ್ರಸ್ತುತ, 28 ರಾಜ್ಯ ಲೋಕಸೇವಾ ಆಯೋಗಗಳು – ಭಾರತದ ಪ್ರತಿಯೊಂದು ರಾಜ್ಯಕ್ಕೆ ಒಂದು ಮತ್ತು ಭಾರತ ಸರ್ಕಾರದ ಮತ್ತು ಕೇಂದ್ರಾಡಳಿತ ಪ್ರದೇಶಗಳಿಗೆ ಸಂಬಂಧಿಸಿದಂತೆ ಕೇ.ಲೋ.ಸೇ.ಆ.)

(9) ಸಂವಿಧಾನದ ಭಾಗ 14 ರ ಅಧ್ಯಾಯ 2ರಲ್ಲಿನ ಅನುಚ್ಛೇದ 315ರಿಂದ 323ರಲ್ಲಿ ಕೇಂದ್ರ ಲೋಕಸೇವಾ ಆಯೋಗ ಮತ್ತು ರಾಜ್ಯ ಲೋಕಸೇವಾ ಆಯೋಗಗಳನ್ನು ರಚಿಸುವ ಬಗ್ಗೆ ಆಸ್ಪದಗಳನ್ನು ಕಲ್ಪಿಸಲಾಗಿದೆ.

(10) ನಮ್ಮ ದೇಶದಲ್ಲಿ, ಕೇಂದ್ರ ಲೋಕಸೇವಾ ಆಯೋಗ ಅಥವಾ ರಾಜ್ಯ ಲೋಕಸೇವಾ ಆಯೋಗಗಳ ಅಧ್ಯಕ್ಷರು ಮತ್ತು ಸದಸ್ಯರ ಅಧಿಕಾರಾವಧಿ ಹಾಗೂ ಅವರ ಸೇವಾ ಷರತ್ತುಗಳಿಗೆ ಸಂಬಂಧಿಸಿದಂತೆ ಸಮಾನಾಂತರ ಸಂವಿಧಾನಾತ್ಮಕ ರಕ್ಷಣೆಗಳನ್ನು ಹೊಂದಿರುತ್ತದೆ. ಇವುಗಳು ಸಂವಿಧಾನದ ಅನುಚ್ಛೇದ 320ರಲ್ಲಿ ಒಳಗೊಂಡಿರುವ ಸಮಾನಾಂತರ ಪ್ರಕಾರ್ಯಗಳನ್ನು ಕೂಡ ಹೊಂದಿರುತ್ತವೆ.

(11) ಸ್ಥೂಲವಾಗಿ ಹೇಳುವುದಾದರೆ, ಕೇಂದ್ರ ಲೋಕಸೇವಾ ಆಯೋಗ ಮತ್ತು ರಾಜ್ಯ ಲೋಕಸೇವಾ ಆಯೋಗಗಳ ವ್ಯತ್ಯಾಸಾಂಶಗಳು ಈ ಕೆಳಗಿನಂತಿರುತ್ತವೆ :-

(i) ಕೇಂದ್ರ ಲೋಕಸೇವಾ ಆಯೋಗದ ಅಧ್ಯಕ್ಷರು ಮತ್ತು ಸದಸ್ಯರುಗಳ ಅಧಿಕಾರಾವಧಿ ಆರು ವರ್ಷಗಳು ಅಥವಾ ಅವರುಗಳು 65 ವರ್ಷ ವಯೋಮಿತಿಯನ್ನು ಹೊಂದುವವರೆಗೆ, ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಇರಬಹುದಾಗಿದ್ದು, ರಾಜ್ಯ ಲೋಕಸೇವಾ ಆಯೋಗದ ಅಧ್ಯಕ್ಷರು ಮತ್ತು ಸದಸ್ಯರ ಅಧಿಕಾರಾವಧಿ ಆರು ವರ್ಷಗಳೇ ಇದ್ದು 62 ವರ್ಷ ವಯೋಮಿತಿಯನ್ನು ತಲುಪಿದ ನಂತರ ಸ್ಥಾನಗಳನ್ನು ತ್ಯಜಿಸಬೇಕಾಗುತ್ತದೆ. (ಕೇಂದ್ರ ಲೋಕಸೇವಾ ಆಯೋಗದ ಅಧ್ಯಕ್ಷರು ಮತ್ತು ಸದಸ್ಯರಂತಲ್ಲ).

(ii) ರಾಜ್ಯ ಲೋಕ ಸೇವಾ ಆಯೋಗದ ಅಧ್ಯಕ್ಷರು ಮತ್ತು ಸದಸ್ಯರುಗಳನ್ನು ಸಂಬಂಧಿಸಿದ ರಾಜ್ಯದ ರಾಜ್ಯಪಾಲರು ರಾಜ್ಯದ ಸಚಿವ ಸಂಪುಟವು ಮಾಡುವ ಶಿಫಾರಸ್ಸಿನನ್ವಯ ನೇಮಕಾತಿ ಮಾಡಬಹುದಾಗಿದ್ದು, ದುರ್ನಡತೆಯ ಕಾರಣಗಳ ಮೇಲೆ ಭಾರತದ ರಾಷ್ಟ್ರಪತಿಯವರು ಆ ಸ್ಥಾನಗಳಿಂದ ತೆಗೆದುಹಾಕಬಹುದಾಗಿದ್ದು , ಅವರುಗಳನ್ನು ನೇಮಕಾತಿ ಮಾಡಿದ ಸಂಬಂಧಿಸಿದ ರಾಜ್ಯದ ರಾಜ್ಯಪಾಲರು ತೆಗೆದುಹಾಕುವಂತಿಲ್ಲ. ಸಂವಿಧಾನದ ರಚನಕಾರರು ರಾಜ್ಯ ಲೋಕ ಸೇವಾ ಆಯೋಗಗಳ ಅಧ್ಯಕ್ಷರು ಹಾಗೂ ಸದಸ್ಯರುಗಳು ನಿಷ್ಪಕ್ಷಪಾತವಾಗಿ ಕರ್ತವ್ಯ ನಿರ್ವಹಿಸಲು ಹೇಗೆ ಅನುವಾಗುವಂತೆ ಮೇಲ್ಕಂಡ ಆಸ್ಪದವನ್ನು ಕಲ್ಪಿಸಿದ್ದಾರೆ ಎಂಬುದನ್ನು ಇದು ಸೂಚಿಸುತ್ತದೆ.

12) ಕೇಂದ್ರ ಲೋಕಸೇವಾ ಆಯೋಗದ ಅಥವಾ ಯಾವುದೇ ರಾಜ್ಯ ಲೋಕಸೇವಾ ಆಯೋಗದ ಅಧ್ಯಕ್ಷರನ್ನು ಮತ್ತು ಸದಸ್ಯರನ್ನು ನೇಮಕಾತಿ ಮಾಡಲು ಸಂವಿಧಾನದಲ್ಲಿ ಯಾವುದೇ ಅರ್ಹತೆಯನ್ನು ನಿಗದಿಪಡಿಸಿರುವುದಿಲ್ಲ. ಆದಾಗ್ಯೂ ಅವರುಗಳು ನಿರ್ವಹಿಸುವ ಕರ್ತವ್ಯಗಳನ್ನಾಧರಿಸಿ, ಅವರುಗಳು ಶೈಕ್ಷಣಿಕ/ ವೃತ್ತಿಪರ ಕ್ಷೇತ್ರಗಳಲ್ಲಿ ಹಿರಿಮೆ ಹೊಂದಿರುವ ಮತ್ತು ಸಾರ್ವಜನಿಕ ವಲಯದಲ್ಲಿ ಯಾವುದೇ ಆಪಾದನೆಗಳೊಳಗಾಗದ ದಾಖಲೆಯುಳ್ಳ ಮುಕ್ತ ಮತ್ತು ನಿಷ್ಪಕ್ಷಪಾತವಾದ ಹಿನ್ನೆಲೆಹೊಂದಿರುವ ವ್ಯಕ್ತಿಗಳಾಗಿರಬೇಕೆಂದು ಪರಿಭಾವಿಸಬೇಕಾಗುತ್ತದೆ. ಆದುದರಿಂದ ಭಾರತದ ರಾಷ್ಟ್ರಪತಿ ಮತ್ತು ರಾಜ್ಯಗಳ ರಾಜ್ಯಪಾಲರುಗಳು ಲೋಕಸೇವಾ ಆಯೋಗಗಳಿಗೆ ನೇಮಕಮಾಡುವಾಗ ಅಸಾಧಾರಣ ಪ್ರತಿಭೆ ಮತ್ತು ಸಾಮರ್ಥ್ಯವುಳ್ಳ ವ್ಯಕ್ತಿಗಳನ್ನು ನೇಮಕ ಮಾಡುವ ಬಗ್ಗೆ ಅತಿ ಎಚ್ಚರಿಕೆ ವಹಿಸಬೇಕಾಗುತ್ತದೆ. ಈ ನಿಲುವನ್ನು ಸರ್ವೋಚ್ಛ

ನ್ಯಾಯಾಲಯವು ಅಜಯ ಹಾಸಿಯಾ ವಿರುದ್ಧ ಖಾಲೀದ್ ಮುಜೀಬ್ (ಎಐಆರ್ 1981 ಎಸ್‌ಸಿ 487) ಪ್ರಕರಣದಲ್ಲಿ ಅಂಗೀಕರಿಸಿದ್ದು, ಲೋಕಸೇವಾ ಆಯೋಗಗಳ ಸದಸ್ಯರು ಮತ್ತು ಅಧ್ಯಕ್ಷರು " men of high integrity, calibre and qualification" ಆಗಿರಬೇಕೆಂದು ನ್ಯಾಯಾಲಯವು ತಿಳಿಸಿರುತ್ತದೆ.

(13) ಭಾರತ ಸರ್ಕಾರದ ಸಿವಿಲೆ ಸೇವೆಗಳಲ್ಲಿನ ಹುದ್ದೆಗಳಿಗೆ ನೇಮಕಾತಿ ಮಾಡಲು ಸರ್. ರಾಸ್ ಬಾರ್ಕರ್, ಅಧ್ಯಕ್ಷರು ಮತ್ತು ಇತರ 4 ವ್ಯಕ್ತಿಗಳನ್ನು ಸದಸ್ಯರುಗಳನ್ನೊಳಗೊಂಡ ಭಾರತದ ಮೊದಲನೇ ಲೋಕಸೇವಾ ಆಯೋಗವನ್ನು ದಿನಾಂಕ.1-10-1926ರಂದು ಸ್ಥಾಪಿಸಲಾಯಿತು.

(14) ಭಾರತ ಸರ್ಕಾರದ ಅಧಿನಿಯಮ 1935ರಡಿಯಲ್ಲಿ ಭಾರತದ ಲೋಕಸೇವಾ ಆಯೋಗವನ್ನು ಸಂಯುಕ್ತ ಲೋಕಸೇವಾ ಆಯೋಗವೆಂದು ಹೆಸರಿಸಲಾಯಿತು. ಭಾರತ ಸರ್ಕಾರದ ಅಧಿನಿಯಮ 1935ರಲ್ಲಿ ವಿಶಾಲವಾದ ಪ್ರಾಂತ್ಯಗಳಿಗೆ ಲೋಕಸೇವಾ ಆಯೋಗಗಳನ್ನು ಮತ್ತು ಎಲ್ಲಿ ಆಯ್ಕೆ ಮತ್ತು ನೇಮಕಾತಿಗಳಿಗೆ ಸಂಬಂಧಿಸಿದಂತೆ ಪೂರ್ಣ ಪ್ರಮಾಣದ ಆಯೋಗವನ್ನು ರಚಿಸಲು ಸಮರ್ಥನೆಯಿಲ್ಲದ ಕಾರ್ಯಬಾಹುಳ್ಯವುಳ್ಳ ಎರಡು ಅಥವಾ ಹೆಚ್ಚಿನ ಪ್ರಾಂತ್ಯಗಳಿಗೆ ಸಂಯುಕ್ತ ಆಯೋಗಗಳನ್ನು ರಚಿಸಲು ಅವಕಾಶ ಮಾಡಿತ್ತು.

(15) ಭಾರತದ ಲೋಕಸೇವಾ ಆಯೋಗ (1926)ದ ಅಧ್ಯಕ್ಷರು ಮತ್ತು ಸದಸ್ಯರುಗಳ ವೇತನ ಮತ್ತು ಸ್ಥಾನಮಾನವನ್ನು ಭಾರತದ ಉಚ್ಚ ನ್ಯಾಯಾಲಯಗಳ ಮುಖ್ಯ ನ್ಯಾಯಾಧೀಶರು ಮತ್ತು ಇತರ ನ್ಯಾಯಾಧೀಶರುಗಳಿಗೆ ವಾರಂಟ್ ಆಫ್ ಪ್ರಿಸಿಡೆನ್ಸ್‌ನಲ್ಲಿ ಸಮಾನಾಂತರವಾಗಿತ್ತು. 1937ರವರೆಗೆ ಭಾರತದಲ್ಲಿ ಸಂಯುಕ್ತ ನ್ಯಾಯಾಲಯವಾಗಲೀ ಅಥವಾ 26-1-1950ರವರೆಗೆ ಸರ್ವೋಚ್ಛ ನ್ಯಾಯಾಲಯವಾಗಲೀ ಇಲ್ಲದೇ ಇದ್ದುದರಿಂದ ಭಾರತದ ಲೋಕಸೇವಾ ಆಯೋಗದ (1926) ಅಧ್ಯಕ್ಷರ ಮತ್ತು ಸದಸ್ಯರುಗಳ ವೇತನ ಮತ್ತು ಸ್ಥಾನಮಾನವನ್ನು ಬ್ರಿಟಿಷ್ ಭಾರತದ ಅತ್ಯುನ್ನತ ನ್ಯಾಯಾಲಯದ ಮುಖ್ಯನ್ಯಾಯಾಧೀಶ ಮತ್ತು ಇತರ ನ್ಯಾಯಾಧೀಶರಿಗೆ ಸಮಾನಾಂತರಗೊಳಿಸಲಾಗಿತ್ತು.

(16) ಭಾರತ ಸರ್ಕಾರದ ಅಧಿನಿಯಮ 1935ರಡಿಯಲ್ಲಿ ಸ್ಥಾಪಿತವಾದ ಸಂಯುಕ್ತ ಲೋಕ ಸೇವಾ ಆಯೋಗದ ಅಧ್ಯಕ್ಷರು ಹಾಗೂ ಸದಸ್ಯರನ್ನು ಭಾರತದ ಸಂಯುಕ್ತ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರು ಹಾಗೂ ನ್ಯಾಯಾಧೀಶರಿಗೆ ಸರಿಸಮಾನವೆಂದು ಪರಿಗಣಿಸಲಾಗಿತ್ತು.

(17) 26ನೇ ಜನವರಿ 1950ರಲ್ಲಿ ಸಂವಿಧಾನವು ಜಾರಿಗೆ ಬಂದ ನಂತರ ಕೇಂದ್ರ ಲೋಕಸೇವಾ ಆಯೋಗ ಹಾಗೂ ರಾಜ್ಯ ಲೋಕಸೇವಾ ಆಯೋಗಗಳ ಅಧ್ಯಕ್ಷರ ಹಾಗೂ ಸದಸ್ಯರ ಸೇವಾ ಷರತ್ತುಗಳಲ್ಲಿ ಸ್ಥಿರವಾದ ಸವೆತವಾಗುತ್ತಿದೆ. ಇತ್ತೀಚೆಗಷ್ಟೇ ಅಂದರೆ 2007-08ನೇ ವರ್ಷದಲ್ಲಿ ಕೇಂದ್ರ ಲೋಕಸೇವಾ ಆಯೋಗದ ಅಧ್ಯಕ್ಷರು ಹಾಗೂ ಸದಸ್ಯರು ಸರ್ವೋಚ್ಛ

ನ್ಯಾಯಾಲಯದ ನ್ಯಾಯಾಧೀಶರ, ಮುಖ್ಯ ಚುನಾವಣಾ ಆಯುಕ್ತರು ಹಾಗೂ ಚುನಾವಣಾ ಆಯುಕ್ತರು ಪಡೆಯುವ ವೇತನ ಮತ್ತು ಭತ್ಯೆಗಳನ್ನು ಪಡೆಯಲು ಅರ್ಹರಾಗಿಸಲಾಯಿತು. ಆದರೂ ಇದುವರೆಗೆ ಭಾರತ ಸರ್ಕಾರದ ವಾರಂಟ್ ಆಫ್ ಪ್ರಿಸಿಡೆನ್ಸ್‌ನಲ್ಲಿ ಇವರ ಪರಿಷ್ಕೃತ ಸ್ಥಾನಮಾನವನ್ನು ಅಂತಿಮಗೊಳಿಸಲಾಗಿರುವುದಿಲ್ಲ.

(18) ಕೇಂದ್ರ ಲೋಕಸೇವಾ ಆಯೋಗದ ಹಾಗೂ ರಾಜ್ಯ ಲೋಕಸೇವಾ ಆಯೋಗಗಳ ಅಧ್ಯಕ್ಷರ ಹಾಗೂ ಸದಸ್ಯರ ಸೇವಾ ಷರತ್ತುಗಳ ಕಾಲಿಕ ಪರಿಷ್ಕರಣೆಗೆ ಸಾಂಸ್ಥಿಕ ವ್ಯವಸ್ಥೆ ಅಸ್ತಿತ್ವದಲ್ಲಿರುವುದಿಲ್ಲ.

(19) ಸಮಿತಿಯು ಕರ್ನಾಟಕ ಲೋಕಸೇವಾ ಆಯೋಗದ ಅಧ್ಯಕ್ಷರ ಹಾಗೂ ಸದಸ್ಯರ ಕಚೇರಿಗಳ ಸೇವಾ ಷರತ್ತುಗಳ ಬಗ್ಗೆಯೂ ವರದಿಯಲ್ಲಿರುವಂತೆ ಪರಿಶೀಲಿಸಿದ್ದು, ಈ ಬಗ್ಗೆ ಶಿಫಾರಸ್ಸುಗಳಿವೆ.

(20) ರಾಜ್ಯ ಸಿವಿಲ್ ಸೇವೆಯಲ್ಲಿರುವ ವಿವಿಧ ಹುದ್ದೆಗಳ ನೇಮಕಾತಿಗೆ ಸಂಬಂಧಿಸಿದಂತೆ ಕರ್ನಾಟಕ ಲೋಕಸೇವಾ ಆಯೋಗವು ಅನುಸರಿಸುತ್ತಿರುವ ವ್ಯವಸ್ಥೆ ಮತ್ತು ಕಾರ್ಯವಿಧಾನಗಳನ್ನು ಸುಧಾರಿಸುವುದಕ್ಕಾಗಿ ಈ ಸಮಿತಿಯು ಈ ವರದಿಯಲ್ಲಿ ಶಿಫಾರಸ್ಸುಗಳನ್ನು ಮಾಡಿದೆ. ಕರ್ನಾಟಕ ಲೋಕಸೇವಾ ಆಯೋಗವು ಅನುಸರಿಸುತ್ತಿರುವ ವ್ಯವಸ್ಥೆ ಮತ್ತು ಕಾರ್ಯವಿಧಾನಗಳ ಬಗ್ಗೆ ಅಧ್ಯಯನ ಮಾಡಲು ಸಮಿತಿಗೆ ಲಭ್ಯವಿದ್ದ ಕಾಲಾವಕಾಶವು ಸೀಮಿತವಾಗಿದ್ದರೂ ಸಮಿತಿಯು ಕರ್ನಾಟಕ ಲೋಕಸೇವಾ ಆಯೋಗಕ್ಕೆ ಸಂಬಂಧಿಸಿದ ಡೇಟಾ ಹಾಗೂ ಮಾಹಿತಿಯೊಡನೆ ಸಮಿತಿಗೆ ಭೇಟಿ ಮಾಡಿದ ಗಣ್ಯರು ಹಾಗೂ ಸ್ಟೇಕ್ ಹೋಲ್ಡರ್ಸ್ ನೀಡಿದ ಸಾಕ್ಷ್ಯಗಳನ್ನು ಕೂಡ ಎಚ್ಚರಿಕೆಯಿಂದ ಗಮನಿಸಿದೆ / ಅವಗಾಹಿಸಿದೆ.

(21) ಕರ್ನಾಟಕ ಸರ್ಕಾರದಡಿ ಬರುವ ಗುಂಪು-ಸಿ ಹುದ್ದೆಗಳ ಆಯ್ಕೆಗೆ ಸಂಬಂಧಿಸಿದಂತೆ ಬಹು ಆಯ್ಕೆ ಉತ್ತರಗಳನ್ನು ಒಳಗೊಂಡ ವಸ್ತುನಿಷ್ಠ ಮಾದರಿಯ ಪರೀಕ್ಷೆಯ ಆಧಾರದ ಮೇಲೆ ಮಾತ್ರ ಯಶಸ್ವಿ ಅಭ್ಯರ್ಥಿಗಳ ಅರ್ಹತಾ ಪಟ್ಟಿಯನ್ನು ಅವರ ಸಾಧನೆಗೆ ತಕ್ಕಂತೆ ತಯಾರಿಸುವುದರಿಂದ ಈ ವ್ಯವಸ್ಥೆಗೆ ಪ್ರಮುಖ ಪರಿಷ್ಕರಣೆಯ ಅವಶ್ಯಕತೆಯಿಲ್ಲವೆಂಬುದು ಸಮಿತಿಯ ಅಭಿಪ್ರಾಯವಾಗಿದೆ. ಅಭ್ಯರ್ಥಿಗಳು ಆಪ್ಟಿಕಲ್ ಮಾರ್ಕ್ ರೀಡರ್ (ಓಎಂಆರ್) ಉತ್ತರ ಪತ್ರಿಕೆಗಳಲ್ಲಿ ಬಾಲ್ ಪಾಯಿಂಟ್ ಪೆನ್ನಿನಿಂದ ಷೇಡ್ ಮಾಡಿದ ಉತ್ತರಗಳನ್ನು ಓಎಂಆರ್ ಮೂಲಕ ಪ್ರವಹಿಸಿ ಸರಿಯಾದ ಉತ್ತರಗಳ ಹಾಗೂ ಅಭ್ಯರ್ಥಿಯ ಅಂಕಗಳನ್ನು ತಿಳಿಯಲಾಗುತ್ತದೆ. ಪ್ರತಿ ಅಭ್ಯರ್ಥಿಯು ಪಡೆಯುವ ಒಟ್ಟು ಅಂಕಗಳನ್ನು ನಿರ್ಧರಿಸುವ ಈ ವಸ್ತುನಿಷ್ಠ ಮಾದರಿಯ ಪರೀಕ್ಷೆಯಲ್ಲಿ ಕನಿಷ್ಠ ಸಾಧ್ಯ ಮಾನವ ಹಸ್ತಕ್ಷೇಪ ಇರುತ್ತದೆ. ಸ್ಪರ್ಧಾತ್ಮಕವಾಗಿ ಸಮರ್ಥ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಅಭ್ಯರ್ಥಿಗಳ ತಪ್ಪು ಉತ್ತರಗಳಿಗೆ ಕರ್ನಾಟಕ ಲೋಕಸೇವಾ ಆಯೋಗವು ಋಣಾತ್ಮಕ ಅಂಕಗಳನ್ನು ನೀಡುತ್ತದೆ. ಇತ್ತೀಚಿನ ವರ್ಷಗಳಲ್ಲಿ ಗುಂಪು-ಸಿ ಹುದ್ದೆಗಳ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಅನೇಕ ಸಂಖ್ಯೆಗಳಲ್ಲಿ

ಅಭ್ಯರ್ಥಿಗಳು ಹಾಜರಾಗುವುದನ್ನು ಸಮಿತಿಯು ಗಮನಿಸಿದೆ. ಕರ್ನಾಟಕ ಸರ್ಕಾರದಡಿ ಬರುವ ಗುಂಪು-ಸಿ ಹುದ್ದೆಗಳ ನೇಮಕಾತಿಯ ವಸ್ತುನಿಷ್ಠ ಮಾದರಿಯ ಪರೀಕ್ಷೆಯಲ್ಲಿ 2012-13ನೇ ಸಾಲಿನಲ್ಲಿ ಸುಮಾರು ಹತ್ತು ಲಕ್ಷ ಅಭ್ಯರ್ಥಿಗಳು ಹಾಜರಾಗಿದ್ದರು. ಇಷ್ಟೊಂದು ಸಂಖ್ಯೆಯಲ್ಲಿ ಅಭ್ಯರ್ಥಿಗಳು ಹಾಜರಾಗುವ ಈ ವಸ್ತುನಿಷ್ಠ ಮಾದರಿಯ ಪರೀಕ್ಷೆ ನಡೆಸಲು ಕರ್ನಾಟಕ ಲೋಕಸೇವಾ ಆಯೋಗಕ್ಕೆ ಹೆಚ್ಚುವರಿ ಸಹಾಯ (ಬೆಂಬಲ) ಬೇಕೇ ಎಂಬ ಬಗ್ಗೆ ಪರಿಶೀಲಿಸುವುದು ಅವಶ್ಯವಾಗಬಹುದು.

(22) ಪ್ರಸ್ತುತ ಕೆಲವು ಗುಂಪು-ಸಿ ಹುದ್ದೆಗಳು ಅಂದರೆ ಸಹಕಾರ ಸಂಘಗಳ ನಿರೀಕ್ಷಕರು, ಕಾನೂನು ಮಾಪನ ತಪಾಸಿಕರು, ಔಷಧ ನಿಯಂತ್ರಕರ ಕಛೇರಿಯಲ್ಲಿನ ಪರಿವೀಕ್ಷಕರು, ಉಪ ನೋಂದಣಾಧಿಕಾರಿಗಳು ಮತ್ತು ಇತರರ ಆಯ್ಕೆ ಪ್ರಕ್ರಿಯೆಯಲ್ಲಿ ವಸ್ತುನಿಷ್ಠ ಮಾದರಿಯ ಪರೀಕ್ಷೆಯ ಆಧಾರದ ಮೇಲೆ ಗುರುತಿಸಲಾದ ಅರ್ಹ ಅಭ್ಯರ್ಥಿಗಳಿಗಾಗಿ ವ್ಯಕ್ತಿತ್ವ ಪರೀಕ್ಷೆ ನಡೆಸಲು ಅವಕಾಶವಿರುತ್ತದೆ. ಈ ಹುದ್ದೆಗಳ ಕರ್ತವ್ಯಗಳ ಸ್ವರೂಪದ ಕಾರಣ ಆಯ್ಕೆ ಪ್ರಕ್ರಿಯೆಯಲ್ಲಿ ವ್ಯಕ್ತಿತ್ವ ಪರೀಕ್ಷೆಯನ್ನು ಕಡ್ಡಾಯವಾದ ಘಟಕವೆಂದು ಪರಿಗಣಿಸುವ ಅಗತ್ಯವಿಲ್ಲವೆಂದು ಸಮಿತಿಯು ಶಿಫಾರಸ್ಸು ಮಾಡುತ್ತದೆ. ಸಂಕ್ಷಿಪ್ತವಾಗಿ ಹೇಳುವುದಾದರೆ ಕರ್ನಾಟಕ ಸರ್ಕಾರದಲ್ಲಿ ಎಲ್ಲ ಗುಂಪು-ಸಿ ಹುದ್ದೆಗಳನ್ನು ವಸ್ತುನಿಷ್ಠ ಮಾದರಿಯ ಪರೀಕ್ಷೆಯ ಮೂಲಕವೇ ನೇಮಿಸಿ ತುಂಬಬೇಕೆಂದು ಸಮಿತಿಯು ಶಿಫಾರಸ್ಸು ಮಾಡುತ್ತದೆ.

(23) ಕರ್ನಾಟಕ ಲೋಕಸೇವಾ ಆಯೋಗವು ವಸ್ತುನಿಷ್ಠ ಮಾದರಿಯ ಪರೀಕ್ಷೆಯ ಮೂಲಕ ಗುಂಪು-ಸಿ ಹುದ್ದೆಗಳ ನೇರ ನೇಮಕಾತಿಯನ್ನು ಅಂತಿಮಗೊಳಿಸಲು ವಿಳಂಬ ಮಾಡುತ್ತಿರುವ ಬಗ್ಗೆ ಕರ್ನಾಟಕದಲ್ಲಿರುವ ಸೇವಾ ಸಂಘಗಳು ಅತ್ಯಂತ ಅಸಮಾಧಾನ ಹೊಂದಿವೆ ಎಂಬುದನ್ನು ಸಮಿತಿಯು ಗಮನಿಸಿದೆ. ಗುಂಪು-ಸಿ ಹುದ್ದೆಗಳ ನೇಮಕಾತಿಗೆ ಸಂಬಂಧಿಸಿದಂತೆ ಅರ್ಹತಾ ಪಟ್ಟಿಯನ್ನು ಅಂತಿಮಗೊಳಿಸುವಲ್ಲಿ ಆಗುವ ವಿಳಂಬವು ಒಂದು ವಿಷಾದದ ಅಂಶವಾಗಿದ್ದು ಸೂಕ್ತವಾದ ಆಡಳಿತಾತ್ಮಕ ಕ್ರಮಗಳಿಂದ ಸರಿಪಡಿಸಬೇಕಾಗಿದೆ.

(24) ಪ್ರಚಲಿತ ಪ್ರಬಂಧದ ಮಾದರಿಯ ಲಿಖಿತ ಪರೀಕ್ಷೆಗಳಲ್ಲಿ ಅನಾನಿಮಿಟಿ ಹಾಗೂ ಗೌಪ್ಯತೆಯನ್ನು ನಿರ್ವಹಿಸುವ ಬಗ್ಗೆ ಕರ್ನಾಟಕ ಲೋಕಸೇವಾ ಆಯೋಗದ ವ್ಯವಸ್ಥೆ ಹಾಗೂ ಕಾರ್ಯವಿಧಾನಗಳ ಬಗ್ಗೆ ಸಮಿತಿಯು ಸುದೀರ್ಘವಾಗಿ ಶೋಧಿಸಿತು. ಬಾರ್ ಕೋಡ್ ಬಳಕೆಯಿಂದಾಗಿ ಯಾವುದೇ ವಿದ್ಯಾರ್ಥಿಯ ಗುರುತನ್ನು ಉತ್ತರ ಪತ್ರಿಕೆಯ ಮೂಲಕ ಕಂಡು ಹಿಡಿಯುವುದು ವಾಸ್ತವಿಕವಾಗಿ ಅಸಾಧ್ಯವೆಂಬ ಬಗ್ಗೆ ಸಮಿತಿಯು ತೃಪ್ತಿಹೊಂದಿದೆ. ಕರ್ನಾಟಕ ಸರ್ಕಾರದ ಹಿಂದಿನ ಮುಖ್ಯ ಕಾರ್ಯದರ್ಶಿಗಳಾಗಿದ್ದ ಶ್ರೀ.ಕೆ.ಕೆ.ಮಿಶ್ರಾ ಸಮಿತಿಯ ಶಿಫಾರಸ್ಸಿನಿಂದಾಗಿ 2005ನೇ ಸಾಲಿನಿಂದ ಕರ್ನಾಟಕ ಲೋಕಸೇವಾ ಆಯೋಗವು ಪ್ರಚಲಿತ ಪ್ರಬಂಧ ಮಾದರಿಯ ಪತ್ರಿಕೆಗಳಿಗೆ ಇಬ್ಬರು ಪರೀಕ್ಷಕರನ್ನು ನೇಮಿಸುವ ವ್ಯವಸ್ಥೆಯನ್ನು ಜಾರಿಗೊಳಿಸಿರುವುದನ್ನು ಸಮಿತಿಯು ತೃಪ್ತಿಯೊಂದಿಗೆ ಗಮನಿಸಿದೆ. ದ್ವಿ ಪರೀಕ್ಷಕ ವ್ಯವಸ್ಥೆಯಲ್ಲಿ ಒಬ್ಬ ಅಭ್ಯರ್ಥಿಯು ಗಳಿಸಿರುವ ಅಂಕಗಳ ವ್ಯತ್ಯಾಸವು ಒಟ್ಟು ಅಂಕಗಳ 15%ಗಿಂತ ಹೆಚ್ಚಾಗಿದ್ದಲ್ಲಿ, ಅಂತಹ ಉತ್ತರ

ಪತ್ರಿಕೆಯನ್ನು ಮೂರನೇ ಪರೀಕ್ಷಕರವರಿಂದ ಮೌಲ್ಯಮಾಪನ ಮಾಡಲಾಗುತ್ತದೆ. ಇದರಲ್ಲಿ ಹತ್ತಿರವಿರುವ ಎರಡು ಅಂಕಗಳ ಸರಾಸರಿ ಅಂಕವನ್ನು ಅಭ್ಯರ್ಥಿಯು ಗಳಿಸಿದ ಅಂಕಗಳೆಂದು ಪರಿಗಣಿಸಲಾಗುತ್ತಿದೆ.

(25) ಸ್ಪರ್ಧಾತ್ಮಕ ಪರೀಕ್ಷೆಗಳ ಹಾಗೂ ವ್ಯಕ್ತಿತ್ವ ಪರೀಕ್ಷೆಗಳ ಎಲ್ಲ ಗೌಪ್ಯ ವಿಷಯಗಳ ದಾಖಲೆಗಳಿಗೆ ಸಂಬಂಧಿಸಿದಂತೆ ಪ್ರಸ್ತುತ ಕರ್ನಾಟಕ ಲೋಕಸೇವಾ ಆಯೋಗದ ಕಾರ್ಯದರ್ಶಿಯವರು ಮೇಲ್ವಿಚಾರಕ(ಕಸ್ಟೋಡಿಯನ್)ರಾಗಿರುತ್ತಾರೆ. ಸ್ಪರ್ಧಾತ್ಮಕ ಪರೀಕ್ಷೆಗಳ ಹಾಗೂ ವ್ಯಕ್ತಿತ್ವ ಪರೀಕ್ಷೆಗಳ ಎಲ್ಲ ಗೌಪ್ಯ ವಿಷಯಗಳ ಪ್ರಭಾರವನ್ನು ವಹಿಸಲು ಒಂದು ಪರೀಕ್ಷಾ ನಿಯಂತ್ರಕರ ಹೊಸ ಹುದ್ದೆಯನ್ನು ಸೃಜಿಸಲು ಸಮಿತಿಯು ಶಿಫಾರಸ್ಸು ಮಾಡುತ್ತದೆ. ಪರೀಕ್ಷಾ ನಿಯಂತ್ರಕರು ಆದಷ್ಟು ಮಟ್ಟಿಗೆ ಹಿರಿಯ ವೇತನ ಶ್ರೇಣಿಯಲ್ಲಿರುವ ನೇರ ನೇಮಕಾತಿ ಮೂಲಕ ಅಖಿಲ ಭಾರತ ಸೇವೆಗೆ ಆಯ್ಕೆಯಾಗಿರುವ ಅಧಿಕಾರಿಯಾಗಿರತಕ್ಕದ್ದು. ಸದರಿಯವರ ಸೇವಾ ಅವಧಿಯು ಕನಿಷ್ಠ ಮೂರು ವರ್ಷಗಳು ಇರತಕ್ಕದ್ದು. ಪರೀಕ್ಷಾ ನಿಯಂತ್ರಕರ ಹುದ್ದೆಯಿಂದ ಅವರನ್ನು ವರ್ಗಾಯಿಸಿ ವರ್ಗಾವಣೆ ಆದೇಶವನ್ನು ಹೊರಡಿಸಿ ಕಾರ್ಯಗತಗೊಳಿಸುವ ಮೊದಲು ಕನಿಷ್ಠ ಮೂರು ತಿಂಗಳ ಒಬ್ಬರನ್ನು ಅಧ್ಯಯನದಲ್ಲಿರಿಸಿರಬೇಕು.

(26) ಪರೀಕ್ಷಾ ನಿಯಂತ್ರಕರು ಕರ್ನಾಟಕ ಲೋಕಸೇವಾ ಆಯೋಗದ ಕಾರ್ಯದರ್ಶಿಯವರ ಒಟ್ಟಾರೆ ನಿಯಂತ್ರಣದಲ್ಲಿ ಕಾರ್ಯ ನಿರ್ವಹಿಸಬೇಕು; ಆದರೆ ಸ್ಪರ್ಧಾತ್ಮಕ ಪರೀಕ್ಷೆಗಳ ಹಾಗೂ ವ್ಯಕ್ತಿತ್ವ ಪರೀಕ್ಷೆಗಳ ಎಲ್ಲ ಗೌಪ್ಯ ವಿಷಯಗಳ ಮಾಹಿತಿಯು ಏಕಮಾತ್ರವಾಗಿ ಇವರ ಸುಪರ್ದಿನಲ್ಲಿರಬೇಕು; ಇವರು ಈ ವಿಷಯಗಳನ್ನು / ಮಾಹಿತಿಯನ್ನು ಕ.ಲೊ.ಸೇ ಆಯೋಗದ ಕಾರ್ಯದರ್ಶಿ ಹಾಗೂ ಅಧ್ಯಕ್ಷರೊಡನೆಯೂ ಇಂತಹ ಮಾಹಿತಿಯನ್ನು ತಿಳಿದುಕೊಳ್ಳುವ ಅವಶ್ಯಕತೆಯ (Need –to-know") ತತ್ವದ ಆಧಾರದ ಹೊರತಾಗಿ ಹಂಚಿಕೊಳ್ಳುವಂತಿಲ್ಲ.

(27) ಗೆಜೆಟೆಡ್ ಪ್ರೊಬೆಷನರ್ಸ್ ಪರೀಕ್ಷೆಯ 27 ಐಚ್ಚಿಕ ವಿಷಯಗಳಲ್ಲಿ (ಇವುಗಳಲ್ಲಿ ಎರಡು ಐಚ್ಚಿಕ ವಿಷಯಗಳನ್ನು ಒಬ್ಬ ಅಭ್ಯರ್ಥಿಯು ಆಯ್ಕೆ ಮಾಡಬೇಕಾಗುತ್ತದೆ) ಅನೇಕ ಅಭ್ಯರ್ಥಿಗಳು ಗಳಿಸಿರುವ ಅಂಕಗಳ ಆಧಾರದ ಮೇಲೆ ಕೆಲವು ವಿಷಯಗಳು ಹೆಚ್ಚಿನ ಅಂಕಗಳನ್ನು ಗಳಿಸುವಂತಹವು ಎಂಬ ಬಗ್ಗೆ ಸಮಿತಿಯು ದಾಖಲೆ/ ಸಾಕ್ಷಿಗಳನ್ನು ಪಡೆದಿರುತ್ತದೆ. ಸ್ವಾಭಾವಿಕವಾಗಿ ಈ ಅಭ್ಯರ್ಥಿಗಳು ಪಡೆಯುವ ಅತಿ ಹೆಚ್ಚಿನ ಅಂಕಗಳಿಂದ ಅವರು ಹೆಚ್ಚಿನ ಅಂಕ ಗಳಿಸದ ಬೇರೆ ಐಚ್ಚಿಕ ವಿಷಯಗಳನ್ನು ಆಯ್ಕೆ ಮಾಡಿದ ಅಭ್ಯರ್ಥಿಗಳಿಂದ ಅನ್ಯಾಯವಾದ ಲಾಭ ಪಡೆಯುತ್ತಾರೆ. ಈ ಸಂಬಂಧ ಸಮಿತಿಯು ಒಂದು ಲಿಖಿತ ಮನವಿಯನ್ನು ಸ್ವೀಕರಿಸಿದ್ದು ಅದನ್ನು ವಿವರವಾಗಿ ಈ ಕೆಳಗೆ ಉಲ್ಲೇಖಿಸಲಾಗಿದೆ.

"The Union Public Service Commission has tried to overcome the problem of high marks secured by some candidates in scoring optional subjects by resorting to inter-subject scaling.

The procedure adopted by the UPSC for inter-subject scaling has been kept highly confidential by the UPSC themselves. They do not share the formula for inter-subject scaling with any other Public Service Commission. In a country governed by the Rule of Law, an inter-subject scaling procedure which decides the relative merit of candidates in a Competitive Examination, will have to be notified by Rules framed in that regard. These Rules have to stand not only scrutiny by members of the Public but also of the Judiciary in exercise of their power of Judicial Review."

(28) ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಐಚ್ಛಿಕ ವಿಷಯಗಳಿಂದ ಉದ್ಭವವಾಗುವ ವಿಷಯ ಪಕ್ಷಪಾತವನ್ನು ಅಭ್ಯರ್ಥಿಗಳಿಗೆ ಲೇಖನಿ–ಹಾಗೂ–ಕಾಗದದ ಒಂದೇ ಮಟ್ಟದ ಮಾದರಿಯ ಸಮಾನ ಭೂಮಿಕೆಯನ್ನು ಸೃಜಿಸಿ ಸಾಮಾನ್ಯ ವಿಷಯಗಳಿಗೆ ಸಂಬಂಧಿಸಿದ ಹಾಗೂ ಸಾಮಾನ್ಯ ಪಠ್ಯಕ್ರಮದೊಂದಿಗೆ ಸಾಂಪ್ರದಾಯಿಕ ಪ್ರಬಂಧದ ಮಾದರಿಯ ಪರೀಕ್ಷೆಯನ್ನು ನಿಗದಿಪಡಿಸುವ ಮೂಲಕ ನಿವಾರಿಸಬಹುದು.

(29) ಕೇಂದ್ರ ಲೋಕಸೇವಾ ಆಯೋಗವು 2013ರ ವರ್ಷದಲ್ಲಿ ಎಲ್ಲ ಅಭ್ಯರ್ಥಿಗಳಿಗೆ ಹೊಸ ಮಾದರಿಯಲ್ಲಿ ಸಾಮಾನ್ಯ ವಿಷಯಗಳಿಗೆ ಸಂಬಂಧಿಸಿದಂತೆ 4 ಪತ್ರಿಕೆಗಳನ್ನು ಹೊಂದಿರುವ 1000 ಅಂಕಗಳ ಸಿವಿಲ್ ಸೇವೆಗಳ ಮುಖ್ಯ ಪರೀಕ್ಷೆಯ ಬಗ್ಗೆ ಅಧಿಸೂಚಿಸಿರುವುದನ್ನು ಸಮಿತಿಯು ಗಮನಿಸಿತು. ಕೇಂದ್ರ ಲೋಕಸೇವಾ ಆಯೋಗದ ಈ ಮಾದರಿಯಲ್ಲಿ 250 ಅಂಕಗಳ ಸಾಮಾನ್ಯ ಸ್ವರೂಪದ ಒಂದು ಪ್ರಬಂಧದ ಪತ್ರಿಕೆಯೂ ಇರುತ್ತದೆ.

(30) ಆದ್ದರಿಂದ ಕೇಂದ್ರ ಲೋಕಸೇವಾ ಆಯೋಗವು ಸಿವಿಲ್ ಸೇವೆಗಳಿಗಾಗಿ ನಡೆಸುವ ಈ ವರ್ಷದ 2013ರ ಮುಖ್ಯ ಲಿಖಿತ ಪರೀಕ್ಷೆಯಲ್ಲಿ ಪ್ರಬಂಧದ ಪತ್ರಿಕೆಯು ಸೇರಿದಂತೆ ಸಾಮಾನ್ಯ ವಿಷಯಗಳಿವೆ. ಕೇಂದ್ರ ಲೋಕಸೇವಾ ಆಯೋಗದ ಮುಖ್ಯ ಪರೀಕ್ಷೆ ಯೋಜನೆಯಲ್ಲಿ 2 ಪ್ರಶ್ನೆಪತ್ರಿಕೆಗಳನ್ನೊಳಗೊಂಡ 500 ಅಂಕಗಳ ಒಂದು ಐಚ್ಛಿಕ ವಿಷಯವೂ ಇದೆ (250 ಅಂಕಗಳ ಎರಡು ಪತ್ರಿಕೆಗಳು). ವ್ಯಕ್ತಿತ್ವ ಪರೀಕ್ಷೆಯ ಅಂಕಗಳು 275. ಆದ್ದರಿಂದ ಕೇಂದ್ರ ಲೋಕಸೇವಾ ಆಯೋಗವು ಪ್ರಸ್ತುತ 2013ನೇ ಸಾಲಿನಿಂದ ನಡೆಸುವ ಸಿವಿಲ್ ಸೇವಾ ಪರೀಕ್ಷೆಗಳಿಗೆ ನಿಗದಿಪಡಿಸಿರುವ ಒಟ್ಟು ಅಂಕಗಳು 2025. ಈ ಹೊಸ ಪರೀಕ್ಷಾ ಯೋಜನೆಯಲ್ಲಿ, ವ್ಯಕ್ತಿತ್ವ ಪರೀಕ್ಷೆಗೆ ನಿಗದಿಪಡಿಸಿರುವ ಗರಿಷ್ಠ 275 ಅಂಕಗಳನ್ನು ನಿಗದಿಪಡಿಸಲಾಗಿದ್ದು, ಸುಮಾರು ಶೇ. 13.6ರಷ್ಟು ಮೌಲ್ಯವನ್ನು ಹೊಂದಿರುತ್ತವೆ.

(31) ಕರ್ನಾಟಕ ಲೋಕಸೇವಾ ಆಯೋಗಕ್ಕೆ ಸಂಬಂಧಿಸಿದಂತೆ, ಗೆಜೆಟೆಡ್ ಪ್ರೊಬೆಷನರುಗಳ ಪರೀಕ್ಷೆಯಲ್ಲಿ ವಸ್ತುನಿಷ್ಠ ಪರೀಕ್ಷೆಯಲ್ಲಿ ಅಭ್ಯರ್ಥಿಗಳನ್ನು ಶೋಧಿಸಿದ ನಂತರ,

ಅದರಲ್ಲಿ ಉತ್ತೀರ್ಣರಾಗಿ ಮುಖ್ಯ ಪರೀಕ್ಷೆಗೆ ಅರ್ಹರಾದ ಅಭ್ಯರ್ಥಿಗಳು ಲೇಖನಿ ಮತ್ತು ಕಾಗದದೊಂದಿಗೆ ಸಾಂಪ್ರದಾಯಿಕ ಪ್ರಬಂಧ ಮಾದರಿಯ ಸಾಮಾನ್ಯ ವಿಷಯಗಳ ಪರೀಕ್ಷೆಗೆ ಹಾಜರಾಗತಕ್ಕದ್ದು, ಅಂದರೆ, ಸಾಮಾನ್ಯ ವಿಷಯಗಳ ನಾಲ್ಕು ಪತ್ರಿಕೆಗಳು, ಪ್ರತಿಯೊಂದು ಪತ್ರಿಕೆಯು 250 ಅಂಕಗಳನ್ನು ಒಳಗೊಂಡಿರುತ್ತದೆ (ಒಟ್ಟು 1000 ಅಂಕಗಳು) ಮತ್ತು 300 ಅಂಕಗಳನ್ನು ಒಳಗೊಂಡ ಒಂದು ಪ್ರಬಂಧ ಪತ್ರಿಕೆ ಹಾಗೂ ಒಂದು ಐಚ್ಛಿಕ ವಿಷಯದ ಎರಡು ಪತ್ರಿಕೆಗಳು, ಪ್ರತಿ ಪತ್ರಿಕೆಗೆ 250 ಅಂಕಗಳು. ಗೆಜೆಟೆಡ್ ಪ್ರೊಬೆಷನರುಗಳ ಪರೀಕ್ಷಾ ಯೋಜನೆಯಲ್ಲಿ ಶೇ.10.25ರಷ್ಟು ಮೌಲ್ಯವುಳ್ಳ 200 ಅಂಕಗಳನ್ನು ವ್ಯಕ್ತಿತ್ವ ಪರೀಕ್ಷೆಗೆ ನಿಗಧಿಪಡಿಸಬಹುದಾಗಿರುತ್ತದೆ. ವ್ಯಕ್ತಿತ್ವ ಪರೀಕ್ಷೆಗೆ ನಿಗದಿಪಡಿಸುವ ಶೇ.10.25ರಷ್ಟು ಮೌಲ್ಯವು ಸರ್ವೋಚ್ಛ ನ್ಯಾಯಾಲಯವು ಅಶೋಕ್ ಕುಮಾರ್ ಯಾದವ್ ವಿರುದ್ಧ ಹರಿಯಾಣ ರಾಜ್ಯ (ಎಐಆರ್ 1987 ಎಸ್‌ಸಿ 454) ಮತ್ತು ಲೀಲಾ ಧರ್ ವಿರುದ್ಧ ರಾಜಾಸ್ಥಾನ ರಾಜ್ಯ (ಎಐಆರ್ 1981 ಎಸ್‌ಸಿ 1777) ರಲ್ಲಿ ನೀಡಿರುವ ತೀರ್ಪಿನ ತತ್ವದ ಅನುಸಾರ ಇರುತ್ತದೆ. ವ್ಯಕ್ತಿತ್ವ ಪರೀಕ್ಷೆಗೆ ಅಸಮ ಪ್ರಮಾಣದ ಹೆಚ್ಚಿನ ಸರಾಸರಿಯ ಅಂಕಗಳನ್ನು ನಿಗದಿಪಡಿಸಿದಲ್ಲಿ ಮೌಖಿಕ ಸಂದರ್ಶನವನ್ನು ನಡೆಸುವ ಮಂಡಳಿಯ ಅಧೀನಕ್ಕೊಳಪಡಿಸುವ ಸಾಧ್ಯತೆ ಇದ್ದು ಆಯ್ಕೆ ಪ್ರಕ್ರಿಯೆಯನ್ನು ಮಲಿನಗೊಳಿಸುತ್ತದೆ ಎಂದು ನ್ಯಾಯಾಲಯವು ಮೇಲಿನ ಎರಡೂ ತೀರ್ಮಗಳಲ್ಲಿ ಪ್ರತಿಪಾದಿಸಿರುತ್ತದೆ.

(32) ಗೆಜೆಟೆಡ್ ಪ್ರೊಬೆಷನರುಗಳ ಪರೀಕ್ಷೆ ನಡೆಸುವುದಕ್ಕೆ ನಿಗದಿಪಡಿಸಿರುವ ಪರಿಷ್ಕೃತ ಯೋಜನೆಯಲ್ಲಿ ಸಾಮಾನ್ಯ ವಿಷಯಗಳ ಸಾಮಾನ್ಯ ಪತ್ರಿಕೆ (1200 ಅಂಕಗಳು), ಪ್ರಬಂಧ (300 ಅಂಕಗಳು) ಮತ್ತು ವ್ಯಕ್ತಿತ್ವ ಪರೀಕ್ಷೆ (200 ಅಂಕಗಳು) ಕೆಲವು ಲೋಪದೋಷಗಳು ಕಂಡುಬರಬಹುದು. ಮೊದಲಿಗೆ, ಸಾಮಾನ್ಯ ವಿಷಯಕ್ಕೆ ಸಂಬಂಧಿಸಿದಂತೆ ಕಾಲೇಜುಗಳಲ್ಲಿ / ವಿಶ್ವವಿದ್ಯಾಲಯಗಳಲ್ಲಿ ಪಠ್ಯವನ್ನಾಗಿ ಬೋಧಿಸುವುದಿಲ್ಲ, ಅಭ್ಯರ್ಥಿಗಳು ಸಾಮಾನ್ಯ ವಿಷಯಗಳ ಬಗ್ಗೆ ವಿವಿಧ ಖಾಸಗಿ ತರಬೇತಿ ಸಂಸ್ಥೆಗಳು ಪ್ರಕಟಿಸುವ ಪಠ್ಯಪುಸ್ತಕಗಳನ್ನು ಅಧ್ಯಯನ ಮಾಡುವರು. ಈ ರೀತಿ ಮಾಡಿದಲ್ಲಿ, ಸಾಮಾನ್ಯ ವಿಷಯಕ್ಕೆ ಸಂಬಂಧಿಸಿದ ವಿಷಯಗಳನ್ನು ಬಲವಂತವಾಗಿ ತುರುಕಿದಂತಾಗುತ್ತದೆ. ಯಾವುದೇ ಒಂದು ವಿಷಯವನ್ನು ಕಾಲೇಜುಗಳ / ವಿಶ್ವವಿದ್ಯಾಲಯಗಳ ತರಗತಿಗಳಲ್ಲಿ ವ್ಯಾಸಂಗ ಮಾಡುವುದರಿಂದ ವಿಶ್ಲೇಷಾತ್ಮಕ ಕೌಶಲ್ಯ ಮತ್ತು ತಾರ್ಕಿಕ ಮನೋಭಾವದ ಬೌದ್ಧಿಕತೆ ಬೆಳೆಯುತ್ತದೆ ಎಂಬುದು ಅಂಗೀಕೃತವಾದ ವಿಷಯವಾಗಿರುತ್ತದೆ. ಯಾವುದೇ ವಿಷಯಗಳನ್ನು ವ್ಯಾಸಂಗ ಕ್ರಮಕ್ಕನುಗುಣವಾಗಿ ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಮಾಡಿದಲ್ಲಿ ಬೌದ್ಧಿಕತೆಗೆ ಸರಿಯಾದ ತರಬೇತಿ ನೀಡುತ್ತದೆಯೆಂದು ಹೆರಮನ್ ಫೈನರ್ ಎಂಬುವವರು ಹೇಳಿರುವ ಹೇಳಿಕೆಯು ಸಮಂಜಸವಾಗಿರುತ್ತದೆ. ಸಾಮಾನ್ಯ ವಿಷಯಗಳಿಗೆ ಸಂಬಂಧಿಸಿದ ಏಕರೂಪದ ಪತ್ರಿಕೆಗಳು ಈ ಉದ್ದೇಶವನ್ನು ಈಡೇರಿಸುವುದಕ್ಕೆ ಸಾಧ್ಯವಾಗುವುದಿಲ್ಲ. ಎರಡನೆಯದಾಗಿ, ಗ್ರಾಮೀಣ ಪ್ರದೇಶದಿಂದ ಬರುವ ಅಭ್ಯರ್ಥಿಗಳು ಗೆಜೆಟೆಡ್ ಪ್ರೊಬೆಷನರುಗಳ ನೇಮಕಾತಿಗೆ ಸಂಬಂಧಿಸಿದಂತೆ ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಗೆ ತೆರೆದುಕೊಳ್ಳದೇ ಇರುವುದರಿಂದ, ಅವರು ಸಾಮಾನ್ಯ ಪತ್ರಿಕೆಗಳಲ್ಲಿ

ಯಶಸ್ವಿಯಾಗಿ ಉತ್ತರಿಸಲು ಸಾಧ್ಯವಾಗುವುದಿಲ್ಲ. ಕಾಲೇಜುಗಳು ಮತ್ತು ವಿಶ್ವವಿದ್ಯಾಲಯಗಳ ತರಗತಿಗಳಲ್ಲಿ ವಿವಿಧ ವಿಷಯಗಳನ್ನು ಅಧ್ಯಯನ ಮಾಡಿದ ಅಭ್ಯರ್ಥಿಗಳು ಗೆಜೆಟೆಡ್ ಪ್ರೊಬೆಷನರುಗಳ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಅಧ್ಯಯನ ಮಾಡಿದ ಐಚ್ಛಿಕ ವಿಷಯಗಳಲ್ಲಿ (ಶೈಕ್ಷಣಿಕ ವರ್ಷಗಳಲ್ಲಿ ಅಧ್ಯಯನ ಮಾಡಿದ ಐಚ್ಛಿಕ ವಿಷಯಗಳು) ಪರೀಕ್ಷೆ ಬರೆಯಲು ಅವಕಾಶ ವಂಚಿತರಾಗುತ್ತಾರೆ. ಕರ್ನಾಟಕ ಸರ್ಕಾರದ ಗ್ರೂಪ್-ಎ ಮತ್ತು ಗ್ರೂಪ್-ಬಿ ಹುದ್ದೆಗಳಿಗೆ ಮಾಡುವ ನೇಮಕಾತಿಗಳಲ್ಲಿ ಅಗತ್ಯವಾದ ಬುದ್ಧಿಶಕ್ತಿ ಮತ್ತು ಸೇವೆಗಳಿಗೆ ಬೇಕಾದ ಅವಶ್ಯಕ ಗುಣಗಳುಳ್ಳ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಈ ಪದ್ಧತಿಯು ಫಲಪ್ರದವಾಗುವುದಿಲ್ಲವೆಂದು ಮೇಲ್ನೋಟಕ್ಕೆ ಕಂಡುಬರುತ್ತದೆ.

(33) ಸಿವಿಲ್ ಸೇವಾ ಪರೀಕ್ಷೆಗಳಲ್ಲಿ ಅಭ್ಯರ್ಥಿಗಳಿಗೆ ವಿವಿಧ ಐಚ್ಛಿಕ ವಿಷಯಗಳಲ್ಲಿ (ಕಾಲೇಜು / ವಿಶ್ವವಿದ್ಯಾಲಯಗಳಲ್ಲಿ ಬೋಧಿಸಿದ) ಒಂದು ಐಚ್ಛಿಕ ವಿಷಯವನ್ನು ಆಯ್ಕೆ ಮಾಡಿಕೊಳ್ಳಲು ಅವಕಾಶ ಮಾಡಿಕೊಡಬೇಕೆಂಬ ನಿರಂತರವಾದ ಬೇಡಿಕೆಯ ಹಿನ್ನೆಲೆಯಲ್ಲಿ ಕೇಂದ್ರ ಲೋಕಸೇವಾ ಆಯೋಗವು ಸಿವಿಲ್ ಸೇವಾ ಪರೀಕ್ಷೆಗಳ ಹೊಸ ಪದ್ಧತಿಯಲ್ಲಿ 500 ಅಂಕಗಳನ್ನು ಒಳಗೊಂಡ ಒಂದು ಐಚ್ಛಿಕ ವಿಷಯವನ್ನು ಅಳವಡಿಸಿರುತ್ತದೆ (ಪ್ರತಿಯೊಂದು ಪತ್ರಿಕೆಗೆ 250 ಅಂಕಗಳಂತೆ ಎರಡು ಪತ್ರಿಕೆಗಳು).

(34) ಕರ್ನಾಟಕ ಲೋಕಸೇವಾ ಆಯೋಗವು ಗೆಜೆಟೆಡ್ ಪ್ರೊಬೆಷನರುಗಳ ಪರೀಕ್ಷೆಗೆ ಪ್ರಸ್ತುತ ನಿಗದಿಪಡಿಸಿರುವ ಐಚ್ಛಿಕ ವಿಷಯಗಳ ಪಟ್ಟಿಯಲ್ಲಿ ಕೇಂದ್ರ ಲೋಕಸೇವಾ ಆಯೋಗದ ಮಾದರಿಯಲ್ಲಿ ಕನಿಷ್ಠ ಒಂದು ಐಚ್ಛಿಕ ವಿಷಯವನ್ನು (ಪ್ರತಿಯೊಂದು ಪತ್ರಿಕೆಗೆ 250 ಅಂಕಗಳಂತೆ ಎರಡು ಪತ್ರಿಕೆಗಳು) ನಿಗದಿಪಡಿಸಿ ಅನುಸರಿಸುವುದು ಸೂಕ್ತವೆಂದು ಸಮಿತಿಯು ಅಭಿಪ್ರಾಯಪಡುತ್ತದೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಪ್ರಸ್ತಾವಿತ ಗೆಜೆಟೆಡ್ ಪ್ರೊಬೆಷನರುಗಳ ಪರೀಕ್ಷಾ ಪದ್ಧತಿಯಲ್ಲಿ, ಸಾಮಾನ್ಯ ವಿಷಯಗಳ ನಾಲ್ಕು ಪತ್ರಿಕೆಗಳು (ಒಟ್ಟು 1000 ಅಂಕಗಳು); ಒಂದು ಐಚ್ಛಿಕ ವಿಷಯ (ಒಟ್ಟು 500 ಅಂಕಗಳು ಅಂದರೆ ಪ್ರತಿಯೊಂದು ಪತ್ರಿಕೆಗೆ 250 ಅಂಕಗಳಂತೆ ಎರಡು ಪತ್ರಿಕೆಗಳು), ಒಂದು ಪ್ರಬಂಧ ಪತ್ರಿಕೆ (250 ಅಂಕಗಳು) ಮತ್ತು ವ್ಯಕ್ತಿತ್ವ ಪರೀಕ್ಷೆ (200 ಅಂಕಗಳು) ಇರುತ್ತವೆ.

(35) ಅಂತರ ವಿಷಯಗಳ ಅಳತೆಗೋಲನ್ನು ನಿರ್ಧರಿಸುವುದು ಸುಲಭವಾಗಿ ಬಗೆಹರಿಸಲಾಗದ ಮತ್ತು ಪರಿಹಾರ ಕಂಡುಕೊಳ್ಳಲಾಗದ ವಿಷಯವೇನೂ ಅಲ್ಲ. ಅಂತರ ವಿಷಯದ ಅಳತೆಗೋಲನ್ನು ಪ್ರತಿಭಾವಂತ ಅಭ್ಯರ್ಥಿಗಳನ್ನು ಎಲ್ಲಾ ವಿಷಯಗಳಲ್ಲಿಯೂ ಗುರುತಿಸಬಹುದಾದ ನೆಲೆಗಟ್ಟಿನಲ್ಲಿ ನಿರ್ಧರಿಸಬಹುದಾಗಿರುತ್ತದೆ. ಅದಲ್ಲದೇ, ಅಂಕಿಅಂಶಗಳ ಆಧಾರದ ಮೇಲೆ ಆಂತರಿಕ ವಿಷಯಗಳ ಅಳತೆಗೋಲು ನಿರ್ಧರಿಸಿದಲ್ಲಿ, ಅದು ಪ್ರತಿಭಾವಂತ ವಿದ್ಯಾರ್ಥಿಗಳು ಯಾವುದೇ ಸ್ಪರ್ಧಾತ್ಮಕ ಪರೀಕ್ಷೆಗಳ ಎಲ್ಲಾ ವಿಷಯಗಳಲ್ಲಿಯೂ ಯಶಸ್ವಿಯಾಗುವುದನ್ನು ಖಾತರಿಪಡಿಸುತ್ತದೆ ಕಾರಣ, ಅಭ್ಯರ್ಥಿಗಳಿಗೆ ಹೆಚ್ಚು ಐಚ್ಛಿಕ ವಿಷಯಗಳನ್ನು ಒಳಗೊಂಡ ಪಟ್ಟಿಯಿಂದ ಒಂದು ಅಥವಾ ಎರಡು ವಿಷಯಗಳನ್ನು ಆಯ್ಕೆ

ಮಾಡಿಕೊಳ್ಳುವ ಅವಕಾಶವಿರುತ್ತದೆ. ಅಂತರ ವಿಷಯಗಳ ಅಳತೆಗೋಲು ಮತ್ತು ಉದಾರ ಪರಿಷ್ಕರಣೆಗೆ ಸಂಬಂಧಿಸಿದಂತೆ ಗುಣಮಟ್ಟದ ಪಠ್ಯಪುಸ್ತಕಗಳು ಲಭ್ಯವಿರುತ್ತವೆ. ಕರ್ನಾಟಕ ಲೋಕಸೇವಾ ಆಯೋಗವು ಅಂಕಿಅಂಶಗಳ ವಿಧಾನದ ಮುಖಾಂತರ ಆಂತರಿಕ ವಿಷಯಗಳ ಅಳತೆಗೋಲನ್ನು ಅಳವಡಿಸಲು ನಿಯಮಗಳನ್ನು ರೂಪಿಸಿದಲ್ಲಿ, ಆ ನಿಯಮಗಳನ್ನು ನ್ಯಾಯಾಲಯದ ಪರಾಮರ್ಶೆಗೆ ಒಳಪಡಿಸಿದರೂ ಅವುಗಳನ್ನು ಸಮರ್ಥಿಸಿಕೊಳ್ಳುವುದಕ್ಕೆ ಯಾವುದೇ ಸಮಸ್ಯೆ ಆಗುವುದಿಲ್ಲವೆಂಬುದು ಸಮಿತಿಯ ಅನಿಸಿಕೆಯಾಗಿರುತ್ತದೆ.

(36) ಪ್ರಸ್ತುತ, ಗೆಜೆಟೆಡ್ ಪ್ರೊಬೆಷನರುಗಳ ಪರೀಕ್ಷೆಯಲ್ಲಿ ಅರ್ಹತಾ ಸ್ವರೂಪದ ಕನ್ನಡ ಮತ್ತು ಆಂಗ್ಲ ಭಾಷೆಯ ಎರಡು ಕಡ್ಡಾಯ ಪತ್ರಿಕೆಗಳು ಇರುತ್ತವೆ. ಪ್ರಸ್ತಾಪಿತ ಪರೀಕ್ಷಾ ಪದ್ಧತಿಯಲ್ಲಿ ಅವುಗಳನ್ನು ಮುಂದುವರೆಸಬಹುದಾಗಿದೆ. ಪ್ರಸ್ತಾಪಿತ ಪದ್ಧತಿಯಲ್ಲಿ ಅಭ್ಯರ್ಥಿಗಳು ಮುಖ್ಯ ಪರೀಕ್ಷೆಯಲ್ಲಿನ ಎಲ್ಲಾ ಪತ್ರಿಕೆಗಳನ್ನು ಪ್ರಸ್ತುತ ಜಾರಿಯಲ್ಲಿರುವಂತೆ ಆಂಗ್ಲ ಅಥವಾ ಕನ್ನಡ ಭಾಷೆಯಲ್ಲಿ ಉತ್ತರಿಸಬಹುದಾಗಿರುತ್ತದೆ.

(37) ಕೇಂದ್ರ ಲೋಕಸೇವಾ ಆಯೋಗವು 2011ರಲ್ಲಿ ಜಾರಿಗೊಳಿಸಿರುವ ಪೂರ್ವಭಾವಿ ಪರೀಕ್ಷಾ ಪದ್ಧತಿಯಲ್ಲಿ 26 ಐಚ್ಛಿಕ ವಿಷಯಗಳಲ್ಲಿ ಒಂದು ವಿಷಯದಲ್ಲಿ ವಸ್ತುನಿಷ್ಠ ಮಾದರಿಯ ಪರೀಕ್ಷೆಗೆ ಬದಲಾಗಿ ಆಡಳಿತ್ಮಾಕ ಒಲವು ಇದಯೇ ಎಂಬುದನ್ನು ನಿರ್ಧರಿಸಲು ವಸ್ತುನಿಷ್ಠ ಮಾದರಿಯನ್ನು ಅಳವಡಿಸಿರುತ್ತದೆ. ಈ ಹೊಸ ವಸ್ತುನಿಷ್ಠ ಪರೀಕ್ಷೆಯು ಕೇಂದ್ರ ಲೋಕಸೇವಾ ಆಯೋಗವು ಸಿವಿಲ್ ಸೇವಾ ಪರೀಕ್ಷೆಗಳಿಗೆ ಪ್ರತಿ ವರ್ಷ ನಡೆಸುವ ಪರೀಕ್ಷೆಗಳಲ್ಲಿ ಸಮರ್ಥ ಅಭ್ಯರ್ಥಿಯು ಸಾರ್ವಜನಿಕ ಆಡಳಿತದಲ್ಲಿ ಹೊಂದಿರುವ ಒಲುಮೆಯನ್ನು ನಿರ್ಧರಿಸಲು ಸಹಾಯಕವಾಗುತ್ತದೆ. ಎರಡನೇ ಆಡಳಿತ ಸುಧಾರಣಾ ಆಯೋಗವು ಆಡಳಿತದಲ್ಲಿ ಅಭ್ಯರ್ಥಿಗೆ ಇರುವ ಒಲುಮೆಯನ್ನು ನಿರ್ಧರಿಸುವ ಪರೀಕ್ಷೆಯನ್ನು ನಡೆಸುವುದು ಸೂಕ್ತವೆಂದು ಶಿಫಾರಸ್ಸು ಮಾಡಿದ್ದರೂ, ಆಡಳಿತದ ಬಗ್ಗೆ ಅಭ್ಯರ್ಥಿಯು ಹೊಂದಿರುವ ಒಲುಮೆಯನ್ನು ನಿರ್ಧರಿಸುವ ಬಗ್ಗೆ ಹೊಸ ಪತ್ರಿಕೆಯು ಗಣಾತ್ಮಕವಾಗಿ, ತಾಂತ್ರಿಕವಾಗಿ, ವ್ಯಾಪಕವಾಗಿ, ನಕಾಶೆ, ತಖ್ತೆ ಮತ್ತು ಅಂಕಿ ಅಂಶಗಳ ಕೋಷ್ಟಕಗಳ ಮಾಹಿತಿಯನ್ನು ವಿಶ್ಲೇಷಿಸುವುದರಲ್ಲಿ ಮಾತ್ರ ಸಹಾಯಕವಾಗುತ್ತದೆ ಎಂಬುದು ಸಮಿತಿಯ ದೃಷ್ಠಕೋನವಾಗಿರುತ್ತದೆ.

(38) ಗ್ರಾಮೀಣ ಪ್ರದೇಶದಲ್ಲಿ ಪದವಿ ಕಾಲೇಜುಗಳಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಯು ತರಗತಿಗಳಲ್ಲಿ ಗಣಾತ್ಮಕ ತಾಂತ್ರಿಕತೆಗೆ ಹೆಚ್ಚಿಗೆ ತೆರೆದುಕೊಳ್ಳುವುದಿಲ್ಲ ಎಂಬುದರ ವಾಸ್ತವಿಕತೆಯ ಜೊತೆಗೆ, ಆತನು ಹೊಂದಿರುವ ಆಡಳಿತಾತ್ಮಕ ಒಲುಮೆಯನ್ನು ತಾಂತ್ರಿಕ ಒಲುಮೆ ಅಥವಾ ಸಂಗೀತದ ಒಲುಮೆಯಂತೆ ಸುಸಜ್ಜಿತವಾದ ಯಂತ್ರೋಪಕರಣಗಳಿಂದ ಅಳೆಯಬಹುದಾದುದಲ್ಲ ಎಂಬುದು ಮೂಲಭೂತ ವಿಷಯವಾಗಿರುತ್ತದೆ. ಸಾಧಾರಣ ವ್ಯಕ್ತಿತ್ವ ಉಳ್ಳ ಒಬ್ಬ ವಿದ್ಯಾರ್ಥಿಯು ಆತನ ಹಿರಿಯ ಅಧಿಕಾರಿಗಳು ಮತ್ತು ಮಾರ್ಗದರ್ಶಕರ, ಮಾರ್ಗದರ್ಶನದಲ್ಲಿ ಆಡಳಿತ್ಮಾಕ ಒಲುಮೆಯನ್ನು ಮತ್ತು ಕರ್ತವ್ಯದ ಕೌಶಲ್ಯವನ್ನು ಅಭಿವೃದ್ಧಿ ಪಡಿಸಿಕೊಳ್ಳಬಹುದಾಗಿರುತ್ತದೆ ಎಂಬುದು ಸಮಿತಿಯ ಅಭಿಪ್ರಾಯವಾಗಿರುತ್ತದೆ.

(39) ಎಲ್ಲಾ ಅಭ್ಯರ್ಥಿಗಳಿಗೆ ಸಮಾನ ಭೂಮಿಕೆಯನ್ನು ಸೃಜಿಸುವುದರ ಮುಖಾಂತರ ಶೋಧನೆ ನಡೆಸಿ ಅಭ್ಯರ್ಥಿಗಳ ಕಿರು ಪಟ್ಟಿಯನ್ನು ತಯಾರಿಸಲು ಕರ್ನಾಟಕ ಲೋಕ ಸೇವಾ ಆಯೋಗವು ನಡೆಸುವ ಪೂರ್ವಭಾವಿ ಪರೀಕ್ಷೆಯಲ್ಲಿ ಸಾಮಾನ್ಯ ವಿಷಯಗಳ ಪ್ರತಿಯೊಂದಕ್ಕೆ ಮುನ್ನೂರು ಅಂಕಗಳ ಎರಡು ಪತ್ರಿಕೆಗಳನ್ನು ಅಳವಡಿಸುವುದು ಅವಶ್ಯಕವೆಂದು, ಇದರಿಂದ ಅಷ್ಟೇನು ಸಾಮರ್ಥ್ಯರಲ್ಲದ ಅಭ್ಯರ್ಥಿಗಳು ಮೊದಲ ಹಂತದಲ್ಲಿಯೇ ಹೊರಹಾಕಲ್ಪಟ್ಟು, ಮುಖ್ಯ ಪರೀಕ್ಷೆಯಲ್ಲಿ ಪ್ರಬಂದ ಪತ್ರಿಕೆಯು ಒಳಗೊಂಡಂತೆ ಸಾಂಪ್ರದಾಯಿಕ ಪ್ರಬಂಧ ಮಾದರಿಯ ಸಾಮಾನ್ಯ ಪತ್ರಿಕೆಗಳಲ್ಲಿ ಬೌದ್ಧಿಕವಾಗಿ ಸಮರ್ಥರಾದ ಅಭ್ಯರ್ಥಿಗಳಲ್ಲಿಯೇ ಮುಖ್ಯ ಪರೀಕ್ಷೆಯನ್ನು ನಡೆಸುವಂತೆ ಸಮಿತಿಯ ಶಿಫಾರಸ್ಸು ಮಾಡಿದೆ.

(40) ಪ್ರಸ್ತುತ ಪ್ರತಿಯೊಂದು ರಿಕ್ತ ಸ್ಥಾನಕ್ಕೆ ಇಪ್ಪತ್ತು ಅಭ್ಯರ್ಥಿಗಳನ್ನು ಗೆಜೆಟೆಡ್ ಪ್ರೊಬೆಷನರ್ ನೇಮಕಾತಿಯ ಮುಖ್ಯ ಪರೀಕ್ಷೆಗೆ ಹಾಜರಾಗಲು ಅವಕಾಶ ಮಾಡಿಕೊಡಲಾಗುತ್ತದೆ. 1:20ರ ಅನುಪಾತದ ಸೂತ್ರವು ಮುಖ್ಯ ಪರೀಕ್ಷೆಯಲ್ಲಿ ಅಭ್ಯರ್ಥಿಗಳು ಹೆಚ್ಚಿನ ಪ್ರಮಾಣದಲ್ಲಿ ಭಾಗ ವಹಿಸುವ ಸಮಸ್ಯೆಗೆ ಎಡೆ ಮಾಡಿಕೊಡುತ್ತದೆ ಎಂಬುದು ಸಮಿತಿಯ ದೃಷ್ಠಕೋನವಾಗಿರುತ್ತದೆ ಆದುದರಿಂದ ಪ್ರತಿಯೊಂದು ರಿಕ್ತ ಸ್ಥಾನಕ್ಕೆ 14 ರಿಂದ 15 ಅಭ್ಯರ್ಥಿಗಳನ್ನು ಮುಖ್ಯ ಪರೀಕ್ಷೆಗೆ ಹಾಜರಾಗಲು ಅನುವು ಮಾಡಿಕೊಡುವುದು ಸೂಕ್ತವಾಗಿರುತ್ತದೆ. ಕೇಂದ್ರ ಲೋಕಸೇವಾ ಆಯೋಗವು ಪ್ರತಿ ವರ್ಷ ನಿಗದಿಪಡಿಸಿದ ಮಾಸ ಮತ್ತು ದಿನಾಂಕಗಳಂದು ನಡೆಸುವ ಸಿವಿಲ್ ಸೇವಾ ಮುಖ್ಯ ಪರೀಕ್ಷೆಗಳಿಗೆ ಪ್ರತಿ ರಿಕ್ತ ಸ್ಥಾನಕ್ಕೆ ಒಂದರಂತೆ 12 ರಿಂದ 13ರ ಅನುಪಾತದಲ್ಲಿ ಅಭ್ಯರ್ಥಿಗಳಿಗೆ ಅವಕಾಶಮಾಡಿಕೊಡಲಾಗುತ್ತದೆ. ಕೇಂದ್ರ ಲೋಕಸೇವಾ ಆಯೋಗವು ಸಿವಿಲ್ ಸೇವಾ ಪರೀಕ್ಷೆಗಳ ಮುಖ್ಯ ಪರೀಕ್ಷೆಗೆ ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ ಮತ್ತು ಇತರ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ 12 ರಿಂದ 13ರ ಪ್ರಮಾಣದಲ್ಲಿ ಅವಕಾಶ ಮಾಡಿಕೊಡಲಾಗುತ್ತದೆ. ಕರ್ನಾಟಕ ಲೋಕಸೇವಾ ಆಯೋಗವು ಸ್ವಲ್ಪ ಹೆಚ್ಚಾಗಿ ಅಂದರೆ ಪ್ರತಿಯೊಂದು ರಿಕ್ತ ಸ್ಥಾನಕ್ಕೆ 14 ರಿಂದ 15ರ ಪ್ರಮಾಣದಲ್ಲಿ ಅಭ್ಯರ್ಥಿಗಳು ಹಾಜರಾಗಲು ಅವಕಾಶ ಮಾಡಿಕೊಡುವುದರ ಮುಖಾಂತರ ಉದ್ದೇಶಿತ ಗುರಿಯನ್ನು ಸಾಧಿಸಬಹುದಾಗಿರುತ್ತದೆ.

(41) ಗ್ರೂಪ್ ಎ ಮತ್ತು ಬಿ ವೃಂದಗಳ ಸಾಮಾನ್ಯ ಸೇವೆಗಳಿಗೆ ಸೇರಿದ ರಿಕ್ತ ಸ್ಥಾನಗಳನ್ನು ಕ್ರೋಢೀಕರಿಸುವ ಸಂಬಂಧವಾಗಿ ಸಮಿತಿಯು ಅನೇಕ ಮನವಿಗಳನ್ನು ಸ್ವೀಕರಿಸಿರುತ್ತದೆ. ಕರ್ನಾಟಕ ಲೋಕಸೇವಾ ಆಯೋಗವು ಗೆಜೆಟೆಡ್ ಪೊಬೆಷನರ್‌ಗಳ ಪರೀಕ್ಷೆಯ ಮುಖಾಂತರ ಸಾಮಾನ್ಯ ಸೇವೆಗಳಿಗೆ ಸೇರಿದ ಹುದ್ದೆಗಳಿಗೆ ನೇಮಕಾತಿ ಮಾಡಲು ಸ್ಪರ್ಧಾತ್ಮಕ ಪರೀಕ್ಷೆಯನ್ನು ಪ್ರತಿ ವರ್ಷ ನಡೆಸುವುದಿಲ್ಲವೆಂಬ ಬಗ್ಗೆ ಸಮಿತಿಯು ಮನವಿಗಳನ್ನು ಸ್ವೀಕರಿಸಿರುತ್ತದೆ. ರಿಕ್ತ ಸ್ಥಾನಗಳನ್ನು ಕ್ರೋಢೀಕರಿಸುವ ಪ್ರಕ್ರಿಯೆಯಿಂದ ಕಾಲ ಹರಣವಾಗಿ ಅಭ್ಯರ್ಥಿಗಳು ವಯೋಮಿತಿಯನ್ನು ಮೀರುವ ಸಮಸ್ಯೆಯನ್ನು ಸಮಿತಿಯು ಗಮನಿಸಿರುತ್ತದೆ. ಇದರ ಜೊತೆಗೆ ಒಂದು ನಿಗದಿತ ಸಾಲಿನಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಮುಂಬಡ್ತಿಗೆ ಅರ್ಹರಾದರೂ ಮುಂಬಡ್ತಿ ಹೊಂದಲು ಸಾಕಷ್ಟು ಹುದ್ದೆಗಳು ಲಭ್ಯವಾಗದಿರುವ ಸಾಧ್ಯತೆ

ಇರುತ್ತದೆ. ಬೇರೆ ಮಾತಿನಲ್ಲಿ ಹೇಳುವುದಾದರೆ, ರಿಕ್ತ ಸ್ಥಾನಗಳನ್ನು ಕ್ರೋಢೀಕರಿಸಿ ಆಯ್ಕೆ ಮಾಡುವುದರಿಂದ ಒಂದು ಸಾಲಿನಲ್ಲಿ ಆಯ್ಕೆಯಾದ ಪಟ್ಟಿಯಲ್ಲಿ ಕೊನೆಯಲ್ಲಿರುವ ಅರ್ಹರಾದ ಅಭ್ಯರ್ಥಿಗಳು ಮುಂಬಡ್ತಿ ಸಿಗದೆ ಸ್ಥಗಿತವಾಗುವ ಸಾಧ್ಯತೆ ಇರುತ್ತದೆ.

(42) ಗೆಜೆಟೆಡ್ ಪ್ರೊಬೆಷನರುಗಳ ಪರೀಕ್ಷೆಯಲ್ಲಿ ಅಭ್ಯರ್ಥಿಗಳ ಅಂತಿಮ ಅರ್ಹತಾ ಪಟ್ಟಿಯನ್ನು ಪ್ರಕಟಿಸುವಲ್ಲಿ ಅಸಾಧಾರಣ ವಿಳಂಬವಾಗಿರುವ ಅಂಶವನ್ನು ಸಮಿತಿಯು ಗಮನಿಸಿರುತ್ತದೆ. ಈ ಕೆಳಕಂಡ ಅಂಶಗಳು ಉಂಟಾಗಿರುವ ವಿಳಂಬವನ್ನು ವಿವರಿಸುತ್ತವೆ :-

(1)ಗೆಜೆಟೆಡ್ ಪ್ರೊಬೆಷನರುಗಳ ಪರೀಕ್ಷೆ (1998) (ಕರ್ನಾಟಕ ಲೋಕಸೇವಾ ಆಯೋಗವು 2006ರಲ್ಲಿ ಅಧಿಸೂಚಿಸಿದ ಅಂತಿಮ ಅರ್ಹತಾ ಪಟ್ಟಿ)

(2)ಗೆಜೆಟೆಡ್ ಪ್ರೊಬೆಷನರುಗಳ ಪರೀಕ್ಷೆ (1999) (ಕರ್ನಾಟಕ ಲೋಕಸೇವಾ ಆಯೋಗವು 2005ರಲ್ಲಿ ಅಧಿಸೂಚಿಸಿದ ಅಂತಿಮ ಅರ್ಹತಾ ಪಟ್ಟಿ)

(3)ಗೆಜೆಟೆಡ್ ಪ್ರೊಬೆಷನರುಗಳ ಪರೀಕ್ಷೆ (2002) (ಕರ್ನಾಟಕ ಲೋಕಸೇವಾ ಆಯೋಗವು 2006ರಲ್ಲಿ ಅಧಿಸೂಚಿಸಿದ ಅಂತಿಮ ಅರ್ಹತಾ ಪಟ್ಟಿ)

(4)ಗೆಜೆಟೆಡ್ ಪ್ರೊಬೆಷನರುಗಳ ಪರೀಕ್ಷೆ (2008) (ಕರ್ನಾಟಕ ಲೋಕಸೇವಾ ಆಯೋಗವು 2010ರಲ್ಲಿ ಅಧಿಸೂಚಿಸಿದ ಅಂತಿಮ ಅರ್ಹತಾ ಪಟ್ಟಿ)

(5)ಗೆಜೆಟೆಡ್ ಪ್ರೊಬೆಷನರುಗಳ ಪರೀಕ್ಷೆ (2010) (ಕರ್ನಾಟಕ ಲೋಕಸೇವಾ ಆಯೋಗವು 2012ರಲ್ಲಿ ಅಧಿಸೂಚಿಸಿದ ಅಂತಿಮ ಅರ್ಹತಾ ಪಟ್ಟಿ)

(43) ಕರ್ನಾಟಕ ಸರ್ಕಾರವು ಪ್ರತಿ ನೇಮಕಾತಿ ವರ್ಷಕ್ಕೆ ಸಂಬಂಧಿಸಿದಂತೆ, ಹಿಂದಿನ ಕ್ಯಾಲೆಂಡರ್ ವರ್ಷದ ಅಂತ್ಯದಲ್ಲಿ ಹುದ್ದೆಗಳ / ಸೇವೆಗಳ ನೇಮಕಾತಿಗಾಗಿ ಕೋರಿಕೆಗಳನ್ನು ಸಲ್ಲಿಸತಕ್ಕದ್ದು ಮತ್ತು ಪ್ರತಿ ನೇಮಕಾತಿ ವರ್ಷದ ಜನವರಿ ಅಥವಾ ಫೆಬ್ರವರಿ ತಿಂಗಳಿನಲ್ಲಿ ಗೆಜೆಟೆಡ್ ಪ್ರೊಬೆಷನರುಗಳ ಪರೀಕ್ಷೆ ಮತ್ತು ಗ್ರೂಪ್-ಸಿ ಹುದ್ದೆಗಳ ನೇಮಕಾತಿಗೆ ಸಂಬಂಧಿಸಿದಂತೆ ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಅಧಿಸೂಚನೆಯನ್ನು ಹೊರಡಿಸತಕ್ಕದ್ದೆಂದು ಸಮಿತಿಯು ಶಿಫಾರಸ್ಸು ಮಾಡುತ್ತದೆ.

(44) ಕೇಂದ್ರ ಸರ್ಕಾರದಲ್ಲಿ – ಹೆಚ್ಚಿನ ಸಿವಿಲ್ ಸೇವಾ ಹುದ್ದೆಗಳಿದ್ದು – ಕೇಂದ್ರ ಲೋಕಸೇವಾ ಆಯೋಗವು ಗ್ರೂಪ್-ಎ ಮತ್ತು ಗ್ರೂಪ್-ಬಿ ಹುದ್ದೆಗಳ ನೇಮಕಾತಿಗೆ ಪ್ರತಿ ವರ್ಷ ನಡೆಸುವ ಸಿವಿಲ್ ಸೇವಾ ಪರೀಕ್ಷೆಗಳಿಗೆ ಕೋರಿಕೆಯನ್ನು ಸಲ್ಲಿಸಲು ಸಾಧ್ಯವಾಗುವುದಾದಲ್ಲಿ, ಕರ್ನಾಟಕ ಸರ್ಕಾರವು ತನ್ನ ಆಡಳಿತ ನಿಯಂತ್ರಣದಲ್ಲಿ ಬರುವ

ಹುದ್ದೆಗಳು ಮತ್ತು ಸೇವೆಗಳಿಗೆ ಸಂಬಂಧಿಸಿದಂತೆ ನೇಮಕಾತಿ ಮಾಡಲು ಕೋರಿಕೆ ಸಲ್ಲಿಸದೇ ಇರುವುದಕ್ಕೆ ಎದ್ದು ಕಾಣುವ ಕಾರಣಗಳು ಕಂಡುಬರುವುದಿಲ್ಲ.

(45) ಕರ್ನಾಟಕ ಲೋಕಸೇವಾ ಆಯೋಗ (ಪ್ರಕಾರ್ಯಗಳು) ನಿಯಮಗಳು, 1973ರ ಸಂಬಂಧಿಸಿದ ನಿಯಮಗಳಲ್ಲಿ, ಮುಖ್ಯ ಲಿಖಿತ ಪರೀಕ್ಷೆಯಲ್ಲಿ ಯಶಸ್ವಿಯಾದ ಅಭ್ಯರ್ಥಿಗಳು ಗಳಿಸಿದ ಒಟ್ಟು ಅಂಕಗಳನ್ನು ಸೂಚನಾ ಫಲಕದಲ್ಲಿ ಮತ್ತು ಅದರ ಜಾಲತಾಣದಲ್ಲಿ ಪ್ರಕಟಿಸುವುದು ಕರ್ನಾಟಕ ಲೋಕಸೇವಾ ಆಯೋಗಕ್ಕೆ ಕಡ್ಡಾಯವಾಗಿರುವುದಕ್ಕೆ ಸಂಬಂಧಿಸಿದಂತೆ ಸಮಿತಿಯು ಹಲವು ಮನವಿಗಳನ್ನು ಸ್ವೀಕರಿಸಿರುತ್ತದೆ. ಕರ್ನಾಟಕ ಸರ್ಕಾರದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ದಿನಾಂಕ 26.9.1978ರ ಅಧಿಸೂಚನೆಯಲ್ಲಿ ಮೇಲ್ಕಂಡ 1973ರ ನಿಯಮಗಳಿಗೆ ತಿದ್ದುಪಡಿ ಮಾಡಿ ಈ ಆಸ್ಪದವನ್ನು ಸೇರಿಸಲಾಗಿರುತ್ತದೆ.

(46) 1973ರ ನಿಯಮಗಳಲ್ಲಿ ನಿಗದಿಪಡಿಸಿರುವ ಮೇಲ್ಕಂಡ ಷರತ್ತು ಮುಖ್ಯ ಲಿಖಿತ ಪರೀಕ್ಷೆಯಲ್ಲಿ ಗಳಿಸಿರುವ ಒಟ್ಟು ಅಂಕಗಳ ಆಧಾರದ ಮೇಲೆ ಯಶಸ್ವಿಯಾದ ಅಭ್ಯರ್ಥಿಗಳು ವ್ಯಕ್ತಿತ್ವ ಪರೀಕ್ಷೆಯಲ್ಲಿನ ಸಾಧ್ಯತೆಯನ್ನು ತಿಳಿದುಕೊಳ್ಳಬಹುದಾಗಿದ್ದು ಅರ್ಹತೆ ಆಧಾರದ ಮೇಲೆ ನಡೆಸುವ ಆಯ್ಕೆ ಪ್ರಕ್ರಿಯೆಗೆ ಭೇದ್ಯವಾದ ಒತ್ತಡ ಉಂಟು ಮಾಡುವ ಅಂಶವಾಗುತ್ತದೆ ಎಂಬ ಸಾಕ್ಷ್ಯವನ್ನು ಸಮಿತಿಯು ಸ್ವೀಕರಿಸಿರುತ್ತದೆ. ಈ ವಿಧಾನದಿಂದ ಲಿಖಿತ ಪರೀಕ್ಷೆಯಲ್ಲಿ ಹೆಚ್ಚು ಅಂಕಗಳನ್ನು ಗಳಿಸಿದ ಅಭ್ಯರ್ಥಿಗೆ ಲೋಕಸೇವಾ ಆಯೋಗದ ಸದಸ್ಯರುಗಳನ್ನು ಭೇಟಿ ಮಾಡಿ ವ್ಯಕ್ತಿತ್ವ ಪರೀಕ್ಷೆಯಲ್ಲಿ ಹೆಚ್ಚು ಅಂಕಗಳನ್ನು ಪಡೆಯಲು ಮತ್ತು ಕರ್ನಾಟಕ ಆಡಳಿತ ಸೇವೆಯೂ ಸೇರಿದಂತೆ ಗೌರವಾನ್ವಿತ ಹುದ್ದೆಗಳಿಗೆ ನೇಮಕಾತಿ ಹೊಂದಲು ಪ್ರೇರಣೆ ಉಂಟು ಮಾಡುತ್ತದೆ.

(47) ಈ ಪದ್ಧತಿಯು ಇತರ ಯಾವುದೇ ರಾಜ್ಯದ ಲೋಕಸೇವಾ ಆಯೋಗದಲ್ಲಿ ಅಸ್ತಿತ್ವದಲ್ಲಿ ಇರುವುದಿಲ್ಲವೆಂಬ ಅಂಶವನ್ನು ದಾಖಲಿಸಲು ಸಮಿತಿಯು ಇಚ್ಛಿಸುತ್ತದೆ. ಕೇಂದ್ರ ಲೋಕಸೇವಾ ಆಯೋಗದಲ್ಲಿ ಮುಖ್ಯ ಲಿಖಿತ ಪರೀಕ್ಷೆಯಲ್ಲಿನ ಅಂಕಗಳನ್ನು, ಸಿವಿಲ್ ಸೇವಾ ಪರೀಕ್ಷೆಯ ಅಂತಿಮ ಅರ್ಹತಾ ಪಟ್ಟಿಯನ್ನು ಅಧಿಸೂಚಿಸುವವರೆಗೂ ಗೌಪ್ಯವಾಗಿಡಲಾಗುತ್ತದೆ. ಕೇಂದ್ರ ಲೋಕಸೇವಾ ಆಯೋಗದ ಅಧ್ಯಕ್ಷರು ಮತ್ತು ಸದಸ್ಯರುಗಳಿಗೂ ಅಭ್ಯರ್ಥಿಗಳು ಗಳಿಸಿರುವ ಅಂಕಗಳನ್ನು ತಿಳಿಸಲ್ಪಡುವುದಿಲ್ಲ ಮತ್ತು ಅವರುಗಳು ವ್ಯಕ್ತಿತ್ವ ಪರೀಕ್ಷಾ ಮಂಡಳಿಯ ಅಧ್ಯಕ್ಷರಾಗಿ ವ್ಯಕ್ತಿತ್ವ ಸಂದರ್ಶನ ನಡೆಸುವಾಗಲೂ ಅಂಕಗಳ ವಿವರಗಳು ಅವರಿಗೆ ತಿಳಿದಿರುವುದಿಲ್ಲ.

(48) ಕರ್ನಾಟಕ ಲೋಕಸೇವಾ ಆಯೋಗ (ಪ್ರಕಾರ್ಯಗಳು) ನಿಯಮಗಳು, 1973ಕ್ಕೆ ಹಿಂದೆ ಉಲ್ಲೇಖಿಸಿದ ದಿನಾಂಕ 26.9.1978ರ ಅಧಿಸೂಚನೆಯನ್ವಯ ಮಾಡಿದ ತಿದ್ದುಪಡಿಯನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ರದ್ದುಪಡಿಸಲು ಸಮಿತಿಯು ಶಿಫಾರಸ್ಸು ಮಾಡುತ್ತದೆ.

(49) ಕರ್ನಾಟಕ ಲೋಕಸೇವಾ ಆಯೋಗವು ಮುಖ್ಯ ಲಿಖಿತ ಪರೀಕ್ಷೆಯ ಆಧಾರದ ಮೇಲೆ ಅಭ್ಯರ್ಥಿಗಳ ಕಿರು ಪಟ್ಟಿಯನ್ನು ತಯಾರಿಸಿ ಕರ್ನಾಟಕ ಲೋಕಸೇವಾ ಆಯೋಗದ

ಅಧ್ಯಕ್ಷರು ಮತ್ತು ಸದಸ್ಯರುಗಳನ್ನು ಒಳಗೊಂಡ ವ್ಯಕ್ತಿತ್ವ ಪರೀಕ್ಷಾ ಮಂಡಳಿಯು ಗ್ರೂಪ್–ಎ ವೃಂದದ 12 ಸೇವೆಗಳಿಗೆ ಮತ್ತು ಗ್ರೂಪ್–ಬಿ ವೃಂದದ 14 ಸೇವೆಗಳಿಗೆ ವ್ಯಕ್ತಿತ್ವ ಪರೀಕ್ಷೆ ನಡೆಸುವುದನ್ನು ಸಮಿತಿಯು ಗಮನಿಸಿರುತ್ತದೆ. ಈ ಉದ್ದೇಶಕ್ಕಾಗಿ 2013ರ ಏಪ್ರಿಲ್ – ಮೇ ತಿಂಗಳುಗಳಲ್ಲಿ ನಡೆದ ವ್ಯಕ್ತಿತ್ವ ಪರೀಕ್ಷೆಗಳಲ್ಲಿ ಅಧ್ಯಕ್ಷರು ಮತ್ತು ಸದಸ್ಯರುಗಳನ್ನು ಸಮಾನುಪಾತದಲ್ಲಿ ವಿಂಗಡಿಸಿದ ಎರಡು ವ್ಯಕ್ತಿತ್ವ ಪರೀಕ್ಷಾ ಮಂಡಳಿಗಳನ್ನು ರಚಿಸಲಾಗಿತ್ತು. ಕರ್ನಾಟಕ ಲೋಕಸೇವಾ ಆಯೋಗವು ರಚಿಸಿದ ಈ ವ್ಯಕ್ತಿತ್ವ ಪರೀಕ್ಷಾ ಮಂಡಳಿಗಳು ಬಾಹ್ಯ ತಜ್ಞರನ್ನು ಸಲಹೆಗಾರರನ್ನಾಗಿ ಹೊಂದದೇ ಇರುವುದು ವ್ಯಕ್ತಿತ್ವ ಪರೀಕ್ಷಾ ಮಂಡಳಿಗಳ ಸದ್ಭಾವನೆಯ ಬಗ್ಗೆ ಅನುಮಾನ ಮತ್ತು ಊಹಾಪೋಹಗಳಿಗೆ ಎಡೆಮಾಡಿಕೊಡುವ ಭೂಮಿಕೆಯಾಗಿದೆ ಎಂದು ಸಮಿತಿಯು ಅಭಿಪ್ರಾಯ ಪಟ್ಟಿರುತ್ತದೆ.

(50) ವ್ಯಕ್ತಿತ್ವ ಪರೀಕ್ಷಾ ಮಂಡಳಿಯು ಆಯೋಗದ ಅಧ್ಯಕ್ಷರು ಅಥವಾ ಹಿರಿಯ ಸದಸ್ಯರ ಅಧ್ಯಕ್ಷತೆಯಲ್ಲಿ ಮತ್ತು ನಾಲ್ಕು ಸಲಹೆಗಾರರನ್ನು – ಸಾಧ್ಯವಾದಷ್ಟು ಮಟ್ಟಿಗೆ ಕರ್ನಾಟಕ ರಾಜ್ಯದ ಹೊರಗಿನವರನ್ನು ಒಳಗೊಂಡಿರಕ್ಕದ್ದೆಂದು ಸಮಿತಿಯು ಶಿಫಾರಸ್ಸು ಮಾಡುತ್ತದೆ. ಅಖಿಲ ಭಾರತೀಯ ಸೇವೆಯಿಂದ ನಿವೃತ್ತರಾದ ಸದಸ್ಯರಿಂದ, ಕೇಂದ್ರ ಸಿವಿಲ್ ಸೇವೆಗಳಲ್ಲಿನ ಗ್ರೂಪ್–ಎ ಸೇವೆಗಳಿಂದ ನಿವೃತ್ತರಾದವರನ್ನು ಸಲಹೆಗಾರರನ್ನಾಗಿ ಪರಿಗಣಿಸತಕ್ಕದ್ದು. ಈ ಸಲಹೆಗಾರರು ಉನ್ನತ ಆಡಳಿತ ಶ್ರೇಣಿಯ ಹುದ್ದೆಗಳಿಂದ ನಿವೃತ್ತರಾಗಿರಬೇಕು (ಅಂದರೆ, ಗೆಜೆಟೆಡ್ ಪ್ರೊಬೆಷನರುಗಳ ಹುದ್ದೆಗಳಿಗೆ ವ್ಯಕ್ತಿತ್ವ ಪರೀಕ್ಷೆ ನಡೆಸಲು ಕರ್ನಾಟಕ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಅಥವಾ ಸಮಾನಾಂತರ ಹುದ್ದೆ ಹೊಂದಿ ನಿವೃತ್ತರಾದ ಅಧಿಕಾರಿ ಮತ್ತು ಇತರ ಹುದ್ದೆಗಳಿಗೆ ಕರ್ನಾಟಕ ಸರ್ಕಾರದ ಕಾರ್ಯದರ್ಶಿ ಹುದ್ದೆ ಅಥವಾ ಸಮಾನಾಂತರ ಹುದ್ದೆ ಹೊಂದಿ ನಿವೃತ್ತರಾದ ಅಧಿಕಾರಿ). ನಾಲ್ಕು ಸಲಹೆಗಾರರು – ಸಾಧ್ಯವಾದಷ್ಟು ಮಟ್ಟಿಗೆ ಹೆಚ್ಚಿನ ಸಂಖ್ಯೆಯಲ್ಲಿ ಕರ್ನಾಟಕ ರಾಜ್ಯದ ಹೊರಗಿನವರಾಗಿರಬೇಕು – ಕೇಂದ್ರ ವಿಶ್ವವಿದ್ಯಾಲಯಗಳ ವಿಶ್ರಾಂತ ಉಪಕುಲಪತಿಗಳಲ್ಲಿ ಆಡಳಿತದಲ್ಲಿ ಹೆಸರುವಾಸಿಯಾದ ಕೆಲವರು – ಭಾರತೀಯ ತಾಂತ್ರಿಕ ಸಂಸ್ಥೆಗಳ ನಿವೃತ್ತ ಪ್ರಾಧ್ಯಾಪಕರುಗಳು – ಭಾರತೀಯ ವ್ಯವಸ್ಥಾಪನ ಸಂಸ್ಥೆಗಳಲ್ಲಿನ ನಿವೃತ್ತ ಪ್ರಾಧ್ಯಾಪಕರುಗಳು – ಭಾರತದ ಸಾರ್ವಜನಿಕ ಆಡಳಿತ ಸಂಸ್ಥೆಯ ನಿವೃತ್ತ ಪ್ರಾಧ್ಯಾಪಕರು, ನವದೆಹಲಿ – ರಾಷ್ಟ್ರೀಯ ಆಡಳಿತ ಅಕಾಡೆಮಿಯ ನಿವೃತ್ತ ಪ್ರಾಧ್ಯಾಪಕರು, ಮುಸ್ಸೋರಿ ಅಥವಾ ದೇಶದ ವಿವಿಧ ಭಾಗಗಳಲ್ಲಿ ಸ್ಥಾಪಿತವಾಗಿರುವ ಭಾರತ ಸರ್ಕಾರದ ತರಬೇತಿ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಿ ನಿವೃತ್ತರಾದ ಪ್ರಾಧ್ಯಾಪಕರುಗಳು. ವ್ಯಕ್ತಿತ್ವ ಪರೀಕ್ಷಾ ಮಂಡಳಿಗೆ ಸಲಹೆಗಾರರಾಗಿ ಆಹ್ವಾನಿಸಲ್ಪಡುವ ತಜ್ಞರುಗಳಲ್ಲಿ ಕೆಲವರು ಸಾಮಾನ್ಯವಾಗಿ ಕನ್ನಡ ಭಾಷೆಯನ್ನು ಬಲ್ಲವರಾಗಿರಬೇಕು – ಕಾರಣ, ಇದರಿಂದ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳ ವ್ಯಕ್ತಿತ್ವವನ್ನು ಸೂಕ್ತವಾಗಿ ನಿರ್ಧರಿಸಲು ಸಹಾಯಕವಾಗುವುದು. ಅವಶ್ಯಕತೆಯಿದ್ದಲ್ಲಿ, ಕರ್ನಾಟಕ ರಾಜ್ಯದ ಸಲಹೆಗಾರರು ಪ್ರಶ್ನೆಗಳನ್ನು ಕನ್ನಡದಿಂದ ಆಂಗ್ಲ

ಭಾಷೆಗೆ ಮತ್ತು ಆಂಗ್ಲ ಭಾಷೆಯಿಂದ ಕನ್ನಡಕ್ಕೆ ಭಾಷಾಂತರಿಸುವುದರ ಮುಖಾಂತರ ಕನ್ನಡ ಭಾಷೆ ಬಾರದ ಸಲಹೆಗಾರರಿಗೆ ವ್ಯಕ್ತಿತ್ವ ಪರೀಕ್ಷೆಯಲ್ಲಿ ಸಹಾಯಕವಾಗುವಂತೆ ಮಾಡುವುದು.

(51) ವ್ಯಕ್ತಿತ್ವ ಪರೀಕ್ಷಾ ಮಂಡಳಿಯು ಅಭ್ಯರ್ಥಿಗಳ ವೈಯಕ್ತಿಕ ಗುಣಮಟ್ಟ ಮತ್ತು ಸಿವಿಲ್ ಸೇವೆಗಳಿಗೆ ಸೂಕ್ತರೇ ಎಂಬ ಬಗ್ಗೆ ಅಂದರೆ ನಾಯಕತ್ವದ ಗುಣ, ತೀರ್ಮಾನ ತೆಗೆದುಕೊಳ್ಳುವ ಸಾಮರ್ಥ್ಯ, ವಿವಿಧ ಮತ್ತು ಆಳವಾದ ಆಸಕ್ತಿ, ಒಂದು ಗುಂಪಿನಲ್ಲಿ ಕೆಲಸ ಮಾಡುವ ಸಾಮರ್ಥ್ಯ ಮತ್ತು ಪ್ರೇರಣಾ ಕೌಶಲ್ಯ ಹಾಗೂ ತಾರ್ಕಿಕ ಯೋಚನಾ ಸಾಮರ್ಥ್ಯಗಳ ಬಗ್ಗೆ ನಿರ್ಧರಿಸುತ್ತದೆ.

(52) ಕೇಂದ್ರ ಲೋಕಸೇವಾ ಆಯೋಗವು ಸಿವಿಲ್ ಸೇವಾ ಪರೀಕ್ಷೆಗಳಿಗೆ ನಡೆಸುವ ಪರೀಕ್ಷೆಗೆ ಸಂಬಂಧಿಸಿದಂತೆ ಅಧಿಸೂಚಿಸುವ ವಿವರಣಾ ಪತ್ರಿಕೆಯಲ್ಲಿ ವ್ಯಕ್ತಿತ್ವ ಪರೀಕ್ಷೆ ನಡೆಸುವ ಬಗ್ಗೆ ಮಾರ್ಗಸೂಚನೆಗಳನ್ನು ನೀಡಿರುವಂತೆ, ಗೆಜೆಟೆಡ್ ಪ್ರೊಬೆಷನರುಗಳ ಪರೀಕ್ಷೆಗಳಿಗೆ ಸಂಬಂಧಿಸಿದಂತೆ ಅಂತಹ ಮಾರ್ಗಸೂಚನೆಗಳನ್ನು ಅಳವಡಿಸುವುದು ಸೂಕ್ತವಾಗಿರುತ್ತದೆ. ಕೇಂದ್ರ ಲೋಕಸೇವಾ ಆಯೋಗವು ಸಿವಿಲ್ ಸೇವಾ ಪರೀಕ್ಷೆಗಳಲ್ಲಿ ವ್ಯಕ್ತಿತ್ವ ಪರೀಕ್ಷೆ ನಡೆಸಲು ವಿನ್ಯಾಸಗೊಳಿಸಿರುವ ಮಾರ್ಗಸೂಚಿಗಳು ಒಬ್ಬ ಸಿವಿಲ್ ಸೇವಾ ನೌಕರನಾಗಲು ಅವಶ್ಯಕವಾಗಿ ಬೇಕಾದ ವೈಯಕ್ತಿಕ ಗುಣಗಳನ್ನು ವ್ಯಾಪಕವಾಗಿ ನಿರ್ಧರಿಸಲು ಸಹಾಯಕವಾಗುವಂತೆ ರಚಿತವಾಗಿರುತ್ತವೆ. ಅಭ್ಯರ್ಥಿಗಳ ಈ ವೈಯಕ್ತಿಕ ಗುಣಗಳು ಕರ್ನಾಟಕ ರಾಜ್ಯದ ಸಾಮಾನ್ಯ ಸೇವೆಗಳಿಗೆ ಅವಶ್ಯಕವಾಗಿರುತ್ತವೆ ಎಂಬುದು ಅಂಗೀಕಾರಾರ್ಹವಾದ ವಿಷಯವಾಗಿರುತ್ತದೆ.

(53) ಅಭ್ಯರ್ಥಿಗಳ ಅರ್ಹತೆಯನ್ನು ನಿರ್ಧರಿಸುವಾಗ ಸಾಧ್ಯವಾದಷ್ಟು ಮಟ್ಟಿಗೆ ವೈಯಕ್ತಿಕತೆಯನ್ನು ತೊಡೆದುಹಾಕುವ ದೃಷ್ಟಿಯಿಂದ ಕರ್ನಾಟಕ ಲೋಕಸೇವಾ ಆಯೋಗವು ವ್ಯಕ್ತಿತ್ವ ಪರೀಕ್ಷಾ ಮಂಡಳಿಗಳ ಅಧ್ಯಕ್ಷರು ಮತ್ತು ಸಲಹೆಗಾರರುಗಳಿಗೆ ಒಂದು ಟಿಪ್ಪಣಿಯನ್ನು ಸುತ್ತಿಸುವುದರ ಮುಖಾಂತರ ವ್ಯಕ್ತಿತ್ವ ಪರೀಕ್ಷೆಯಲ್ಲಿ ಅಭ್ಯರ್ಥಿಗಳ ಪ್ರದರ್ಶನದ ಆಧಾರದ ಮೇಲೆ ಅವರುಗಳನ್ನು ಅಸಾಧಾರಣ (ಶೇ: 70 ಮತ್ತು ಅದಕ್ಕಿಂತ ಹೆಚ್ಚು); ಅತ್ಯುತ್ತಮ (ಶೇ: 60–70); ಉತ್ತಮ (ಶೇ: 50–60); ಸಾಧಾರಣ (ಶೇ: 40–50); ಮತ್ತು ಸಾಧಾರಣಕ್ಕಿಂತ ಕಡಿಮೆ (ಶೇ: 40 ಕ್ಕಿಂತ ಕಡಿಮೆ); ಎಂದು ವರ್ಗೀಕರಿಸಬೇಕು.

(54) ವ್ಯಕ್ತಿತ್ವ ಪರೀಕ್ಷಾ ಮಂಡಳಿಯಿಂದ ವ್ಯಕ್ತಿತ್ವ ಪರೀಕ್ಷೆಗೆ ಒಳಗಾದ ಅಭ್ಯರ್ಥಿಯು, ವ್ಯಕ್ತಿತ್ವ ಪರೀಕ್ಷೆಯ ಸ್ಥಳದಿಂದ ನಿರ್ಗಮಿಸಿದ ನಂತರ, ವ್ಯಕ್ತಿತ್ವ ಪರೀಕ್ಷಾ ಮಂಡಳಿಯ ಅಧ್ಯಕ್ಷರು ಪ್ರತಿಯೊಬ್ಬ 4 ಸಲಹೆಗಾರರುಗಳನ್ನು ವ್ಯಕ್ತಿತ್ವ ಪರೀಕ್ಷೆಯಲ್ಲಿ ಅಭ್ಯರ್ಥಿಯು ನೀಡಿದ ಪ್ರದರ್ಶನದ ಬಗ್ಗೆ ಮತ್ತು ಶ್ರೇಣಿ ನೀಡುವ ಬಗ್ಗೆ ಅವರುಗಳ ಅಭಿಪ್ರಾಯವನ್ನು ಪಡೆಯತಕ್ಕದ್ದು. ಸಲಹೆಗಾರರು ಅಭ್ಯರ್ಥಿಯು ವ್ಯಕ್ತಿತ್ವ ಪರೀಕ್ಷೆಯಲ್ಲಿ ಗಳಿಸಬಹುದಾದ ಅಂಕಗಳ ಬಗ್ಗೆ ಮಂಡಳಿಯ ಅಧ್ಯಕ್ಷರೊಡನೆ ಚರ್ಚಿಸತಕ್ಕದ್ದು. ವ್ಯಕ್ತಿತ್ವ ಪರೀಕ್ಷೆಯಲ್ಲಿ ಅಭ್ಯರ್ಥಿಗೆ ಈ ಕೆಳಕಂಡ ಸೂತ್ರದನ್ವಯ ಅಂಕಗಳನ್ನು ನೀಡಬಹುದು :– ಮಂಡಳಿಯ ಅಧ್ಯಕ್ಷರು ಮತ್ತು 4 ಸಲಹೆಗಾರರು

ವ್ಯಕ್ತಿತ್ವ ಪರೀಕ್ಷೆಗೆ ನಿಗಧಿಪಡಿಸಿದ ಒಟ್ಟು ಅಂಕಗಳಲ್ಲಿ ಪ್ರತ್ಯೇಕವಾಗಿ ಅಭ್ಯರ್ಥಿಗೆ ಅಂಕಗಳನ್ನು ಹಂಚಿಕೆ ಮಾಡುವುದು; ವ್ಯಕ್ತಿತ್ವ ಪರೀಕ್ಷೆಯಲ್ಲಿ ಅಭ್ಯರ್ಥಿಯು ಗಳಿಸುವ ಒಟ್ಟು ಅಂಕಗಳನ್ನು ಭಾಗಿಸುವುದ ಮುಖಾಂತರ ಸರಾಸರಿ ಆಧಾರದ ಮೇಲೆ ನಿರ್ಧರಿಸತಕ್ಕದ್ದು(ಮಂಡಳಿಯಲ್ಲಿನ ಸದಸ್ಯರು ಒಂದು ಕಾಗದದಲ್ಲಿ ದಾಖಲಿಸಿದ ಅಂಕಗಳನ್ನು ಕೂಡುವುದರ ಮುಖಾಂತರ). ಆ ನಂತರ ಶೇಖಡಾವಾರು ಪಥ ಬದಲಾವಣೆ(ಗರಿಷ್ಠ) ಪ್ರತಿಯೊಬ್ಬ ಸದಸ್ಯರು ನೀಡಿದ ಸರಾಸರಿ ಅಂಕಗಳನ್ನು ಲೆಕ್ಕ ಹಾಕಿ ಕೋಷ್ಠಕಪಡಿಸತಕ್ಕದ್ದು. ವ್ಯಕ್ತಿತ್ವ ಪರೀಕ್ಷಾ ಮಂಡಳಿಯಲ್ಲಿನ ಇಬ್ಬರು ಸದಸ್ಯರುಗಳು ಅಭ್ಯರ್ಥಿಗೆ ನೀಡಿರುವ ಅಂಕಗಳು ಸರಾಸರಿ ಅಂಕಗಳಿಗಿಂತ ಹೆಚ್ಚಿನ ಪಥ ಬದಲಾವಣೆಯಾದಲ್ಲಿ, ಆ ಅಂಕಗಳನ್ನು ವ್ಯಕ್ತಿತ್ವ ಪರೀಕ್ಷೆಯಲ್ಲಿ ಅಭ್ಯರ್ಥಿಯ ಅಂತಿಮ ಅಂಕವನ್ನು ಲೆಕ್ಕ ಹಾಕುವುದಕ್ಕೆ ಪರಿಗಣಿಸುವಂತಿಲ್ಲ. ವ್ಯಕ್ತಿತ್ವ ಪರೀಕ್ಷಾ ಮಂಡಳಿಯಲ್ಲಿನ ಉಳಿದ 3 ಸದಸ್ಯರುಗಳು ನೀಡುವ ಅಂಕಗಳನ್ನು ಗಣನೆಗೆ ತೆಗೆದುಕೊಂಡು ಅಭ್ಯರ್ಥಿಯ ಸರಾಸರಿ ಅಂಕಗಳನ್ನು ಲೆಕ್ಕಹಾಕತಕ್ಕದ್ದು. ಈ ಸರಾಸರಿ ಅಂಕವು ಅಭ್ಯರ್ಥಿಯು ವ್ಯಕ್ತಿತ್ವ ಪರೀಕ್ಷೆಯಲ್ಲಿ ಗಳಿಸಿದ ಅಧಿಕೃತ ಅಂಕಗಳಾಗಿರುತ್ತವೆ. ವ್ಯಕ್ತಿತ್ವ ಮಂಡಳಿಯು ವ್ಯಕ್ತಿತ್ವ ಪರೀಕ್ಷೆಯಲ್ಲಿ ಒಬ್ಬ ಅಭ್ಯರ್ಥಿಗೆ ನೀಡುವ ಅಂಕಗಳನ್ನು ನಿರ್ಧರಿಸಬಹುದಾದ ಕಾರ್ಯವಿಧಾನವನ್ನು ವಿವರಿಸುವ ಟಿಪ್ಪಣಿಯನ್ನು ಇದರೊಂದಿಗೆ ಲಗತ್ತಿಸಲಾಗಿದೆ.

(55) ಈಗಿರುವಂತೆ ಪ್ರತಿ ಒಂದು ರಿಕ್ತ ಸ್ಥಾನಕ್ಕೆ 3 ಅಭ್ಯರ್ಥಿಗಳ ಅನುಪಾತದಲ್ಲಿ ವ್ಯಕ್ತಿತ್ವ ಪರೀಕ್ಷೆಗೆ ಅಭ್ಯರ್ಥಿಗಳನ್ನು ಕರೆಯತಕ್ಕದ್ದು.

(56) ಕರ್ನಾಟಕ ಲೋಕಸೇವಾ ಆಯೋಗದ ಆವರಣದಲ್ಲಿ ವ್ಯಕ್ತಿತ್ವ ಪರೀಕ್ಷೆಯ ದಿನಾಂಕದಂದು, ಅದನ್ನು ಪ್ರಾರಂಭಿಸುವ ಮೊದಲು ಆಯೋಗದ ಅಧ್ಯಕ್ಷರು ವ್ಯಕ್ತಿತ್ವ ಪರೀಕ್ಷಾ ಮಂಡಳಿಯಲ್ಲಿ ಭಾಗವಹಿಸುವ ಸಲಹೆಗಾರರು ಮತ್ತು ಅಧ್ಯಕ್ಷರಾಗಿ ಕಾರ್ಯನಿರ್ವಹಿಸುವ ಸದಸ್ಯರುಗಳ ಸಭೆಯನ್ನು ನಡೆಸತಕ್ಕದ್ದು. ಆಯೋಗದ ಅಧ್ಯಕ್ಷರು, ಪರೀಕ್ಷೆ ನಡೆಸಲು ಹೊರಡಿಸಿದ ಅಧಿಸೂಚನೆಯ ಜೊತೆಗೆ ಹೊರಡಿಸಿದ ವಿವರಣಾ ಪತ್ರದಲ್ಲಿ ನೀಡಿದ ಮಾರ್ಗಸೂಚನೆಗಳ ಹಿನ್ನೆಲೆಯಲ್ಲಿ, ವ್ಯಕ್ತಿತ್ವ ಪರೀಕ್ಷೆ ನಡೆಸುವಾಗ ಅಭ್ಯರ್ಥಿಯಲ್ಲಿ ಗಮನಿಸಬೇಕಾದ ವಿಶೇಷ ಗುಣಲಕ್ಷಣಗಳ ಬಗ್ಗೆ ವಿವರಿಸುವುದು. ಸಿವಿಲ್ ಸೇವೆಗಳ ಹುದ್ದೆಗಳಿಗೆ ಭಾಗವಹಿಸುವ ಅಭ್ಯರ್ಥಿಯಲ್ಲಿರಬೇಕಾದ ವೈಯಕ್ತಿಕ ಗುಣಗಳನ್ನು ನಿರ್ಧರಿಸಲು ವ್ಯಕ್ತಿತ್ವ ಪರೀಕ್ಷಾ ಮಂಡಳಿಗೆ ಸಹಾಯಕವಾಗುವಂತೆ ಅಭ್ಯರ್ಥಿಗಳಿಗೆ ಜ್ಞಾನಾಧಾರಿತ ಪ್ರಶ್ನೆಗಳನ್ನು ಕೇಳಬಾರದೆಂದು ಅಧ್ಯಕ್ಷರು ಸಲಹೆಗಾರರಿಗೆ ಹಾಗೂ ಕರ್ನಾಟಕ ಲೋಕಸೇವಾ ಆಯೋಗದ ಸದಸ್ಯರಿಗೆ ಸೂಚಿಸಬಹುದು, ಏಕೆಂದರೆ ಲೇಖನಿ ಮತ್ತು ಕಾಗದ ಆಧಾರಿತ ಮುಖ್ಯ ಪರೀಕ್ಷೆಯಲ್ಲಿ ಈ ಗುಣಗಳನ್ನು ಈಗಾಗಲೇ ಪರೀಕ್ಷಿಸಲಾಗಿರುತ್ತದೆ. ವ್ಯಾಪಕವಾಗಿ ಹೇಳುವುದಾದರೆ ಅಭ್ಯರ್ಥಿಗಳಿಗೆ ಕೇಳುವ ಪ್ರಶ್ನೆಗಳು ಆತನ ವೈಯಕ್ತಿಕ ಸಾಮರ್ಥ್ಯಗಳನ್ನು ಹಾಗೂ ನಾಯಕತ್ವ ಗುಣಗಳನ್ನು ಮೌಲ್ಯಮಾಪನ ಮಾಡುವುದಾಗಿರಬೇಕು. ವ್ಯಕ್ತಿತ್ವ ಪರೀಕ್ಷೆಯ ಮೊದಲ ಕೆಲವು ನಿಮಿಷಗಳಲ್ಲಿ ವ್ಯಕ್ತಿತ್ವ ಪರೀಕ್ಷಾ ಮಂಡಳಿಯ ಅಧ್ಯಕ್ಷರು ಅಭ್ಯರ್ಥಿಯು ಹೆದರಿಕೆಯಿಂದ

